# ನೀ ನಡೆವ ದಾರಿಯಲ್ಲಿ

(ಸಾಮಾಜಿಕ ಕಾದಂಬರಿ)

ಎಂ. ವೆಂಕಟಸ್ವಾಮಿ



ಪಾಂಚಜನ್ಯ ಪಬ್ಲಿಕೇಷನ್ಸ್

ನಂ.420/28, 6-7ನೇ ಕ್ರಾಸ್ ನಡುವೆ,

ಅಮರಜ್ಯೋತಿನಗರ, ಬೆಂಗಳೂರು - 560 040.

**"NEE NADEVA DARIYALLI"**- A Social Novel written by **Sri. M. Venkataswami,** No.57A, Sai Lotus Layout, Subramanyapura Post, Bangalore - 61. Published by **Sri. N.P. Vijay** on behalf of **M/s. Panchajanya Publications**, No.420/28, b/w 6th & 7th Cross, Amarjyothinagar, Bangalore-40.

# ನೀ ನಡೆವ ದಾರಿಯಲ್ಲಿ

(ಸಾಮಾಜಿಕ ಕಾದಂಬರಿ)

ಪ್ರಥಮ ಮುದ್ರಣ : **2004**

ಹಕ್ಕುಗಳು : ಲೇಖಕರದು

ಮಾರಾಟದ ಹಕ್ಕುಗಳು : ಪ್ರಕಾಶಕರದು

ಮುಖಚಿತ್ರ : ಪುಂಡಲೀಕ ಕಲ್ಲಿಗನೂರು

ಪ್ರಕಾಶಕರು : ಮೆ : ಪಾಂಚಜನ್ಯ ಪಬ್ಲಿಕೇಷನ್ಸ್
ನಂ.420/28, 6-7ನೇ ಕ್ರಾಸ್ ನಡುವೆ,
ಅಮರಜ್ಯೋತಿನಗರ,
ಬೆಂಗಳೂರು- 560 040.

ಅಕ್ಷರ ಜೋಡಣೆ : ಮಯೂರ ಗ್ರಾಫಿಕ್ಸ್

ಮುದ್ರಕರು : ಜಾಗೃತಿ ಪ್ರಿಂಟರ್ಸ್
ನಂ. 196/1, 2ನೇ ಮುಖ್ಯ ರಸ್ತೆ,
ಹೆಚ್.ವಿ.ಆರ್. ಬಡಾವಣೆ,
ಬೆಂಗಳೂರು -560 079.
ಫೋನ್ : 23583850

ಬೆಲೆ : ರೂ. 95/-

**FIRST EDITION :** 2004 **Pages :** 180 **Rs.** 95.00

# ಪುಟ ತೆರೆಯುವ ಮುನ್ನ

ಉದಯವಾಣಿ ದಿನ ಪತ್ರಿಕೆಯಲ್ಲಿ ದೈನಿಕ ಧಾರಾವಾಹಿಯಾಗಿ 73 ಕಂತುಗಳಲ್ಲಿ ಪ್ರಕಟವಾದ 'ನೀ ನಡೆವ ದಾರಿಯಲ್ಲಿ' ನನ್ನ ಹನ್ನೆರಡನೆಯ ಕೃತಿ ಮತ್ತು ಐದನೆಯ ಕಾದಂಬರಿ. ಪ್ರಸ್ತುತ ಇಂಜಿನಿಯರಿಂಗ್, ವೈದ್ಯಕೀಯ, ಕಾಲೇಜು ಮತ್ತು ವಿಶ್ವವಿದ್ಯಾಲಯಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಹಿಂದೆಂದಿಗಿಂತ ಇಂದು ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಸಿಲುಕಿಕೊಂಡು ಅವರ ಭವಿಷ್ಯ ಡೋಲಾಯಮಾನವಾಗಿದೆ. ಜಾಗತೀಕರಣವೆಂಬ ಕತ್ತಿ ಅವರಿಗೆ ಯೋಚಿಸಲು ಸಹ ಸಮಯ ಕೊಡದೆ ಒಂದು ಕಡೆ ಕ್ರಿಯಾಶೀಲತೆ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ನಿಷ್ಕ್ರಿಯಗೊಳಿಸುತ್ತಿದ್ದರೆ ಇನ್ನೊಂದು ಕಡೆ ಸ್ಪರ್ಧಾತ್ಮಕ ಪ್ರಪಂಚ ನಿರಂತರವಾಗಿ ಅವರ ಯೋಚನೆಗಳನ್ನು ಕ್ಷಣ ಕ್ಷಣಕ್ಕೂ ಬದಲಿಸುತ್ತಾ ಹೋಗುತ್ತಿದೆ. ಒಬ್ಬ ವಿದ್ಯಾರ್ಥಿಯ ಬೌದ್ಧಿಕತೆ ಅಥವಾ ಜ್ಞಾನ ಎನ್ನುವುದು ಈಗ ಒಂದು ಕಂಪನಿಯಲ್ಲಿ ಉದ್ದೆಯನ್ನು ಗಿಟ್ಟಿಸಿಕೊಳ್ಳುವುದು ಅಥವಾ ಹೆಚ್ಚು ಹಣವನ್ನು ಸಂಪಾದಿಸುವುದು ಮಾತ್ರ ಎನ್ನುವ ಮಟ್ಟಕ್ಕೆ ತಲುಪಿದೆ.

ಇದೆಲ್ಲದರ ನಡುವೆ ಇಂದಿನ ವಿದ್ಯಾರ್ಥಿ ಜೀವನ ಹೇಗಿದೆ...? ಅವರ ಆದರ್ಶ, ಆಸೆ-ಆಕಾಂಕ್ಷೆಗಳು, ದುಗುಡ-ದುಮ್ಮಾನ, ಸುಖ-ಸಂತೋಷ, ನಗು-ಹಾಸ್ಯ, ಪ್ರೀತಿ-ಪ್ರೇಮ, ಕುಡಿತ-ಜೂಜು, ಅವರ ಚೇಷ್ಟೆಗಳು ಹೀಗೆ... ಅವರು ತಮ್ಮ ವಿದ್ಯಾರ್ಥಿ ಜೀವನದಲ್ಲಿ ಏನೆಲ್ಲ ಯೋಚಿಸುತ್ತಾರೆ...? ಅವರ ನಡುವಿನ ಸಂಬಂಧಗಳು ಹೇಗಿರುತ್ತವೆ...? ಎನ್ನುವುದರ ಮೇಲೆ ಸ್ವಲ್ಪ ಮಟ್ಟಿಗೆ ಬೆಳಕು ಚೆಲ್ಲಲು ಈ ಕಾದಂಬರಿಯಲ್ಲಿ ಸ್ವಲ್ಪ ಮಟ್ಟಿಗೆ ಪ್ರಯತ್ನಿಸಿದ್ದೇನೆ. ಇಂದಿನ ವಿದ್ಯಾರ್ಥಿಗಳ ಜೀವನಕ್ಕೂ, ಹಿಂದಿನ ವಿದ್ಯಾರ್ಥಿಗಳ ಜೀವನಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಇಂದಿನ ವಿದ್ಯಾರ್ಥಿಗಳ ಜ್ಞಾನದ ಮಟ್ಟ ಹಿಂದಿನ ತಲೆಮಾರುಗಳಿಗಿಂತ ಎಷ್ಟೋ ಪಟ್ಟು ಹೆಚ್ಚು ಎನ್ನುವುದು ನನ್ನ ಭಾವನೆ.

ಇದನ್ನೆಲ್ಲ ತಿಳಿದುಕೊಳ್ಳಲು ನಾನು ಹಲವು ವಿದ್ಯಾರ್ಥಿಗಳನ್ನು ಭೇಟಿಯಾಗಿ ಮಾತನಾಡಿಸಿದೆ. ವಿಶೇಷವಾಗಿ ಎಲೆಕ್ಟ್ರಾನಿಕ್ಸ್ ಇಂಜಿನಿಯರಿಂಗ್ ಓದುತ್ತಿರುವ ನನ್ನ ಮಗ ಎಂ. ವಿ. ಕ್ರಾಂತಿ ಮತ್ತು ಅವನ ಗೆಳೆಯರಿಂದ ಹಲವು ರೀತಿಯ ಮಾಹಿತಿಗಳನ್ನು ಕಲೆಯಾಕಿದೆ. ಶಾಲೆ, ಕಾಲೇಜುಗಳಲ್ಲಿ ವಿದ್ಯಾರ್ಥಿಗಳು ದಿನನಿತ್ಯ ಉಪಯೋಗಿಸುವ ಕೆಲವು ವಿಶೇಷ ಹಾಸ್ಯದ ಪದಗಳನ್ನು ಬರೆದುಕೊಡುವಂತೆ ನನ್ನ ಮಗನಿಗೆ ಹೇಳಿದೆ.

ಅವನು ಕೆಲವು ದಿನಗಳಾದ ಮೇಲೆ ಕಂಪ್ಯೂಟರ್‌ನಲ್ಲಿ ಮುದ್ರಿಸಿದ ಒಂದು ವಿಶೇಷ ಪದಗಳ ಪಟ್ಟಿ ಮತ್ತು ಅವುಗಳಿಗೆ ಅರ್ಥಗಳನ್ನು ತಂದುಕೊಟ್ಟ, ಎಲ್ಲಿಂದ ಎಂದರೆ ನನ್ನ ಗೆಳೆಯ ಹರ್ಷ ಇದನ್ನೆಲ್ಲ ಕಲೆ ಹಾಕಿದ್ದಾನೆ ಎಂದ. ವಿದ್ಯಾರ್ಥಿಗಳು ಏನೆಲ್ಲ ಹವ್ಯಾಸಗಳನ್ನು ಹೊಂದಿರುತ್ತಾರೆ ಎನ್ನುವ ಸೋಜಿಗವಾಯಿತು.

ಹಾಗೆ ನನ್ನ ಸೋದರತ್ತೆ ಮಗ ಡಾ॥ ಎನ್. ಅಮರನಾಥ ವೈದ್ಯಕೀಯ ವಿಜ್ಞಾನದ ಕೆಲವು ವಿಶೇಷಗಳನ್ನು ಹೇಳಿದ. ಎಲ್ಲವನ್ನು ಕಲೆಯಾಕಿ ಒಂದು ಕಾದಂಬರಿಗೆ ಎಷ್ಟು ಬೇಕೋ ಅಷ್ಟನ್ನು ಇಲ್ಲಿ ಉಪಯೋಗಿಸಿಕೊಂಡಿದ್ದೇನೆ. ಬಹುಶಃ ಇದೆಲ್ಲ ಕಾದಂಬರಿ ಓದುಗರಿಗೆ ಇಷ್ಟವಾಗಬಹುದು.

'ನೀ ನಡೆವ ದಾರಿಯಲ್ಲಿ' ಕಾದಂಬರಿಯನ್ನು ಉದಯವಾಣಿ ದಿನಪತ್ರಿಕೆಯಲ್ಲಿ ಪ್ರಕಟಿಸಿದ ಉದಯವಾಣಿ ಸಂಪಾದಕರಾದ ಶ್ರೀಮತಿ ಡಾ॥ ಪೂರ್ಣಿಮಾ ಮೇಡಮ್ ಅವರಿಗೆ, ನನ್ನ ಅನೇಕ ಪುಸ್ತಕಗಳನ್ನು ಪ್ರಕಟಿಸುತ್ತ ಬಂದಿರುವ ಮೆ॥ ಪಾಂಚಜನ್ಯ ಪಬ್ಲಿಕೇಷನ್ಸ್‌ನ ರೂವಾರಿಗಳು, ಕ್ರಿಯಾಶೀಲರು, ನನ್ನ ಆತ್ಮೀಯರು ಆದ ಶ್ರೀ ನಿಡಸಾಲೆ ಪುಟ್ಟಸ್ವಾಮಯ್ಯನವರಿಗೆ, ಇದೇ ಪಬ್ಲಿಕೇಷನ್ಸ್‌ನ ಉಸ್ತುವಾರಿಯನ್ನು ಇತ್ತೀಚೆಗೆ ವಹಿಸಿಕೊಂಡಿರುವ ಉತ್ಸಾಹಿ ಯುವಕ ಉದ್ಯಮಿ ಶ್ರೀ ವಿಜಯ್ ನಿಡಸಾಲೆ ಅವರಿಗೆ, ಸೊಗಸಾದ ಚಿತ್ರಬಿಡಿಸಿರುವ ಪ್ರಿಯ ಮಿತ್ರ ಹಾಗೂ ಖ್ಯಾತ ಚಿತ್ರಗಾರರಾದ ಶ್ರೀ ಕಲ್ಲಿಗನೂರು ಪುಂಡಲೀಕ್ ಅವರಿಗೆ, ನನ್ನ ಸಾಹಿತ್ಯ ಚಟುವಟಿಕೆಗಳಿಗೆ ನೆರವಾಗುತ್ತಿರುವ ಆತ್ಮೀಯರಾದ ಶ್ರೀ ಜರಗನಹಳ್ಳಿ ಶಿವಶಂಕರ್ ಮತ್ತು ಶ್ರೀ ಟಿ.ಆರ್. ಅನಂತರಾಮು ಅವರಿಗೆ, ನನ್ನ ಕೃತಿಗಳನ್ನು ಓದಿ ಪ್ರೋತ್ಸಾಹಿಸುತ್ತಿರುವ ಅನೇಕ ಮಿತ್ರರಿಗೆ ಮತ್ತು ಓದುಗರಿಗೆ ಅಂತಿಮವಾಗಿ ನನ್ನ ಎಂದಿನ ಭೂ ವಿಜ್ಞಾನದ ಕ್ಷೇತ್ರಿಯ ಸಂಶೋಧನೆ, ಸಾಹಿತ್ಯ ಸಮಾರಂಭಗಳೆಂದು ಯಾವಾಗಲೂ ಮನೆಗಿಂತ ಹೊರಗಡೆಯೇ ಹೆಚ್ಚು ಓಡಾಡುತ್ತಿರುವ ನನ್ನ ಅನುಪಸ್ಥಿತಿ ಮತ್ತು ಚಡಪಡಿಕೆಗಳನ್ನು ಸಹಿಸಿಕೊಳ್ಳುತ್ತ ನನ್ನ ಬೆನ್ನ ಹಿಂದಿರುವ ನನ್ನ ಪ್ರೀತಿಯ ಪತ್ನಿ ಸುಶೀಲಳಿಗೆ –

ಎಂ. ವೆಂಕಟಸ್ವಾಮಿ
# 57 ಎ, ಸಾಯಿ ಲೋಟಸ್ ಬಡಾವಣೆ,
ಸುಬ್ರಮಣ್ಯಪುರ ಪೋಸ್ಟ್,
ಬೆಂಗಳೂರು – 560 061.

# ನೀ ನಡೆವ ದಾರಿಯಲ್ಲಿ

ಬೆಂಗಳೂರಿನ ಒಂದು ಸುಸಜ್ಜಿತ ಖಾಸಗಿ ಕಾಲೇಜ್ ಆವರಣ, ಮಧ್ಯದಲ್ಲಿ ಬಹುಮಹಡಿಗಳ ದೊಡ್ಡ ಕಟ್ಟಡ. ಒಂದು ಕೋಣೆಯಲ್ಲಿ ಮೊದಲನೆ ವರ್ಷದ ವೈದ್ಯಕೀಯ ತರಗತಿಗಳು ನಡೆಯುತ್ತಿವೆ. ತರಗತಿಗಳು ಪ್ರಾರಂಭವಾಗಿ ಒಂದು ತಿಂಗಳು ಕಳೆದುಹೋಗಿದೆ. ತರಗತಿಯಲ್ಲಿದ್ದ ಮೊದಲನೆ ವರ್ಷದ ನೂರಾ ಇಪ್ಪತ್ತು ವಿದ್ಯಾರ್ಥಿಗಳಲ್ಲಿ ವಿದ್ಯಾರ್ಥಿಗಳು ಮತ್ತು ವಿದ್ಯಾರ್ಥಿನಿಯರು ಹೆಚ್ಚು ಕಡಿಮೆ ಸಮವಾಗಿದ್ದಾರೆ. ಎಲ್ಲರ ಮುಖಗಳು, ಎಲ್ಲರ ಕಣ್ಣುಗಳಲ್ಲಿ ನಿಧಾನವಾಗಿ, ನಿಶ್ಚಲವಾಗಿ ಅಚ್ಚಾಗುತ್ತಿವೆ.

ನೂರಾ ಇಪ್ಪತ್ತು ವಿದ್ಯಾರ್ಥಿಗಳಲ್ಲಿ ನಸು ಕಪ್ಪಗಿರುವವರು, ಕೆಂಪುಗಿರುವವರು, ಗೋಧಿ ಬಣ್ಣದವರು, ಬಿಳಿ ಬಣ್ಣದವರು, ನೋಡಲು ಸಾಧಾರಣವಾಗಿರುವವರು, ಆಕರ್ಷಕವಾಗಿರುವವರು, ತುಂಬಾ ಆಕರ್ಷಕವಾಗಿರುವವರು ಎಲ್ಲರೂ ಇದ್ದಾರೆ. ಹೊರ ರಾಜ್ಯಗಳಿಂದ ಮತ್ತು ವಿದೇಶಗಳಿಂದ ಬಂದ ವಿದ್ಯಾರ್ಥಿಗಳು ಇದ್ದಾರೆ. ಸೌಂದರ್ಯ ಎನ್ನುವುದು ನೋಡುವವರ ಕಣ್ಣುಗಳಲ್ಲಿ ಇರುತ್ತದೆ ಎನ್ನುವುದು ಹಳೆ ಗಾದೆ.

ಕಪ್ಪಗಿರುವವರು ನಾನ್ಯಾಕೆ ತುಸು ಕೆಂಪಗಿಲ್ಲ ಎಂದುಕೊಂಡರೆ ಕೆಂಪುಗಿರುವವರು ನಾನ್ಯಾಕೆ ತುಸು ಕಪ್ಪಗಿರಬಾರದು ಎಂದುಕೊಳ್ಳುತ್ತಾರೆ. ಬಿಳಿಬಣ್ಣದ ಯುರೋಪಿನ ಜನ ತಮ್ಮ ಬಿಳಿಬಣ್ಣದಿಂದ ರೋಸಿಹೋಗಿ ತುಸು ಗೌರವ ಕಂದುಬಣ್ಣ ಪಡೆಯಲು ಮರಳು ದಂಡೆಗಳಲ್ಲಿ ಬೆತ್ತಲೆಯಾಗಿ ಸೂರ್ಯನ ಕಿರಣಗಳಿಂದ ಮೈಕಾಯಿಸಿಕೊಳ್ಳುತ್ತಾರೆ.

ಪ್ರಪಂಚದಾದ್ಯಂತ ಇಂಗ್ಲೀಷ್ ಭಾಷೆಗೆ ಒಂದು ಗಟ್ಟಿ ತಳಪಾಯ ಹಾಕಿ ಗೌರವ ತಂದುಕೊಟ್ಟ ಶೇಕ್ಸ್‌ಪಿಯರ್ ಬರೆದ ನೂರಾ ಐವತ್ತು ಸಾನೆಟ್‌ಗಳ ಪೈಕಿ ನೂರಾ ಇಪ್ಪತ್ತು ಸಾನೆಟ್‌ಗಳಲ್ಲಿ ತನ್ನ ಕಪ್ಪು ಪ್ರೇಯಸಿಯನ್ನು ಕುರಿತು ಬರೆದಿದ್ದಾನೆ. ಉದ್ದವಾಗಿರುವ ಹೆಣ್ಣು ಮಕ್ಕಳು ತುಸು ಕಡಿಮೆ ಎತ್ತರ ಇರಬೇಕಾಗಿತ್ತು ಎಂದುಕೊಂಡರೆ, ಕುಳ್ಳಗಿರುವ ಹೆಣ್ಣುಮಕ್ಕಳು ಸ್ವಲ್ಪ ಎತ್ತರ ಇದ್ದಿದ್ದರೆ ಎಷ್ಟು ಚೆನ್ನಾಗಿತ್ತು

ಎಂದುಕೊಳ್ಳುತ್ತಾರೆ. ದಪ್ಪವಾಗಿರುವವರು ಸಣ್ಣಾಗಿರಬೇಕು, ಸಣ್ಣಗಿರುವವರು ದಪ್ಪವಾಗಿರಬೇಕು ಹೀಗೆ ಎಲ್ಲರೂ ಯಾವುದೊ ಒಂದು ಕೊರತೆ ಇರುವುದಾಗಿ ಯೋಚಿಸುತ್ತಾರೆ.

ಈ ವೈದ್ಯಕೀಯ ವಿದ್ಯಾರ್ಥಿಗಳ ಅಂತರಂಗದ ಶಕ್ತಿ ಅಥವಾ ಬುದ್ಧಿಶಕ್ತಿ ಸಾಮಾನ್ಯರಿಗಿಂತ ಎಷ್ಟೋ ಪಟ್ಟು ಜಾಸ್ತಿ ಎನ್ನಬಹುದು. ಓದುವುದರಲ್ಲಿ ಎಲ್ಲರಿಗಿಂತ ಒಂದು ಕೈ ಮೇಲು ಎನ್ನುವಂತೆ ಎರಡನೇ ವರ್ಷದ ಪದವಿಪೂರ್ವ ಪರೀಕ್ಷೆಗಳಲ್ಲಿ ಹೆಚ್ಚು ಅಂಕಗಳನ್ನು ಗಳಿಸಿ ವೈದ್ಯಕೀಯದಲ್ಲಿ ಪ್ರವೇಶ ಪಡೆದಿದ್ದಾರೆ. ಆದರೆ ಮೇನೇಜ್‌ಮೆಂಟ್ ಕೋಟಾದಲ್ಲಿ ತೀರಾ ಕಡಿಮೆ ಅಂಗಳನ್ನು ಪಡೆದಿರುವ ಹಣವಂತರ ಮಕ್ಕಳು ಲಕ್ಷಾಂತರ ರೂಪಾಯಿಗಳು ದೇಣಿಗೆ ಕೊಟ್ಟು ಬುದ್ಧಿವಂತ ಮಕ್ಕಳ ನಡುವೆ ಸೇರಿಕೊಂಡಿದ್ದಾರೆ.

ಇದೆ ತರಗತಿಯಲ್ಲಿ ಕೃತಿಕಾ, ರೂಪಾ ಮತ್ತು ಅನು ಒಂದು ಬೆಂಚಿನಲ್ಲಿ ಕುಳಿತಿದ್ದಾರೆ, ಮತ್ತೊಂದು ಬೆಂಚಿನಲ್ಲಿ ಅಮರನಾಥ, ಸವ್ಯ ಮತ್ತು ಹರ್ಷ ಕುಳಿತಿದ್ದಾರೆ. ಕೆಲವರು ಹಾಸ್ಟೆಲಿನಲ್ಲಿದ್ದರೆ, ಕೆಲವರು ಪೇಯಿಂಗ್ ಗೆಸ್ಟ್‌ಗಳಾಗಿದ್ದಾರೆ. ಇನ್ನು ಕೆಲವರು ಇಬ್ಬರು ಮೂವರು ಸೇರಿ ಮನೆ ಮಾಡಿಕೊಂಡಿದ್ದಾರೆ. ಉಳಿದವರು ಬೆಂಗಳೂರಿನ ತಮ್ಮ ಸ್ವಂತ ಮನೆಗಳಲ್ಲಿದ್ದಾರೆ.

ಮೊದಲನೆಯ ವರ್ಷದ ವೈದ್ಯಕೀಯ ಅಭ್ಯಾಸದಲ್ಲಿ ಮುಖ್ಯವಾಗಿ ಮೂರು ವಿಷಯಗಳಿದ್ದವು. ಅನಾಟಮಿ, ಫಿಜಿಯಾಲಜಿ ಮತ್ತು ಬಯೊ ಕೆಮಿಸ್ಟ್ರಿ. ಒಂದೆರಡು ವಾರಗಳು ಅನಾಟಮಿ ಬೋಧಿಸಿದ ಪ್ರೊಫೆಸರು ಪ್ರಾಕ್ಟಿಕಲ್ಸ್ ತರಗತಿಗಳ ವೇಳಾಪಟ್ಟಿಯನ್ನು ಅನೌನ್ಸ್ ಮಾಡಿದರು.

''ನಾಳೆ ಸೋಮವಾರದಿಂದ ನಿಮಗೆ ಅನಾಟಮಿ ಪ್ರಾಕ್ಟಿಕಲ್ಸ್ ಇರುತ್ತೆ, ಡಿಸೆಕ್ಷನ್ ಹಾಲ್‌ನಲ್ಲಿ ಒಂದೊಂದು ಟೇಬಲ್ ಮೇಲೆ ಒಂದೊಂದು ಡೆಡ್‌ಬಾಡಿ ಇಟ್ಟಿರ್ತಾರೆ. ಒಂದೊಂದು ಟೇಬಲ್‌ಗೆ ಹನ್ನೆರಡು ವಿದ್ಯಾರ್ಥಿಗಳು. ನಿಮ್ಮ ಹೆಸರುಗಳು, ಟೇಬಲ್ ಸಂಖ್ಯೆ, ನಿಮ್ಮ ಪ್ರೊಫೆಸರ್ ಎಲ್ಲಾ ವಿವರಗಳನ್ನು ನೋಟಿಸ್ ಬೋರ್ಡಿನಲ್ಲಿ ನೋಡಬಹುದು. ಎಲ್ಲರೂ ಪೂರ್ತಿ ಡಿಸೆಕ್ಷನ್ ಬಾಕ್ಸ್ ತೆಗೆದುಕೊಂಡು ಬರಬೇಕು. ಹಾಗೆ ಎಲ್ಲರೂ ಏಪ್ರಾನ್ ಹಾಕಿಕೊಂಡು ಬರಬೇಕು. ಬಿ.ಡಿ. ಚೌರಾಷಿಯ ಅನಾಟಮಿ ವಾಲ್ಯೂಮ್ಸ್ ಮೊದಲೆ ಓದಿಕೊಂಡು ಬರಬೇಕು ಇಲ್ಲ ಅಂದ್ರೆ ಏನೂ ಅರ್ಥ ಆಗೊದಿಲ್ಲ'' ಎನ್ನುತ್ತಿದ್ದಂತೆ ವಿದ್ಯಾರ್ಥಿಗಳು ಸೋಮವಾರ ತಾವು ಎದುರುಗೊಳ್ಳಲಿರುವ ಹೆಣಗಳ ಬಗ್ಗೆ ಯೋಚಿಸತೊಡಗಿದರು.

ವಿದ್ಯಾರ್ಥಿನಿಯರು, ಮುಖಗಳನ್ನು ಸಣ್ಣಗೆ ಮಾಡಿಕೊಂಡು ಕಣ್ಣುಗಳನ್ನು ಕೆಲವು ಕ್ಷಣಗಳು ಮುಚ್ಚಿಕೊಂಡರು. ಅನಂತರ ಗುಸುಗುಸು ಮಾತುಗಳು ಶುರುವಾದವು. ಅನಾಟಮಿ ಪ್ರೊಫೆಸರು "ಸೈಲೆನ್ಸ್ ಪ್ಲೀಸ್"... ನೀವೇನು ಹೆದರಿಕೊಳ್ಳುವ ಅವಶ್ಯಕತೆ ಇಲ್ಲ. ಡೆಡ್‌ಬಾಡೀನ ಪೂರ್ತಿ ಎರಡು ತಿಂಗಳು ಪಾರ್ಮಲಿನ್ ಟ್ಯಾಂಕ್‌ನಲ್ಲಿಟ್ಟು ಒಣಗಿಸಿರುವುದರಿಂದ ಒಂದು ಚೂರು ವಾಸನೆ ಇರುವುದಿಲ್ಲ. ಚರ್ಮ ಕೂಡ ಪೂರ್ತಿ ಗಟ್ಟಿಯಾಗಿರುತ್ತೆ. ನಿಮಗೆ ಎಲ್ಲಾನೂ ವಿವಿರವಾಗಿ ಹೇಳ್ತೀವಿ. ಪ್ರತಿಯೊಂದು ಅಂಗಾಂಗದ ಬಗ್ಗೆಯೂ ವಿವಿರವಾಗಿ ಹೇಳಿದ ಮೇಲೆ ಡೆಮಾನ್‌ಸ್ಟ್ರೇಟ್ ಮಾಡ್ತೀವಿ. ಆಮೇಲೆ ನೀವೆ ಶಸ್ತ್ರಚಿಕಿತ್ಸೆ ಮಾಡಬೇಕು. ಯಾವುದೇ ಸಂದೇಹ ಬಂದರು ನೀವು ಕೇಳಬಹುದು ಈಗ ಪಾಠ ಶುರುಮಾಡೋಣ" ಎಂದು ಅನಾಟಮಿಯ ಮೊದಲ ಅಧ್ಯಾಯವಾದ ಕೈಗಳ ಬಗ್ಗೆ ಪ್ರೊಫೆಸರ್ ವಿವರಿಸತೊಡಗಿದರು.

* * *

ಒಂದು ತಿಂಗಳು ಕಾಲ ಸೀನಿಯರ್ ವಿದ್ಯಾರ್ಥಿಗಳಿಂದ ಸಾಕಷ್ಟು ರ್‍ಯಾಗಿಂಗ್ ಮಾಡಿಸಿಕೊಂಡಿದ್ದ ಮೊದಲನೆಯ ವರ್ಷದ ವಿದ್ಯಾರ್ಥಿಗಳು ತಗ್ಗಿಬಗ್ಗಿ ನಡೆದುಕೊಂಡಿದ್ದರು. ಅಂದು ತರಗತಿಗಳು ಮುಗಿದಿದೆ ಅಮರನಾಥ, ಸವ್ಯ ಮತ್ತು ಹರ್ಷ ಕಾಲೇಜಿನಿಂದ ಹೊರಕ್ಕೆ ಬರುತ್ತಿದ್ದರು. ಕಾಂಪೌಂಡಿನ ಮೇಲೆ ಕುಳಿತಿದ್ದ ವಿದ್ಯಾರ್ಥಿಗಳ ಒಂದು ಗುಂಪು "ಏಯ್ ಇದರ್ ಹಾವ್" ಎಂದು ಅಮರನಾಥ ಮತ್ತು ಅವನ ಗೆಳೆಯರನ್ನು ಕರೆದರು. ಮೂವರು ಹಿಂದಕ್ಕೆ ತಿರುಗಿ ನೋಡಿ ಕರೆಯುತ್ತಿರುವುದು ನಮ್ಮನ್ನೇ ಎಂದು ತಿಳಿದುಕೊಂಡು ಸೀನಿಯರ್ಸ್ ಹತ್ತಿರಕ್ಕೆ ನಿಧಾನವಾಗಿ ನಡೆದು ಬರುತ್ತಾ, "ಈ ನನ್ನ ಮಕ್ಕಳಿಗೆ ನಾವು ಲೋಕಲ್ಸ್ ಅಂತ ಇವೊತ್ತು ಹೇಳ್ಬೇಕು. ಎಲ್ಲಿಂದಾನೊ ಇಲ್ಲಿಗೆ ಬಂದು ನಮ್ಮ ಮೇಲೆನೆ ರೋಪ್ ಹಾಕ್ತಾರೆ" ಅವರಿಗೆ ಕೇಳಿಸದಂತೆ ಹರ್ಷ ಹೇಳಿದ. ಕರೆದವರು ಉತ್ತರ ಭಾರತದ ವಿದ್ಯಾರ್ಥಿಗಳಾಗಿದ್ದರು. ಮೂವರು ಹತ್ತಿರಕ್ಕೆ ಹೋಗುತ್ತಿದ್ದಂತೆ, "ನಮ್ಮ ಬಗ್ಗೆ ಏನು ಹೇಳ್ದೆ...? ಏನು ಬೈಯ್ದುಕೊಂಡು ಬರ್‍ತಾ ಇದ್ದೀಯಾ...? ಸೀನಿಯರ್ಸ್ ಅಂದ್ರೆ ಮರ್‍ಯಾದೆ ಇರಬೇಕು" ಒಬ್ಬನು ಪಕ್ಕದಲ್ಲಿದ್ದ ಹುಡುಗಿಯರ ಕಡೆಗೆ ನೋಡುತ್ತಾ ಹೇಳಿನ. "ನಿಮ್ಮ ಬಗ್ಗೆ ನಮಗೆ ತುಂಬಾ ಮರ್‍ಯಾದೆ ಇದೆ " ಸವ್ಯ ಮುಗುಳು ನಗುತ್ತಾ ಹೇಳಿರ.

'ಹುಡುಗ ಸ್ಮಾರ್ಟಾಗಿದ್ದಾನೆ " ಒಬ್ಬಳು ಸವ್ಯನನ್ನು ಕಣ್ಣುಗಳಲ್ಲೆ ಅಳೆಯುತ್ತಾ ತನ್ನ ಗೆಳತಿರು ಕಿವಿಯಲ್ಲಿ ಹೇಳಿದಳು. "ನಿಮಗ್ಯಾರೂ ಗರ್ಲ್ ಫ್ರೆಂಡ್ಸ್ ಇಲ್ಲವಾ...?"

ಗುಂಪಿನ ಮುಖ್ಯಸ್ಥ ಮತ್ತೆ ಕೇಳಿದ. ಉತ್ತರ ಏನು ಹೇಳುವುದು...? ಮೂವರು ಕೆಲವು ಕ್ಷಣಗಳು ತಡವರಿಸಿದರು. ''ಗರ್ಲ್‌ಫ್ರೆಂಡ್ಸ್ ಬೇಕಾದರೆ ವ್ಹೆಕಲ್ಸ್ ಬೇಕು... ಹಣ ಚೆಲ್ಲಬೇಕು... ಬಹುಶಃ ನಿಮ್ಮಲ್ಲಿ ಎರಡೂ ಇಲ್ಲ ಅನ್ನಿಸುತ್ತೆ'' ಎಂದಿದ್ದೆ ಎಲ್ಲರೂ ನಕ್ಕರು.

''ನೋಡು ಇನ್ಮೇಲೆ ನೀವು ನಾವು ಫ್ರೆಂಡ್ಸ್....ದೋಸ್ತ್ ಇಷ್ಟುದಿನ ನಿಮ್ಮನ್ನ ಚುಡಾಯಿಸಿದ್ದಕ್ಕೆ ಸ್ಸಾರಿ. ನಾವು ಫ್ರೆಂಡ್ಸ್ ಆದ್ಮೇಲೆ ಸೆಲಬ್ರೇಟ್ ಮಾಡಬೇಕಲ್ಲ...? ಬನ್ನೀ ಲೊ ಪಪ್ಪಟ್ ಲಾಲ್ ಒಂದು ಸಿಗರೇಟ್ ಕೊಡು ಮೂವರು ಕುಡಿಯಲಿ'' ಎಂದಿದ್ದೆ ಪಕ್ಕದಲ್ಲಿದ್ದ ಸಪೋಟ ತರಹದ ಹುಡುಗ ಒಂದು ಸಿಗರೇಟ್ ತನ್ನ ಜೇಬಿನಿಂದ ತೆಗೆದುಕೊಟ್ಟ. ತೆಗೆದುಕೊಳ್ಳುವುದೊ ಬೇಡವೊ ಎನ್ನುತ್ತ ಮೂವರು ಒಬ್ಬರನ್ನೊಬ್ಬರು ನೋಡಿಕೊಂಡರು.

''ನಮ್ಮ ಜೊತೆ ಫ್ರೆಂಡ್‌ಶೀಪ್ ಬೇಕೊ... ಬೇಡವೊ...?'' ಮಧ್ಯದಲ್ಲಿ ಕುಳಿತಿದ್ದವನು ಕೇಳಿದ. ಸವ್ಯ ತೆಗೆದುಕೊಳ್ಳಲು ಹೋದ'' ಇಲ್ಲ ! ನೀನಲ್ಲ ನೀನು ತೆಗೆದುಕೊ'' ಎಂದು ಹರ್ಷನ ಕೈಗೆ ನೀಡಿದ. ಹರ್ಷ ಕೈಗೆ ತೆಗೆದುಕೊಂಡಿದ್ದೆ ಸಪೋಟ ಹುಡುಗ ಗೋಡೆ ಮೇಲಿಂದ ಕುಂಬಳ ಕಾಯಿಯಂತೆ ಕೆಳಕ್ಕೆ ಉರುಳಿ ಬಂದು ಸಿಗರೇಟ್ ಹೊತ್ತಿಸಿದ. ಹರ್ಷ ಈಗಾಗಲೆ ಹಲವು ನೂರು ಸಿಗರೇಟುಗಳನ್ನು ಉರಿಸಿ ಬೂದಿಮಾಡಿದ್ದ ಅನುಭವದಿಂದ ಒಂದು ದಮ್ಮು ಜೋರಾಗಿ ಎಳೆದ, ಅಷ್ಟೇ. ಒಮ್ಮೆಲೆ ತಲೆಗೇರಿ, ಅವನ ಗಂಟಲಲ್ಲಿ ಏನೊ ಸಿಕ್ಕಿಕೊಂಡಂತಾಯಿತು. ಕೆಮ್ಮುತ್ತಾ ಕೆಮ್ಮುತ್ತಾ ಕಣ್ಣುಗಳಲ್ಲಿ ನೀರು ಬರತೊಡಗಿತು.

ಸವ್ಯ ಮತ್ತು ಅಮರನಾಥನಿಗೆ ಏನೊ ಸಂದೇಹಬಂದಿತು. ಅಷ್ಟರಲ್ಲಿ ಆ ಗುಂಪು ನಗುತ್ತಾ ಅಲ್ಲಿಂದ ಗೋಡೆ ಹಾರಿ ಹೊರಟುಹೋಯಿತು. ''ಈ ನನ್ನ ಮಕ್ಕಳು ಸಿಗರೇಟ್‌ನಲ್ಲಿ ಚರಾಸ್ನೊ.... ಗಾಂಜಾನೊ ಇಟ್ಟಿದ್ದಾರೆ '' ಸವ್ಯ ಹೇಳಿದ. ಅಮರನಾಥ ಓಡಿಹೋಗಿ ರಸ್ತೆಯ ಪಕ್ಕದಲ್ಲಿದ್ದ ಹೋಟಲಿನಿಂದ ನೀರು ತಂದು ಕುಡಿಸಿದ. ಹರ್ಷ ಸುಧಾರಿಸಿಕೊಳ್ಳಲು ಸುಮಾರು ಹೊತ್ತು ಹಿಡಿಯಿತು.

ಈ ವಿಷಯವನ್ನು ಮನೆಯಲ್ಲಿ ತಿಳಿಸಬೇಕೊ....? ಪ್ರಿನ್ಸಿಪಲ್‌ಗೆ ತಿಳಿಸಬೇಕೊ ಇಲ್ಲ ತಾವೆ ಹ್ಯಾಂ

ಡಲ್ ಮಾಡಬೇಕೊ....? ಯಾವುದನ್ನು ನಾಳೆ ಯೋಚಿಸೋಣ ಎಂದು ತೀರ್ಮಾನಿಸಿ ತಮ್ಮ ತಮ್ಮ ಮನೆಗಳ ಕಡೆಗೆ ಹೊರಟುಹೋದರು. ಈ ಮೂವರು ಹೈಸ್ಕೂಲಿನಿಂದ ಕಾಲೇಜಿನವರೆಗೆ ಜೊತೆಯಾಗಿ ಓದುತ್ತಿದ್ದು ಆತ್ಮೀಯ ಗೆಳೆಯರಾಗಿದ್ದಾರೆ.

ಮರುದಿನ ಆ ಗುಂಪಿನ ಬಗ್ಗೆ ಮಾಹಿತಿಯನ್ನು ಕಲೆಯಾಕುತ್ತಿದ್ದಂತೆ ಅವರಿಗೆ ಕುತೂಹಲದ ಜೊತೆಗೆ ಭಯವು ಮೂಡಿತು. ಆ ಗುಂಪಿನ ಮುಖ್ಯಸ್ಥ ರಿಕಿ ರೊನಾಲ್ಡ್ ಎಂಬ ಹೆಸರಿನವನಾಗಿದ್ದು , ಐದು ವರ್ಷಗಳ ವೈದ್ಯಕೀಯ ಅಧ್ಯಯನವನ್ನು ಹತ್ತು ವರ್ಷಗಳಿಂದ ಮಾಡುತ್ತಿರುವುದಾಗಿ ತಿಳಿದುಬಂದಿತು. ಹೆಸರಿಗೆ ಕೋರ್ಸ್ ಮುಗಿದಿದ್ದರು, ಮೊದಲನೆ ವರ್ಷವನ್ನು ಬಿಟ್ಟು ಉಳಿದ ಎಲ್ಲ ವರ್ಷಗಳಲ್ಲೂ ನಾಲ್ಕಾರು ವಿಷಯಗಳನ್ನು ಹಾಗೆ ಸ್ಟಾಕ್ ಇಟ್ಟುಕೊಂಡಿರುವುದಾಗಿ ತಿಳಿದುಬಂದಿತು. ಕರ್ನಾಟಕದಲ್ಲಿ ಸಿಇಟಿ ಮಾದರಿ ಪ್ರವೇಶ ಪ್ರಾರಂಭವಾಗುವುದಕ್ಕಿಂತ ಮುಂಚೆ ಸರಕಾರಿ ಕಾಲೇಜುಗಳಲ್ಲಿ ಕರ್ನಾಟಕದ ವಿದ್ಯಾರ್ಥಿಗಳಿಗೆ ಅವಕಾಶವಿರುತ್ತಿದ್ದು ಉಳಿದ ಖಾಸಗಿ ಕಾಲೇಜುಗಳಲ್ಲಿ ಎಲ್ಲಾ ಸೀಟುಗಳನ್ನು ಬಹಿರಂಗವಾಗಿ ಹಣ ಹೆಚ್ಚು ಕೊಡುತ್ತಿದ್ದವರಿಗೆ ಕೊಡಲಾಗುತ್ತಿತ್ತು. ಆಗ ದೇಶದ ಮೂಲೆ ಮೂಲೆಗಳಿಂದ ರಾಜಕೀಯ ನಾಯಕರು, ಜಮೀನುದಾರರು ಮತ್ತು ಹಣವಂತರ ಮಕ್ಕಳು ಮಾತ್ರ ಸೀಟುಗಳನ್ನು ಪಡೆಯುತ್ತಿದ್ದರು. ಅಂತಹ ಹಿನ್ನೆಲೆಯಿಂದ ಬಂದ ವಿದ್ಯಾರ್ಥಿಗಳು ಓದಿ ಪಾಸುಮಾಡುವು ಅಗತ್ಯವಾದರು ಏನಿದೆ...? ತಿಂದು ಕುಡಿದು ಹುಡುಗಿಯರ ಜೊತೆಗೆ ಬೆಂಗಳೂರೆಲ್ಲ ಓಡಾಡಿಕೊಂಡು ಮಜಾ ಉಡಾಯುಸುತ್ತಿದ್ದರು.

ಅವರು ಪಾಸು ಮಾಡಿಕೊಂಡು ಹೊರಟುಹೋದರೆ ಮಜಾ ಎಲ್ಲಿ ಬರುತ್ತದೆ...? ಹಾಗಾಗಿ ಅವರು ಓದುವ ಗೋಜಿಗೆ ಹೋಗುತ್ತಿರಲಿಲ್ಲ. ಅಂತಹ ಹಿನ್ನಲೆಯುಳ್ಳ ರಿಕಿ ರೋನಾಲ್ಡ್ ಅದೆ ಖಾಸಗಿ ಕಾಲೇಜ್ ಹಾಸ್ಟಲಿನಲ್ಲಿ ಮಜಾ ಉಡಾಯಿಸುತ್ತಿದ್ದ . ಆದರೆ ಈಗ ಸಿಇಟಿ ಮಾದರಿ ಪ್ರವೇಶ ಬಂದಮೇಲೆ ಎಲ್ಲಾ ಮೆಡಿಕಲ್ ಕಾಲೇಜುಗಳಲ್ಲಿ ಸರಕಾರದ ಕೋಟಾ ಮುಖಾಂತರ ಕೆಲವು ಕರ್ನಾಟಕದ ವಿದ್ಯಾರ್ಥಿಗಳಿಗೂ ಅವಕಾಶ ದೊರಕುತ್ತಿತ್ತು. ರಿಕಿ ರೊನಾಲ್ಡ್‌ನ ಎಷ್ಟೊ ಗೆಳೆಯರು ಕೋರ್ಸ್‌ನ್ನು ಮುಗಿಸದೆ ಮಧ್ಯದಲ್ಲೇ ಬಿಟ್ಟು ಓಡಿ ಹೋಗಿದ್ದರು. ಇನ್ನು ಕೆಲವರು ಹಣಕೊಟ್ಟು ಸರ್ಟಿಫಿಕೆಟ್‌ಗಳನ್ನು ಕೊಂಡುಕೊಂಡು ಹೋಗಿದ್ದರು. ಮೆಡಿಕಲ್ ಸೀಟಿಗೆ ಹತ್ತು ಲಕ್ಷ ಕೊಡುವವರು ಡಿಗ್ರಿ ಸರ್ಟಿಫಿಕೆಟ್ ಪಡೆಯಲು ಇನ್ನು ಐದೊ ಹತ್ತೊ ಲಕ್ಷ ರೂಪಾಯಿಗಳನ್ನು ಆರಾಮವಾಗಿ ಕೊಟ್ಟು ಸರ್ಟಿಫಿಕೆಟ್ ಪಡೆದು ಹೋಗುತ್ತಿದ್ದರು.

ಸರಕಾರ ಎಲ್ಲಾ ಕಾಲೇಜುಗಳನ್ನು ಒಂದೇ ಆಡಳಿತದ ಕೆಳಗೆ ತಂದು ಸಿಇಟಿ ಮಾದರಿ ಪ್ರವೇಶವನ್ನು ತಂದಾಗ ಇಂತಹವರ ಪ್ರವೇಶ ಹೆಚ್ಚು ಕಡಿಮೆ ಪೂರ್ಣವಾಗಿ ಕಡಿಮೆಯಾಯಿತು. ಜೊತೆಗೆ ಖಾಸಗಿ ಕಾಲೇಜುಗಳ ಪ್ರವೆಶದಲ್ಲೂ ಸರಕಾರ ಸಿಇಟಿ ಪರೀಕ್ಷೆ ನಡೆಸಿ, ಶೇಕಡ ಐವತ್ತು ಸೀಟುಗಳನ್ನು ಕರ್ನಾಟಕದವರಿಗೆ ಇನ್ನುಳಿದ ಶೇಕಡಾವಾರು ಸೀಟುಗಳನ್ನು ಹೊರರಾಜ್ಯಗಳ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಮತ್ತು

ದೇಣಿಗೆಗೆ ಮಾರಿಕೊಳ್ಳುವಂತಹ ಕಾನೂನು ತಂದಿತು. ಸಿಇಟಿ ಮಾದರಿ ಪ್ರವೇಶ ದೇಶದಲ್ಲಿಯೆ ಪ್ರಥಮವಾಗಿ ಕರ್ನಾಟಕದಲ್ಲಿ ಬಂದಿತು. ಇದರಿಂದ ರ್‍ಯಾಗಿಂಗ್ ಕೂಡ ತನಗೆ ತಾನೆ ನಿಂತು ಹೋಯಿತು. ಇದಕ್ಕೆ ಮುಂಚೆ ಖಾಸಗಿ ಕಾಲೇಜುಗಳಲ್ಲಿ ಎಲ್ಲಾ ಹೊರಗಿನವರೆ ತುಂಬಿಕೊಂಡು ರ್‍ಯಾಗಿಂಗ್ ಹೆಸರಿನಲ್ಲಿ ಎಷ್ಟೋ ಅಮಾಯಕ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಮನೋರೋಗಿಗಳನ್ನಾಗಿ ಮಾಡಿದ್ದಲ್ಲದೆ, ಕೊಲೆಗಳು ನಡೆದು ಹೋಗಿದ್ದವು.

ರಿಕಿ ರೊನಾಲ್ಡ್‌ನಂತಹ ವಿದ್ಯಾರ್ಥಿಗಳು ಈಗಲು ಅಲ್ಲಲ್ಲಿ ಕೆಲವರು ಇರುವುದಾಗಿ ತಿಳಿದುಬಂದಿತು. ಕರ್ನಾಟಕ ಸರಕಾರ ರ್‍ಯಾಗಿಂಗನ್ನು ಪೂರ್ಣವಾಗಿ ನಿಷೇಧಿಸಿದ ಮೇಲೆ ವಿದ್ಯಾರ್ಥಿಗಳು ಮತ್ತು ಪೋಷಕರು ಉಸಿರಾಡುವಂತಹ ಪರಿಸ್ಥಿತಿ ಬೆಳೆದಿದೆ. ಆದರೂ ಇಂತಹವರು ಇನ್ನೂ ಅಲ್ಲಲ್ಲಿ ಉಳಿದು ಕೊಂಡಿದ್ದಾರೆ.

ಅಮರನಾಥ ಸವ್ಯ ಮತ್ತು ಹರ್ಷ ಮೂವರು ಸುಮಾರು ಒಂದು ವಾರದ ಕಾಲ ಯೋಚಿಸಿ ಒಂದು ತೀರ್ಮಾನಕ್ಕೆ ಬಂದರು. ನಮ್ಮ ಮುಖ್ಯ ಉದ್ದೇಶ ಓದಿ ಪಾಸುಮಾಡುವುದು. ಅದನ್ನು ಬಿಟ್ಟು ಯಾವುದೊ ರಾಜಕೀಯ, ಕ್ಷುಲ್ಲಕ ವಿಷಯದಲ್ಲಿ ಕಾಲಹರಣ ಮಾಡುವುದು ಬೇಡವೆಂದು, ಮತ್ತೊಮ್ಮೆ ಅವನು ಬಾಲ ಬಿಚ್ಚಿದರೆ ನೋಡೋಣವೆಂದು ಓದುವುದರಲ್ಲಿ ಮಗ್ನರಾದರು.

* * *

ಅಮರನಾಥ ಸವ್ಯ ಮತ್ತು ಹರ್ಷ ಮೂವರು ಮೂಲವಾಗಿ ಕರ್ನಾಟಕದವರೆ ಆಗಿದ್ದು , ಅವರ ಪೋಷಕರು ಯಾವಾಗಲೊ ಬೆಂಗಳೂರು ಸೇರಿಕೊಂಡಿದ್ದರು. ಅಮರನಾಥ ದಲಿತ ಸಮುದಾಯಕ್ಕೆ ಸೇರಿದ್ದು , ಅವನ ತಂದೆ ರೆವಿನ್ಯೂ ಇಲಾಖೆಯಲ್ಲಿ ಗುಮಾಸ್ತರಾಗಿ ಕೆಲಸ ಮಾಡುತ್ತಿದ್ದರು. ಮನೆಯಲ್ಲಿ ಮೂವರು ಮಕ್ಕಳು ಓದುತ್ತಿರುವುದರಿಂದ ಅವನ ತಂದೆ ಅವರನ್ನು ಓದಿಸುವುದರಲ್ಲೇ ಅರ್ಧ ಮುದುಕರಾಗಿ ಹೋಗಿದ್ದರು. ಸವ್ಯ ಬ್ರಾಹ್ಮಣ ಸಮುದಾಯಕ್ಕೆ ಸೇರಿದ್ದು ಅವನ ತಂದೆ ಸರಕಾರಿ ಕಛೇರಿಯೊಂದರಲ್ಲಿ ಇಂಜನಿಯರಾಗಿ ಉದ್ಯೋಗ ನಿರ್ವಹಿಸುತ್ತಿದ್ದರು. ಹರ್ಷನ ತಂದೆ ಆಟೋ ಚಾಲಕನಾಗಿದ್ದರು.

ಅಮರನಾಥ ಮತ್ತು ಹರ್ಷನ ಪೋಷಕರು ದೇಶದ ಇತರ ಬಡಜನರು ಕನಸು ಕಾಣುತ್ತಿದ್ದಂತೆ ತಮ್ಮ ಮಕ್ಕಳು ಓದಿ ದೊಡ್ಡವರಾಗಬೇಕೆಂದು, ತಮ್ಮ ಸಾಮರ್ಥ್ಯಕ್ಕಿಂತ ಹೆಚ್ಚಾಗಿ ದುಡಿದು ಅವರಿಗೆ ಬೇಕಾದುದನ್ನು ಕೊಡಲು ಹೆಣಗಾಡುತ್ತಿದ್ದರು. ಆ ಕುಟುಂಬಗಳು ಇದುವರೆಗೂ ತಮ್ಮಲ್ಲಿ ಒಬ್ಬೇ ಒಬ್ಬ ಇಂಜನಿಯರು, ವೈದ್ಯರನ್ನು

ಕಂಡಿರಲಿಲ್ಲ. ಹಾಗಾಗಿ ಅಮರನಾಥ ಮತ್ತು ಹರ್ಷನ ಬಗ್ಗೆ ಆ ಎರಡು ಕುಟುಂಬಗಳು ಎಲ್ಲಿಲ್ಲದ ಆಸೆಯನ್ನು ಇಟ್ಟುಕೊಂಡಿದ್ದವು.

ಇಬ್ಬರೂ ಬಸ್‌ಪಾಸ್ ಮಾಡಿಸಿಕೊಂಡು ಬಿಟಿಎಸ್ ಬಸ್ಸುಗಳಿಗೆ ಮನೆಯಿಂದ ಕಾಲೇಜಿಗೆ ಹೋಗಿಬರುತ್ತಿದ್ದರು. ಅಮರನಾಥ ಮತ್ತು ಹರ್ಷನಿಗೆ ಅವರ ಮನೆಯವರು ವೈದ್ಯಕೀಯ ಸಲಕರಣೆಗಳು, ವೈದ್ಯಕೀಯ ಪುಸ್ತಕಗಳು, ಫೀಸು, ಮನುಷ್ಯ ಮಾದರಿಯ ಎಲುಬುಗಳು, ಡಿಸೆಕ್ಷ್‌ನ್ ಬಾಕ್ಸ್, ಏಪ್ರಾನ್ ಇವೆ ಮುಂತಾದ ಸಾಮಾನುಗಳನ್ನೆಲ್ಲ ಸಾಲ ಸೋಲ ಮಾಡಿ ತೆಗೆದುಕೊಟ್ಟಿದ್ದರು. ಒಳ್ಳೆ ಗ್ರಂಥಾಲಯ ಇರುವುದರಿಂದ ತಾವು ಕೊಂಡುಕೊಳ್ಳಲಾರದ ಪುಸ್ತಕಗಳನ್ನು ಗ್ರಂಥಾಲಯದಿಂದ ಪಡೆಯುತ್ತಿದ್ದರು. ಅಂತು ಅವರ ಪೋಷಕರು ತಮ್ಮ ಕಷ್ಟಗಳ ನಡುವೆಯೆ ಮಕ್ಕಳ ಓದಿಗೆ ಏನೂ ತೊಂದರೆಯಾಗದಂತೆ ನೋಡಿಕೊಳ್ಳುತ್ತಿದ್ದರು.

* * *

ಬೆಂಗಳೂರಿನ ಕಾಂಕ್ರೆಟ್ ಕಾಡಿನ ಮಧ್ಯ ಒಂದು ಪ್ರಖ್ಯಾತ ಬಡಾವಣೆ. ಬಡಾವಣೆ ತುಂಬಾ ಚಿತ್ರವಿಚಿತ್ರ ಬಣ್ಣಗಳನ್ನು ಬಳಿದುಕೊಂಡು ನಿಂತಿರುವ ಸುಸಜ್ಜಿತ ಮನೆಗಳು. ಬೆಂಗಳೂರಿನಲ್ಲಿ ವಾಸಿಸುವ ಜನರು ಮನೆಗಳ ಮೇಲೆ ಅದೆಷ್ಟು ಹಣ ಸುರಿಯುತ್ತಾರೆ ಎನ್ನುವುದನ್ನು ಆ ಮನೆಗಳ ಒಳಕ್ಕೆ ಒಮ್ಮೆ ಇಣುಕಿ ನೋಡಿದರೆ ಗೊತ್ತಾಗುತ್ತದೆ. ಅಂತಹ ಮನೆಗಳ ನಡುವೆ ಮೂರು ಕೋಣೆಗಳ ಒಂದು ಸಣ್ಣ ಮನೆ, ಆ ಮನೆಯ ಜನರೆಲ್ಲ ಸಮುದ್ರಗಳನ್ನು ದಾಟಿ ಎಲ್ಲೊ ಅಮೆರಿಕಾದಲ್ಲಿ ಹಣ ಸಂಪಾದಿಸಲು ಹೊರಟುಹೋಗಿದ್ದಾರೆ. ಹೋಗುವ ಮುಂಚೆ ಮನೆಗೆ ಬೀಗಹಾಕಿ ತಮಗೆ ಗೊತ್ತಿರುವವರ ಕೈಗೆ ಬೀಗದ ಕೈಕೊಟ್ಟು ಹೋಗಿದ್ದಾರೆ. ಅವರು ಕಾಲೇಜ್ ಹುಡುಗಿಯರಿಗೆ ಆ ಮನೆಯನ್ನು ಬಾಡಿಗೆಗೆ ಕೊಟ್ಟಿದ್ದಾರೆ. ಹುಡುಗಿಯರು ತಿಂಗಳಿಗೆ ಒಮ್ಮೆ ಬಾಡಿಗೆ ಹಣವನ್ನು ಬ್ಯಾಂಕಿನಲ್ಲಿ ತುಂಬುತ್ತಾರೆ.

ಇಂದಿನ ಪರಿಸ್ಥಿತಿಯಲ್ಲಿ ಆ ಮನೆ ಆ ಬಡಾವಣೆಯಲ್ಲಿ ಕುಬ್ಜವಾಗಿ ಕಂಡರು ಒಳಗೆ ಎಲ್ಲಾ ಸೌಕರ್ಯಗಳು ಇವೆ. ಮೂರು ಕೋಣೆಗಳ ಜೊತೆಗೆ ಒಂದು ಹಾಲ್, ಅಡಿಗೆಮನೆ, ಎರಡು ಸ್ನಾನದ ಕೋಣೆಗಳು ಮತ್ತು ಎರಡು ಟಾಯ್‌ಲೆಟ್‌ಗಳಿವೆ. ಬೆಂಗಳೂರಿನಲ್ಲಿ ಮನೆಯನ್ನು ಬಾಡಿಗೆಗೆ ಕೊಟ್ಟರೆ ಅನಂತರ ಖಾಲಿ ಮಾಡಿಸುವುದು ತುಂಬ ಕಷ್ಟ ಎಂಬ ಉದ್ದೇಶದಿಂದ ಓದುತ್ತಿರುವ ವಿದ್ಯಾರ್ಥಿಗಳಿಗೆ ಕೊಟ್ಟಿದ್ದಾರೆ.

ಪ್ರತಿಷ್ಠಿತ ವೈದ್ಯಕೀಯ ಕಾಲೇಜು ಒಂದರಲ್ಲಿ ಓದುತ್ತಿರುವ ಆ ಮೂವರು ವಿದ್ಯಾರ್ಥಿನಿಯರು ದೂರದ ಊರುಗಳಿಂದ ಬೆಂಗಳೂರಿಗೆ ಬಂದು ವೈದ್ಯಕೀಯ

ವಿದ್ಯಾಭ್ಯಾಸವನ್ನು ಮಾಡುತ್ತಿದ್ದಾರೆ. ಮೂವರು ಹತ್ತೊಂಭತ್ತು ಇಪ್ಪತ್ತು ವರ್ಷಗಳ ಹೊಸ್ತಿಲಲ್ಲಿದ್ದು , ಒಬ್ಬರಿಗಿಂತ ಒಬ್ಬರು ಸುಂದರವಾಗಿದ್ದಾರೆ. ಅವರ ತಂದೆ ತಾಯಿಯರು ಲಕ್ಷಾಂತರ ರೂಪಾಯಿಗಳು ದೇಣಿಗೆಸ್ನು ನೀಡಿ ವೈದ್ಯಕೀಯ ಸೀಟುಗಳನ್ನು ಕೊಡಿಸಿದ್ದಾರೆ. ಮೂವರಿಗೂ ದ್ವಿಚಕ್ರ ವಾಹನಗಳಿವೆ. ಕಲರ್ ಟಿವಿ, ವಿಸಿಪಿ, ವಾಷಿಂಗ್ ಮಷಿನ್, ಮೊಬೈಲ್ ಫೋನ್‌ಗಳನ್ನು ಕೊಡಿಸಿದ್ದಾರೆ. ಮೂವರು ಸೇರಿ ಒಂದು ಕಂಪ್ಯೂಟರ್‌ನ್ನು ಇಟ್ಟುಕೊಂಡಿದ್ದಾರೆ. ಅದಕ್ಕೆ ಇಂಟರ್‌ನೆಟ್ ಸಂಪರ್ಕವು ಇದೆ. ಅಡಿಗೆ ಮತ್ತಿತರ ಕೆಲಸಗಳನ್ನು ಮಾಡಲು ಒಬ್ಬಳು ಹೆಂಗಸನ್ನು ಇಟ್ಟುಕೊಂಡಿದ್ದಾರೆ.

ಇಷ್ಟೆಲ್ಲ ಇದ್ದ ಮೇಲೆ ಇವರು ಯಾಕೆ ಓದಬೇಕು ಎನ್ನುವ ಗುಮಾನಿ ನಿಮಗೆ ಎದ್ದಿರಬೇಕು...? ಅವರ ಪೋಷಕರು ತಮ್ಮ ಮಕ್ಕಳು ಹೇಗೊ ಓದು ಮುಗಿಸಿ ಡಿಗ್ರಿ ಸರ್ಟಿಫಿಕೇಟ್ ತೆಗೆದುಕೊಂಡು ಬಂದರೆ ಸಾಕು. ಒಬ್ಬ ಒಳ್ಳೆ ಡಾಕ್ಟರ್ರೊ.... ಇಂಜಿನಿಯರೊ ಹುಡುಗನನ್ನು ಹುಡುಕಿ ಮದುವೆ ಮಾಡಿಸುತ್ತಾರೆ. ಅನಂತರ ಒಂದು ಕಂಪ್ಯೂಟರ್ ತರಬೇತಿ ಕೇಂದ್ರವನ್ನೊ... ಒಂದು ನರ್ಸಿಂಗ್ ಹೋಂನ್ನೊ ತೆರೆಯುತ್ತಾರೆ. ಆಗ ಹುಡುಗ ಹುಡುಗಿ ಇಬ್ಬರೂ ಸೇರಿ ಹಣದ ಕೊಳ್ಳೆಯನ್ನೇ ಹೊಡೆಯಬಹುದು. ಇದು ಪೋಷಕರು ಯೋಚಿಸುತ್ತಿರುವ ಲೆಕ್ಕಾಚಾರಗಳು.

ಹುಡುಗಿಯರು ತಮ್ಮ ತಂದೆ ತಾಯಿ ಆಲೋಚನೆಗಳಿಗೆ ಸ್ಪಂದಿಸುವಂತಹ ಯೋಚನೆಗಳನ್ನೇ ಇಟ್ಟುಕೊಂಡಿದ್ದಾರೆ. ಜೊತೆಗೆ ಮದುವೆಗೆ ಮುಂಚೆ ಎಷ್ಟು ಸಾಧ್ಯವೊ ಅಷ್ಟು ಮಜಾ ಉಡಾಯಿಸಿಬಿಡಬೇಕು ಎಂದು ತೀರ್ಮಾನಿಸಿದ್ದಾರೆ. ಮದುವೆಯಾದರೆ ನಮ್ಮನ್ನು ಕೇಳಲು ಒಬ್ಬ ಗಂಡನಿರುತ್ತಾನೆ.... ಮಕ್ಕಳಾಗುತ್ತವೆ ಸಂಸಾರ ಎಂಬ ತರಲೆಗಳು ಶುರುವಾಗುತ್ತವೆ. ಹೀಗೆ ಏನೇನೊ ಆಲೋಚಿಸುತ್ತಿದ್ದರು.

ಮೂವರು ವಿದ್ಯಾರ್ಥಿನಿಯರು ಒಬ್ಬರಿಗಿಂತ ಒಬ್ಬರು ಸುಂದರಿಯರು. ಹಾಗೆ ನೋಡಿದರೆ ಎಲ್ಲಾ ಹುಡುಗಿಯರು ಯಾವುದೊ ಒಂದು ರೀತಿಯಲ್ಲಿ ಸುಂದರವಾಗಿರುತ್ತಾರೆ. ಅದು ಅವರ ಬಳುಕುವ ಸೊಂಟವಾಗಿರಬಹುದು... ಆಕರ್ಷಕ ಎದೆಗಳಾಗಿರಬಹುದು, ಕೆಂದುಟಿ.... ಗುಲಾಬಿ ಕೆನ್ನೆ... ಕೋಲು ಮುಖವಾಗಿರಬಹುದು, ನೀಳ ನಾಸಿಕ.... ಗುಳಿಬಿದ್ದ ಕೆನ್ನೆಗಳು... ಹೊಳೆಯುವ ಕಣ್ಣುಗಳು.... ಸುಂದರವಾದ ಮೈಬಣ್ಣ ಹೀಗೆ. ಅವರ ರೂಪದ ಬಗ್ಗೆ ಅವರಿಗೆ ಎಲ್ಲಿಲ್ಲದ ಹೆಮ್ಮೆ ಇದೆ . ತಮ್ಮ ಅಂಗಾಂಗಗಳನ್ನು ಕನ್ನಡಿಗಳ ಮುಂದೆ ತಾಸುಗಟ್ಟಲೆ ನಿಂತು ನೋಡಿಕೊಳ್ಳುತ್ತಾರೆ. ಸ್ನಾನದ ಕೋಣೆಯಲ್ಲಿ ಅರೆನಗ್ನ ದೇಹವನ್ನು ನೋಡಿಕೊಳ್ಳುತ್ತಾ ತಮ್ಮ ರೂಪಕ್ಕೆ ತಾವೆ ಮಾರುಹೋಗಿದ್ದಾರೆ.

ತಮ್ಮ ಸಹಪಾಟಿಗಳ ಕಣ್ಣುಗಳಲ್ಲಿ ತಮ್ಮ ಸೌಂದರ್ಯ ಕಾಣಿಸುತ್ತಿದೆ ತಾನೆ ಎಂದು ಗಿಡಗಳ ಕೆಳಗೆ, ಪಬ್‌ಗಳ ಒಳಗೆ ಮೋಟಾರ್ ಬೈಕ್ ಹಿಂದೆ, ಮುಂದೆ ಕುಳಿತುಕೊಂಡು ಆಗಾಗ ಪರೀಕ್ಷಿಸಿದ್ದಾರೆ. ವಿಶೇಷ ದಿನಗಳಲ್ಲಿ ಬ್ಯೂಟಿ ಪಾರ್‌ಲರ್‌ಗಳಿಗೆ ಹೋಗಿ ತಮಗೆ ಬೇಕಾದ ರೀತಿಯಲ್ಲಿ ತೆಳುವಾಗಿ ಮೇಕಪ್ ಮಾಡಿಕೊಳ್ಳುತ್ತಾರೆ. ಆದರೆ ಬ್ಲೀಚಿಂಗ್ ಆಗಲಿ, ಪೇಷಿಯಲ್ ಮೇಕಪ್ ಗಳಾಗಲಿ ಮಾಡಿಕೊಳ್ಳುವುದಿಲ್ಲ. ಹಾಗೆ ಒಮ್ಮೆ ಮಾಡಿಕೊಳ್ಳಲು ಪ್ರಾರಂಭಿಸಿ ಬಿಟ್ಟರೆ ಪದೇ ಪದೇ ಮಾಡಿಕೊಳ್ಳಬೇಕಾಗುತ್ತದೆ. ಪಾರ್‌ಲರ್‌ನವರು ಏನೇನೊ ಮಾಡಿ ಹಣ ಕಿತ್ತುಕೊಳ್ಳುವುದರ ಜೊತೆಗೆ ಮುಖದ ಅಂದವನ್ನೇ ಕೆಡಿಸಿಬಿಡುತ್ತಾರೆ ಎಂಬುದಾಗಿ ಮಾತನಾಡಿಕೊಳ್ಳುತ್ತಾರೆ. ನೈಸರ್ಗಿಕವಾಗಿಯೆ ಸುಂದರವಾಗಿರುವ ನಮಗೆ ಮೇಕಪ್ಪಾದರು ಯಾಕೆ ಎನ್ನುವ ಯೋಚನೆ ಅವರಿಗೆ ಆಗಾಗ ಬರುತ್ತದೆ.

ಮದುವೆಯಾದ ಮೇಲೆ, ವಯಸ್ಸಾದ ಮೇಲೆ ಗಂಡನ ಮುಂದೆ ಅಂದವಾಗಿ ಕಾಣಲು ಅದೆಲ್ಲ ತರಳೆಗಳು ಇದ್ದೆ ಇದೆ. ಇಷ್ಟಕ್ಕೂ ನಮಗೆ ವಯಸ್ಸಾಗುವುದು ಮಾತ್ರ ತೀರ ಅನ್ಯಾಯದ ಸಂಗತಿ ಎಂಬುದಾಗಿ ಆ ಮೂವರು ಸುಂದರಿಯರು ಆಗಾಗ ಮಾತನಾಡಿಕೊಳ್ಳುತ್ತಾರೆ. ಏಜಿಂಗ್ ಆಗುವುದಕ್ಕೆ ಕಾರಣವಾದ ಆ ಜೀನ್ಸ್‌ಗಳನ್ನು ಹೇಗಾದರೂ ಮಾಡಿ ಕಂಡು ಹಿಡಿದು ಅವುಗಳಿಗೆ ಚಿಕಿತ್ಸೆ ನೀಡಿ ಸುಂದರವಾದ ಹುಡುಗಿಯರ ವಯಸ್ಸನ್ನು ತಡೆಹಿಡಿದರೆ ಹೇಗೆ...? ಓ! ಅಂತಹ ವಿಷಯಗಳನ್ನು ಮಾತನಾಡಿಕೊಳ್ಳುವುದೇ ಅವರಿಗೆ ಒಂದು ಖುಷಿ.

ಗೋಡೆಯಲ್ಲಿ ಮೊಳೆಗೆ ತನ್ನನ್ನು ನೇತಾಕಿಕೊಂಡಿರುವ ಗಡಿಯಾರ ಟ್ರಿಣ್... ಟ್ರಿಣ್... ಎಂದು ಒಂಭತ್ತು ಸಲ ಬೆಲ್ಲು ಹೊಡೆದುಕೊಂಡಿತು. ಮೂವರು ಒಂದೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದು, ಕೆಲವೇ ದಿನಗಳಲ್ಲಿ ಆತ್ಮೀಯ ಗೆಳತಿಯರಾಗಿ ಹೋಗಿದ್ದರು. ಮೊದಲೆರಡು ತಿಂಗಳು ಹಗಲು ರಾತ್ರಿ ಓದಿ ಓದಿ ಆಯಾಸವಾಗಿದ್ದ ಅವರು ಆ ದಿನ ಒಂದು ಹೊಸ ಯೋಜನೆ ತಯಾರಿಸಿದ್ದರು. ಆಗಲೇ ಹುಡುಗರ ಜೊತೆಗೆ ಬೆಂಗಳೂರಿನ ಪಬ್‌ಗಳಲ್ಲಿ ಒಂದೊಂದು ಮಗ್ ಬೀರು ಕುಡಿದು ಮುಖಗಳನ್ನ ಚೆಲ್ಲೆನಿಸಿಕೊಂಡಿದ್ದರು. ಅದರ ರುಚಿಯನ್ನು ಮತ್ತೊಮ್ಮೆ ಸವಿಯಲು ಚಿಕನ್‌ಚಿಲ್ಲಿ, ಚಿಕನ್ ಬಿರಿಯಾನಿ ಪಾಕೆಟ್ಟುಗಳನ್ನು ಆರ್ಡರ್ ಮಾಡಿದ್ದರಿಂದ ಹೋಟಲ್ ಹುಡುಗ ಬಾಗಿಲು ಮುಂದೆ ನಿಂತು ಬೆಲ್ಲು ಬಾರಿಸಿದ. ಹುಡುಗಿಯರು ಬಾಗಿಲು ತೆಗೆದು ಪಾಕೆಟ್ಟುಗಳನ್ನು ಕೈಗೆ ತೆಗೆದುಕೊಂಡು ಹಣಕೊಟ್ಟು ಬಾಗಿಲು ಮುಚ್ಚಿದರು. ಮೊದಲೆ ಬೀರು ಬಾಟಲುಗಳನ್ನು ತಂದು ಫ್ರಿಡ್ಜ್‌ನಲ್ಲಿ ಇಟ್ಟುಬಿಟ್ಟಿದ್ದರು. ಆ ದಿನ ಅಡಿಗೆ

ಮಾಡುವವಳನ್ನು ಈ ದಿನ ರಾತ್ರಿಗೆ ನಾವೆ ಅಡಿಗೆ ಮಾಡಿಕೊಳ್ಳುತ್ತೇವೆಂದು ಮಧ್ಯಾಹ್ನವೆ ಕಳುಹಿಸಿಬಿಟ್ಟಿದ್ದರು.

ಮೂವರು ಒಬ್ಬರನ್ನೊಬ್ಬರು ನೋಡಿಕೊಂಡು ನಾಲಿಗೆ ಚಪ್ಪರಿಸುತ್ತ ಉಗುಳು ನುಂಗಿದರು. ಅವರ ಮುಖಗಳಲ್ಲಿ ಸ್ವಲ್ಪ ಭಯವು ತುಂಬಿಕೊಂಡಿತ್ತು. ಹೆಣ್ಣು ಮಕ್ಕಳಿಗೆ ಯಾವುದೇ ಕೊರತೆ ಇರಬಾರದು. ಅದು ಕೂಡ ಬೆಂಗಳೂರು ಬಾರಿ ದುಬಾರಿ. ಓದುತ್ತಿರುವುದು ವೈದ್ಯಕೀಯ ಎಂದು ಅವರ ತಂದೆ ತಾಯಿಯರು ಸಾಕಷ್ಟು ಹಣವನ್ನು ಕಳುಹಿಸಿಕೊಡುತ್ತಿದ್ದರು.

ಅವರಿಗೆ ಹಣದ ಕೊರತೆಯೂ ಇರಲಿಲ್ಲ. ದೇಶದಲ್ಲಿ ಎಷ್ಟೋ ಜನರಿಗೆ ಹಣ ಕರ್ಚುಮಾಡುವುದೆ ದೊಡ್ಡ ಸಮಸ್ಯೆಯಾಗಿಬಿಟ್ಟಿದೆ. ಅಂತಹ ಹಣವನ್ನೆಲ್ಲ ತಮ್ಮ ಮಕ್ಕಳಿಗೆ ಕೊಡುವ ಪೋಷಕರು ತಾವಂತು ಸುಖ ಪಡಲಿಲ್ಲ, ನಮ್ಮ ಮಕ್ಕಳಾದರು ಸುಖ ಪಡಲಿ ಎನ್ನುತ್ತಾರೆ. ಇಂತಹವರಿಗೆ ತಮ್ಮ ಮಕ್ಕಳು ಏನು ಮಾಡುತ್ತಿದ್ದಾರೆ....? ತಮ್ಮ ಸುತ್ತಲು ಏನು ನಡೆಯುತ್ತಿದೆ ಎನ್ನುವುದೇ ಗೊತ್ತಾಗುವುದಿಲ್ಲ. ಗೊತ್ತಾಗುವುದು ಅವರಿಗೆ ಬೇಕಾಗಿಲ್ಲ.

ಸುಂದರವಾದ ಈ ಮೂವರು ಹುಡುಗಿಯರು ತಾವು ಮಾಡಲಿರುವ ಸಾಹಸದಿಂದ ತಮಗೆ ಗೊತ್ತಿಲ್ಲದೆಯೆ ಮುಖಗಳ ತುಂಬ ರಕ್ತವನ್ನು ತುಂಬಿಕೊಂಡಿದ್ದಾರೆ. ಟಿವಿಯಲ್ಲಿ ಎಂ.ಟಿವಿ ಮ್ಯಾಜಿಕ್ ಚನಲ್‌ನಲ್ಲಿ ಪ್ರಾನ್ಸ್‌ನ ಮಾರ್ಟಿನ್ ಓಲೆ....ಓಲೆ... ಎಂದು ಹುಡುಗಿಯರ ಜೊತೆಗೆ ಕುಣಿಯುತ್ತಿದ್ದಾನೆ. ಮೂವರು ಡೈನಿಂಗ್ ಟೇಬಲ್ ಮುಂದೆ ಕುಳಿತುಕೊಂಡು, ಒಬ್ಬರನ್ನೊಬ್ಬರು ನೋಡಿಕೊಂಡು ತಮಗೆ ತಾವೆ ಧೈರ್ಯವನ್ನು ತುಂಬಿಕೊಂಡರು.

ಮೂವರು ಕ್ಯಾಸುಯಲ್ ಡ್ರಸ್ಸುಗಳಲ್ಲಿದ್ದು ಅವರ ಅಂಗಾಂಗಗಳು ಕ್ಯಾಸುಯಲ್‌ಸ್‌ನಲ್ಲಿ ಏರು ತಗ್ಗುಗಳಾಗಿ ಮಾರ್ಪಟ್ಟಿವೆ. ನೀಳ ಮೂಗಿನ ಕೃತಿಕಾ ತಲೆ ಕೂದಲನ್ನು ಹಿಂದಕ್ಕೆ ಎತ್ತಿಕಟ್ಟಿ ಬಿಳುಪಾದ ನಿಕ್ಕರ್ ತೊಟ್ಟು ಮೇಲೆ ಬರಿ ದೊಗಳೆ ಟಾಪ್ ಹಾಕಿಕೊಂಡಿದ್ದಾಳೆ. ಅವಳಿಗೆ ಬಂಗಳೂರಿನ ಚಳಿಯೂ ಬಿಸಿಯಾಗಿ ಕಾಣುತ್ತದೆ. ಹಾಗಾಗಿ ಅವಳು ಯಾವಾಗಲು ಫ್ಯಾನ್‌ನ್ನು ತನ್ನ ಸೊಂಟದಲ್ಲಿ ಇಟ್ಟುಕೊಂಡಂತೆ ಪ್ಯಾನ್ ಪಕ್ಕದಲ್ಲಿಯೆ ಓಡಾಡುತ್ತಿರುತ್ತಾಳೆ. ರೂಪಾಗೆ ಯಾವಾಗಲು ಚಳಿಯೆ. ಅದಕ್ಕಾಗಿ ಅವಳು ಯಾವಾಗಲು ಟೈಟ್ ಜೀನ್ಸ್ ಪ್ಯಾಂಟ್ ಹಾಕಿಕೊಂಡು ಅಷ್ಟೇ ಟೈಟಾದ ಪುಲ್ ಸ್ಲೀವ್ಸ್ ತೊಡಗಿರುತ್ತಾಳೆ. ಮನೆಯಲ್ಲಿರುವಾಗ ತಲೆ ಕೂದಲನ್ನು ಹಿಂದಕ್ಕೆ ಹರಡಿಕೊಂಡಿರುತ್ತಾಳೆ. ಕೂದಲನ್ನು ಕಟ್ಟಾಕಿದರೆ ಬೆಳೆಯುವುದಿಲ್ಲ ಎನ್ನುವುದು

ಅವಳ ಅನಿಸಿಕೆ. ಇನ್ನು ಅನು ಯಾವಾಗಲು ಅರೆಕೊರೆ ಕ್ಯಾಸುಯಲ್ಸ್ ಉಡುಗೆಯಲ್ಲಿರುತ್ತಾಳೆ ಇವಳು ಮೂಡ್ ಬಂದಾಗ ಕೃತಿಕ ಮತ್ತು ರೂಪಾಳ ಅಂಗಾಂಗಗಳನ್ನು ಗಂಡುಹುಡುಗನಂತೆ ಚಿವುಟುತ್ತಾ ಓಡಾಡುತ್ತಿರುತ್ತಾಳೆ. ಇವಳು ತನ್ನ ಹಿಂದಿನ ಜನ್ಮದಲ್ಲಿ ಒಳ್ಳೆ ರಸಿಕ ಗಂಡಾಗಿದ್ದವಳು ಎಂದು ಕೃತಿಕ, ರೂಪ ಹಂಗಿಸುತ್ತಿರುತ್ತಾರೆ.

ಟೇಬಲಿನ ಮೇಲೆ ಮೂರು ಮಗ್ಗುಗಳನ್ನಿಟ್ಟು ಕಿಂಗ್‌ಫಿಷರ್ ಬೀರು ಬಾಟಲುಗಳನ್ನು ರಿಮೂವರ್‌ನಲ್ಲಿ ನಿಧಾನವಾಗಿ ತೆಗೆಯುತ್ತ ಗ್ಯಾಸನ್ನು ಹೊರಗೆಡವಿ ಮುಚ್ಚಳಗಳನ್ನು ತೆಗೆದರು. ಅಷ್ಟರಲ್ಲಿ ಆ ಬೀರು ಬಾಟಲುಗಳು ನಮ್ಮನ್ನು ಕುಡಿಯುವ ತಾಕತ್ತು ನಿಗಿಲ್ಲ ಎನ್ನುವಂತೆ ಬುಸ್ಸೆಂದು ಹೊರಚೆಲ್ಲಿ ಸುತ್ತಲು ಕಾರಿಕೊಂಡಿದ್ದವು. ಮೂವರು ನಗುತ್ತ ''ಏಯ್ ಹಾಗಲ್ಲ ಕಣೆ ಹೀಗೆ ನನಗೆ ಕೊಡೆ, ನಾನು ತೆಗಿತೀನಿ ನೋಡು'' ಎಂದು ಕೈ ಕೈ ಬದಲಾಯಿಸಿದರು. ಆದರೆ ಯಾರೂ ಬೀರು ಬಾಟಲುಗಳಿಂದ ನೊರೆ ಉಕ್ಕಿ ಬರುವುದನ್ನು ತಡಯಲಾಗಲಿಲ್ಲ. ಅಂತು ಮೂರು ಮಗ್ಗುಗಳಿಗೆ ಬೀರು ತುಂಬಿದರು. ಬೀರು ಜೊತೆಗೆ ಸೋಡಾ ಬೆರಸಬೇಕೊ.... ಬೇಡವೊ ಎನ್ನುವ ಜಿಜ್ಞಾಸೆಯಲ್ಲಿ ಸಿಕ್ಕಿಕೊಂಡರು. ಕೊನೆಗೆ ಇಲ್ಲ ಬೀರು ಜೊತೆಗೆ ಏನೂ ಬೆರೆಸುವುದಿಲ್ಲ ಎನ್ನುವ ತೀರ್ಮಾನಕ್ಕೆ ಬಂದರು.

ಮೂವರು ತಮ್ಮ ಸುಂದರವಾದ ಕೈಗಳಿಗೆ ಮಗ್ಗುಗಳನ್ನು ತೆಗೆದುಕೊಂಡು ''ಚಿಯರ್ಸ್ '' ಎಂದರು. ಗೋಡೆಯಲ್ಲಿದ್ದ ಗಡಿಯಾರ ''ಟ್ರಿಣ್...'' ಎಂದು ಬಾರಿಸಿತು. ಮೂವರು ಗಡಿಯಾರದ ಕಡೆಗೆ ನೋಡಿ , ಕಣ್ಣುಗಳನ್ನು ಮುಚ್ಚಿಕೊಂಡು ಒಂದೊಂದು ಗುಟುಕು ಕುಡಿದರು. ಗಂಟಲಲ್ಲಿ ಕರಕರನೆ ಸ್ವಲ್ಪ ಕಹಿಯಾಗಿ ಏನೋ ಇಳಿದು ಹೋದಂತಾಗಿ ಮುಖಗಳನ್ನು ಕಹಿ ಮಾಡಿಕೊಂಡರು. ಮಗ್ಗುಗಳನ್ನು ಟೇಬಲ್ ಮೇಲಿಟ್ಟು ಚಿಲ್ಲಿ ಚಿಕನ್ ತುಂಡುಗಳನ್ನು ತೆಗೆದುಕೊಂಡು ತುಟಿಗಳ ಮೇಲೆ ಇಟ್ಟುಕೊಂಡರು. ಲಿಪ್‌ಸ್ಟಿಕ್ ಬಳಿದುಕೊಂಡು ಸುಂದರವಾಗಿ ಕಾಣುವ, ಯಾವಾಗಲು ಹಣ್ಣಿನ ರಸಗಳನ್ನು ಸವಿಯುತ್ತಿದ್ದ ತುಟಿಗಳು ಯಾಕೊ ಏನೊ ತುಸು ಅವಕ್ಕಾಗಿ ಎಲಿಎಲಿ ಹೊರಳಾಡಿ ನಾಲಿಗೆಯ ಸಹಾಯದಿಂದ ಕಾರವನ್ನು ತುಸು ಕಡಿಮೆ ಮಾಡಿಕೊಂಡವು. ಈ ಹುಡುಗಿಯರಿಗೆ ಇಂತಹ ದುರ್ಬುದ್ಧಿ ಬರಬಾರದಿತ್ತು ಎಂದುಕೊಂಡರೆ ತುಟಿಗಳು, ಕೆನ್ನೆಗಳು ತಮ್ಮ ಸ್ನಾಯುಗಳನ್ನು ಸಡಿಲಗೊಳಿಸಿಕೊಂಡವು.

ಚಿಲ್ಲಿ ಚಿಕನ್ ಜೊತೆಗೆ, ಬೀರು ಕಾರುಕಾರಾಗಿ ಅವರ ಗಂಟಲೊಳಗೆ ಇಳಿದುಹೋಗುತ್ತಿದ್ದಂತೆ ಅವರ ತಲೆಗಳು ಸೂರ್ಯನ ಸುತ್ತ ಭೂಮಿ ತಿರುಗುವಂತೆ

ಗಿರಗಿರ ತಿರುಗ ತೊಡಗಿದವು. ಯಾವುದೊ ಹೇಳಲಾರದ ಮಜಾ ಅವರ ತಲೆಯ ಒಳಗೆ ಓಲಾಡುತ್ತಿತ್ತು. ಅನು ಎದ್ದು ನಿಂತುಕೊಂಡು ಕೃತಿಕಾ ಮತ್ತು ರೂಪಾಳ ಕಣ್ಣುಗಳ ಆಳಕ್ಕೆ ಇಣಿಕಿ ನೋಡಿದಳು. ಇವಳು ಖಂಡಿತ ನಮ್ಮನ್ನು ಚಿವುಟುತ್ತಾಳೆ ಎಂದುಕೊಂಡ ಕೃತಿಕಾ ಮತ್ತು ರೂಪ ಒಳಗೊಳಗೆ ಪುಳಕಗೊಂಡರು. ಒಂದೆರಡು ಹೆಜ್ಜೆ ಹಾಕಿದ ಅನು ಕೈಗಳನ್ನು ಮೇಲಕ್ಕೆತ್ತಿಕೊಂಡು ಮೈಯನ್ನು ಸಡಿಲಿಸಿಕೊಳ್ಳುತ್ತಾ ಗುಟುಕರಿಸಿದಳು. ತಬ್ಬಿಬ್ಬಾದ ಕೃತಿಕಾ ಮತ್ತು ರೂಪ ಅವಳ ಕಡೆಗೆ ನೋಡತೊಡಗಿದರು.

ಅನುಗೆ ಏನಾಯಿತೊ ಏನೊ ಮತ್ತೆ ಹಿಂದಕ್ಕೆ ಬಂದು ಕುರ್ಚಿ ಮೇಲೆ ಕುಳಿತುಕೊಂಡು ಒಂದು ಪೀಸ್ ಚಿಕನ್ ತೆಗೆದುಕೊಂಡು ಬಾಯಲ್ಲಿಟ್ಟು ಕೊಂಡಳು. ಹುಡುಗಿಯರನ್ನು ಚಿವುಟಿ ಏನು ಪ್ರಯೋಜನ ಎನ್ನುವುದು ಅವಳ ನಿರಾಶೆಯಾಗಿರಬೇಕು. ''ನೋಡು ಅನು ಈ ವಿಷಯ ಕಾಲೇಜಿನಲ್ಲಿ ಯಾರಿಗೂ ಗೊತ್ತಾಗಬಾರದು'' ಕೃತಿಕಾ ಹೇಳುತ್ತಿದ್ದಂತೆ ''ಹೇಳಿದರೆ ಏನು ಬಿಡೆ. ಎಲ್ಲಾ ಹುಡುಗರು, ಹುಡುಗಿಯರು ಕುಡಿತಾರೆ '' ಎಂದಳು ಅನು. ಕೃತಿಕಾ ಮತ್ತು ರೂಪಾ ಇಬ್ಬರು ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತಾ ನಾವು ಏನೊ ತಪ್ಪು ಮಾಡ್ತಾ ಇದ್ದೀವಿ ಎಂದು ಕಣ್ಣುಗಳಲ್ಲೇ ಮಾತನಾಡಿಕೊಂಡರು.

''ನಾವು ಎಲ್ಲ ಸೇರಿ ತಪ್ಪು ಮಾಡಿದ್ದೀವಿ'' ಎಂದಳು ಅನು. ''ಯಾಕೆ..?'' ಇಬ್ಬರು ಒಟ್ಟಾಗಿ ಪ್ರಶ್ನಿಸಿದರು. ''ಯಾಕೆ...? ಹುಡುಗರ್ನ ಜೊತೆಗೆ ಇನ್‌ವೈಟ್ ಮಾಡಬೇಕಾಗಿತ್ತು'' ಎಂದಳು ಅನು. ಇಬ್ಬರು ಮೊದಲಿಗೆ ಹೌಹಾರಿದರು ''ಇವಳು ಹೇಳೊದು ಸರೀನೆ. ಆದರೆ ಈ ತರಹ ಮನೆಯಲ್ಲಿ ಕುಡಿಯುವಾಗ ಬಾಯ್ ಫ್ರೆಂಡ್ಸ್‌ನ ಇನ್‌ವೈಟ್ ಮಾಡಬಾರದು. ಅಮಲಿನಲ್ಲಿ ಆಮೇಲೆ ಏನೇನೊ ಆಗಿಬಿಡುತ್ತೊ ಏನೊ....?'' ಕೃತಿಕಾ ಹೇಳಿದಳು. ''ಏನು ಆಗುವುದಿಲ್ಲ ಬಿಡೆ. ಮೆಡಿಕಲ್ ಸೈನ್ಸ್ ಸ್ಟುಡೆಂಟ್ಸ್ ಹೀಗ್ ಹೇಳಿಬಿಟ್ಟರೆ ಮಿಕ್ಕವರ ಗತಿ ಏನು...? ಕಮಾನ್ ಕರ್ಲ್ಸ್... ಉಳಿದಿದ್ದನ್ನ ನಿಮ್ಮ ನಿಮ್ಮ ಮಗ್ಗುಗಳಿಗೆ ಸುರಿದುಕೊಳ್ಳಿ'' ಅನು ಆಜ್ಞೆಮಾಡಿದಳು. ನಿಧಾನವಾಗಿ ಮೂವರು ಮಗ್ಗುಗಳಿಗೆ ಸುರಿಯುತ್ತ ಅಕ್ಕಪಕ್ಕದಲ್ಲೆಲ್ಲ ಚೆಲ್ಲುತ್ತಾ ಗುಟುಕರಿಸಿದರು.

''ಕಿಂಗ್ ಫಿಷರ್‌ಗಿಂತ ನಾಕ್ ಔಟ್ ಚೆನ್ನಾಗಿರುತ್ತಂತೆ '' ರೂಪಾ ಹೇಳಿದಳು.

''ಕಿಂಗ್ ಫಿಷರ್‌ಗೆ ಔಟ್ ಆಗಿದ್ದೀರ. ಇನ್ನು ನಾಕ್‌ಔಟ್‌ಗೆ ಫುಲ್ ಔಟ್ ಆಗಿಬಿಡ್ತೀರ. ಅದೆಲ್ಲಾ ಈಗ್ಯಾಕೆ...? ಇದನ್ನು ಮುಗಿಸಿ'' ಅನು ಮಗ್ಗನ್ನು ಕೈಗೆ ತೆಗೆದುಕೊಳ್ಳುತ್ತಾ ಹೇಳಿದಳು.

ಮೂವಾರಿಗೂ ಈಗ ನಿಜವಾಗಿಯೂ ತಲೆ ತಿರುಗುತ್ತಿತ್ತು. ಯಾವಾಗಲೊ ಒಮ್ಮೆ ಹುಡುಗರ ಜೊತೆಗೆ ದಿಗಿಲು ದಿಗಿಲಾಗಿ ಅಕ್ಕಪಕ್ಕ ನೋಡುತ್ತ ಪಬ್‌ನಲ್ಲಿ ಕುಳಿತುಕೊಂಡು ಅರ್ಧ ಮಗ್ಗು ಬೀರು ಕುಡಿದಿದ್ದ ಅವರಿಗೆ ಈಗ ಕುಡಿತದ ಅಮಲೇರಿತ್ತು. ಇಂತಹ ಸಮಯದಲ್ಲಿ ಬಾಯ್ ಫ್ರೆಂಡ್ಸ್ ಪಕ್ಕದಲ್ಲಿ ಇದ್ದಿದ್ದರೆ....? ತಮ್ಮ ಸಹಪಾಟಿಗಳನ್ನು ನೆನೆದುಕೊಂಡು ತುಟಿಗಳನ್ನು ಚಪ್ಪರಿಸಿಕೊಂಡರು. ಅವರು ಧರಿಸಿದ್ದ ಉಡುಪುಗಳೆಲ್ಲ ಅಸ್ತವ್ಯಸ್ತಗೊಂಡಿದ್ದವು. ಆದರೆ ಏನು ಪ್ರಯೋಜನ ಅದನ್ನು ನೋಡಲು ಅಲ್ಲಿ ಯಾವ ಹುಡುಗನು ಇರಲಿಲ್ಲ.

''ಯುರೋಪ್ ದೇಶಗಳಲ್ಲಿ ಲೆಸಿಬಿಯನ್ಸ್ ಇರ‍್ತಾರೆ... ಗೇಸ್ ಇರ‍್ತಾರೆ... ಗಂಡು ಗಂಡುಗಳೆ, ಹೆಣ್ಣು ಹೆಣ್ಣುಗಳನ್ನೇ ಮದುವೆ ಮಾಡಿಕೊಳ್ತಾರಂತೆ....?'' ಸೋಫಾದಲ್ಲಿ ತೊಡೆಗಳನ್ನು ಉರುಳಾಡಿಸುತ್ತ ಅನು ಹೇಳಿದಳು. ಬೆಚ್ಚಿಬಿದ್ದ ಕೃತಿಕಾ ಮತ್ತು ರೂಪ ಒಬ್ಬರನ್ನೊಬ್ಬರು ನೋಡಿಕೊಂಡರು. ಅವರ ಕಣ್ಣೋಟಗಳು ಒಂದು ಕಡೆ ನಿಲ್ಲಲಿಲ್ಲ.

''ಕೃತಿಕಾ ಎಲ್ಲಿದ್ದಿಯೆ...?'' ರೂಪಾ ಕಣ್ಣುಗಳನ್ನು ಅಗಲವಾಗಿಸಿಕೊಂಡು ನೋಡಿದಳು. ರೂಪಾಳ ಅವಸ್ಥೆಯೂ ಅದೆ ಆಗಿತ್ತು. ''ಒಂದೊಂದು ಬೀರು ಬಾಟ್ಲು ಕುಡಿದೆ ಈಗಾಗಿಬಿಟ್ಟರೆ... ಇನ್ನು ವಿಸ್ಕಿ ರಮ್ಮು ಜಿನ್ನು ಕುಡಿಯೋರ ಗತಿ ಏನಾಗಬಹುದು...?''ಅನು ಕಿಲಕಿಲನೆ ನಗುತ್ತಾ ಹೇಳಿಗಳು. ಸುಮಾರು ಹೊತ್ತು ತಮ್ಮ ಗೆಳೆಯರ ಬಗ್ಗೆ, ಗೆಳತಿಯರ ಬಗ್ಗೆ ,ಕಾಲೇಜ್ ಬಗ್ಗೆ, ಅಧ್ಯಾಪಕರ ಬಗ್ಗೆ ಇಲ್ಲ ಸಲ್ಲದ ಕಥೆಗಳನ್ನು ಹೇಳಿಕೊಂಡರು. ಕಾಲೇಜಿನಲ್ಲಿದ್ದ ಪ್ರೇಮಿಗಳ ಒಂದು ದೊಡ್ಡ ಪಟ್ಟಿಯನ್ನೇ ಅವರು ತಯಾರಿಸಿದರು. ಕೊನೆಗೂ ಬಾಯ್ ಫ್ರೆಂಡ್ಸ್ ಇಲ್ಲದ ರಾತ್ರಿಯನ್ನು ಶಪಿಸುತ್ತ ಎದ್ದುಬಿದ್ದು ತೂರಾಡುತ್ತ ಒಂದೇ ಮಂಚದಲ್ಲಿ ತೆಗೆದು ಬಿಸಾಕಿದ ಬಟ್ಟೆಗಳಂತೆ ಉರುಳಿಕೊಂಡರು.

* * *

ಕಾಲೇಜಿನ ಕ್ಯಾಂಪಸ್‌ನಲ್ಲಿ ವಿದ್ಯಾರ್ಥಿನಿಯರು ಮತ್ತು ವಿದ್ಯಾರ್ಥಿಗಳು ಯಾವ ಭೇದ ಭಾವಗಳು ಇಲ್ಲದೆ ಜೋಡಿ ಜೋಡಿಯಾಗಿ ಕೈ ಕೈ ಸೋಕಿಕೊಂಡು ನಗುನಗುತ್ತಾ ಓಡಾಡುತ್ತಿದ್ದಾರೆ. ಪ್ರಪಂಚದ ಮೂಲೆ ಮೂಲೆಯಲ್ಲಿರುವ ಎಲ್ಲಾ ರೀತಿಯ ಲೇಟೆಸ್ಟ್ ಪ್ಯಾಷನ್‌ನ ಸ್ಯಾಂಪಲುಗಳೆಲ್ಲ ಆ ಕಾಲೇಜಿನ ಕ್ಯಾಂಪಸ್‌ನಲ್ಲಿ ಕಾಣಿಸುತ್ತಿದ್ದವು. ಆದರೆ ಅದೇ ದಕ್ಷಿಣ ಭಾರತದ ಸಾಂಪ್ರದಾಯಿಕ ಮತ್ತು ಸೊಗಸಾದ ಉಡುಪುಗಳಾದ ಲಂಗಾ ದಾವಣಿಯಾಗಲಿ, ಸೀರೆ ಕುಪ್ಪಸವಾಗಲಿ, ಉತ್ತರಭಾರತದ ಚುಡಿದಾರ್, ಗಾಗ್ರಾ ಡ್ರೆಸ್‌ಗಳಾಗಲಿ ಆ ಕ್ಯಾಂಪಸ್‌ನಲ್ಲಿ ಎಲ್ಲೂ ಕಾಣಿಸುತ್ತಿಲ್ಲ.

''ಈ ಹೆಣ್ಣು ಮಕ್ಕಳಿಗೆಲ್ಲ ಏನಾಗಿದೆ...? ಹೋಗಲಿ ಇವರ ಪೋಷಕರಾದರು

ಲಕ್ಷಣವಾಗಿ ಒಂದೊಂದು ದಿನ ಲಂಗಾ ದಾವಣಿ... ಮಿಡಿ ಚುಡಿದಾರ್ ಫ್ರಾಕ್ ಧರಿಸಿ ಎಂದು ಯಾಕಾದರು ಹೇಳೊದಿಲ್ಲ...? ಪೋಷಕರು ತಮ್ಮ ಮಕ್ಕಳಿಗೆ ಅಧೀನವಾಗಿ ಹೋಗಿದ್ದಾರೊ... ಇಲ್ಲ ಅವರಿಗೆ ಮಕ್ಕಳ ಬಗ್ಗೆ ತಿಳಿದುಕೊಳ್ಳುವ ಸಮಯ ಇಲ್ಲವೊ...? ಹೆಣ್ಣು ಮಕ್ಕಳು ಈ ರೀತಿ ಅರೆಕೊರೆ ಬಟ್ಟೆಗಳನ್ನು ಧರಿಸಿ ಓಡಾಡುವುದು ಪೋಷಕರಿಗೆ ಹೆಮ್ಮೆ ತರಿಸುತ್ತದೊ ಏನೊ...? ತಮ್ಮ ಮಕ್ಕಳ ಮೇಲೆ ಯಾರಾದರು ಹತ್ಯಾಚಾರ ನಡೆಸಿದರೆ ಹೇಗೆ ಎನ್ನುವ ಆಲೋಚನೆ ಬೇಡವೆ...? ಪೊಲೀಸರು ಎಲ್ಲವನ್ನು ನೋಡಿಕೊಳ್ಳುತ್ತಾರೆ ಎನ್ನುವ ಧೈರ್ಯವೆ...? ನಾವೇನೂ ಸಂತೋಷಪಡಲಿಲ್ಲ, ನಮ್ಮ ಮಕ್ಕಳಾದರು ಸಂತೋಷವಾಗಿರಲಿ ಎಂದುಕೊಂಡಿರಬೇಕು. ಅದೇಕೊ ಎಲ್ಲರೂ ಒಂದೇ ರೀತಿಯಾಗಿ ಯೋಚಿಸುತ್ತಿರುವಂತೆ ಕಾಣಿಸುತ್ತಿದೆ. ಪ್ರಪಂಚ ನಡೆಯುವ ದಾರಿಯಲ್ಲಿ ತಾನೆ ಎಲ್ಲರೂ ನಡೆಯಬೇಕು.

ಏನೊ ಈ ಕಾಲದ ವಿದ್ಯಾರ್ಥಿಗಳಿಗೆ ಕೋಪ ತಾಪ ಏನೂ ಇಲ್ಲ... ಒಂದು ಸ್ಟೈಕ್ ಇಲ್ಲ ... ಒಂದು ಪ್ರೊಟೆಸ್ಟ್ ಇಲ್ಲ ... ಸಾಂಸ್ಕೃತಿಕ ಚಟುವಟಿಕೆಗಳಿಲ್ಲ ...ಬರ್ತಾರೆ .... ಪಾಠ ಮಾಡಿದರೆ ಕೇಳ್ತಾರೆ.... ಪಾಠ ಮಾಡ್ಲಿಲ್ಲ ಅಂದರೆ ಮನೆಗೆ ಹೊರಟು ಹೋಗ್ತಾರೆ '' ಲಕ್ಚರರ್ ರವಿಚಂದ್ರನ್ ಹೇಳುತ್ತಿದ್ದಂತೆ ''ಅದೆಲ್ಲಾ ಇಂದಿರಾಗಾಂಧಿ ಹಾಕಿದ ತುರ್ತುಪರಿಸ್ಥಿರಿಯಿಂದ ಆಗಿದ್ದು. ಕಾಲೇಜುಗಳಲ್ಲಿದ್ದ ವಿದ್ಯಾರ್ಥಿಗಳ ಯುನಿಯನ್‌ಗಳನ್ನೆಲ್ಲ ಕಿತ್ತು ಬಿಸಾಡಿಬಿಟ್ರು. ಸಿಕ್ಕಿ ಸಿಕ್ಕಿದವರ್ನೆಲ್ಲ ಪೊಲೀಸರು ಗೋಲಿಬಾರ್ ಮಾಡಿ ಸಾಯಿಸಿಬಿಟ್ರು. ಆಗಿಂದ ಇದುವರೆಗೂ ಚೆತರಿಸಿಕೊಳ್ಳಲಿಲ್ಲ'' ಎಂದರು ಲಕ್ಚರರ್ ವೆಂಕಟೇಶ್.

''ನೀವು ಹೇಳೊದು ತಪ್ಪು. ಇಂದಿರಾಗಾಂಧಿ ಅಂತಹವರು ಈ ದೇಶಕ್ಕೆ ಈಗ ತುರ್ತಾಗಿ ಬೇಕಾಗಿದೆ. ನಮ್ಮ ದೇಶದಲ್ಲಿ ಐದು ವರ್ಷಕ್ಕೊಂದು ಸಲ, ಒಂದು ವರ್ಷ ತುರ್ತು ಪರಿಸ್ಥಿತಿ ಹಾಕಬೇಕು. ಇಂದಿರಾಗಾಂಧಿ ತುರ್ತು ಪರಿಸ್ಥಿತಿ ಹಾಕಿದ ಮೇಲೆ ತಾನೆ ಜೆ.ಪಿ. ನಾರಾಯಣ ಅವರು ಜನತಾ ಪಾರ್ಟಿ ಕಟ್ಟಿ ಗೆದ್ದಿದ್ದು. ಅದಾದ ಮೇಲೆ ಕರ್ನಾಟಕದಲ್ಲಿ ರೈತ ಚಳುವಳಿ ಬಂಡಾಯ ಚಳುವಳಿ ದಲಿತ ಚಳುವಳುಗಳು ಹುಟ್ಟಿದ್ದು. ಒಟ್ಟಿನಲ್ಲಿ ವಿದ್ಯಾರ್ಥಿಗಳಿಗೆ ಸ್ಟ್ರೈಕ್ ಮಾಡುವುದಕ್ಕೆ ಸಮಯ ಎಲ್ಲಿದೆ...? ಬೆಳಗ್ಗೆ ಆರು ಗಂಟೆಯಿಂದ ಒಂಭತ್ತು ಗಂಟೆಯವರೆಗೂ ಟ್ಯೂಷನ್ ಹೇಳಿ ದುಡ್ಡು ಮಾಡ್ತೀವಿ. ಹತ್ತುಗಂಟೆಯಿಂದ ಸಾಯಂಕಾಲ ಆರು ಗಂಟೆವರೆಗೂ ಕಾಲೇಜಿನಲ್ಲಿ ಪಾಠ ಹೇಳಿಕೊಡ್ತೀವಿ. ಸಾಧ್ಯವಾದರೆ ರಾತ್ರೀನೂ ಪಾಠ ಹೇಳ್ತೀವಿ. ಅವರಿಗೆ ಸ್ಟ್ರೈಕ್ ಮಾಡುವುದಕ್ಕೆ ಸಮಯ ಎಲ್ಲಿ ಕೊಡ್ತೀವಿ. ಪೋಷಕರು ಸಾವಿರಾರು ರೂಪಾಯಿ

ದುಡ್ಡುಕೊಟ್ಟು ಟ್ಯೂಷನ್ನಾಕೆ ಮಕ್ಕಳು ಓದದೆ ಇದ್ದರೆ ಸುಮ್ಮನೆ ಇರ್ತಾರಾ...? ಎಲ್ಲಾನು ನಾವೆ ಹಾಳು ಮಾಡಿಬಿಟ್ಟವಿ. ಇನ್ನೂ ಏನೇನು ನೋಡಬೇಕೊ ಏನೊ....?'' ರವಿಚಂದ್ರನ್ ಹೀಗೆ ಏನೇನೊ ಹೇಳುತ್ತಿದ್ದರು.

ಇಬ್ಬರು ಅಧ್ಯಾಪಕರುಗಳು ತಮ್ಮ ಅಧ್ಯಯನ ಕೊಠಡಿಯಲ್ಲಿ ಕುಳಿತುಕೊಂಡು ಸಿಗರೇಟ್ ಸೇದುತ್ತಾ ಮಾತನಾಡಿಕೊಳ್ಳುತ್ತಿದ್ದಾರೆ. ''ಏನೋರಿ ರವಿಚಂದ್ರನ್. ಕಾಲ ಪೂರ್ತಿಯಾಗಿ ಕೆಟ್ಟುಹೋಗ್ತಾಇದೆ. ನಮ್ಮ ಕಾಲದಲ್ಲಿ ಒಂದು ಹುಡುಗೀನ ಮಾತನಾಡಿಸಬೇಕಾದರೆ ಆರು ತಿಂಗಳೊ.... ಒಂದು ವರ್ಷಾನೊ ಕಾಯಬೇಕಾಗಿತ್ತು. ಈಗ ಏನೂ ಇಲ್ಲ, ಬರಿ ಒಂದು ಕಣ್ಣು ಸನ್ನೆ ... ಇಲ್ಲ ಒಂದು ನಗು. ಜಮ್ ಅಂತ ಗಾಡಿಯಲ್ಲಿ ಕುಳಿತುಕೊಂಡು ಹೊರಟು ಬಿಡ್ತಾರೆ. ಹುಡುಗನ ಹಿಂದೆ ಹುಡುಗಿ, ಇಲ್ಲ ಹುಡುಗಿ ಹಿಂದೆ ಹುಡುಗ ಇಬ್ಬರೂ ತಬ್ಬಿಕೊಂಡು ಆಕಾಶದಲ್ಲಿ ಹಕ್ಕಿಗಳು ಹೋದಂತೆ ಹೊರಟೋಗ್ತಾರೆ. ತುಃ ಅಲ್ಲಿ ನೋಡಿರಿ ?'' ಎಂದು ಇಬ್ಬರು ಕಿಟಕಿಯಲ್ಲಿ ಹೊರಕ್ಕೆ ನೋಡಿದರು. ಗಿಡಗಳ ಮರೆಯಲ್ಲಿ ಹುಡುಗ ಹುಡುಗಿ ಒಬ್ಬರನ್ನೊಬ್ಬರು ತಬ್ಬಿಕೊಂಡು ಚುಂಬಿಸುತ್ತಿದ್ದಾರೆ. ''ಕಾಲೇಜ್ ಕ್ಯಾಂಪಸ್ ಒಳಗೇನೆ ಈ ಗತಿಯಾದರೆ ಹೇಗ್ರಿ ರವಿಚಂದ್ರನ್...?'' ವೆಂಕಟೇಶ್ ಹೇಳಿದ. ''ಏನೊ ಎಲ್ಲಾ ನಮ್ಮ ಹಣೆ ಬರಹ. ನಮಗೆ ಏನೂ ಗೊತ್ತೆ ಇಲ್ಲ. ಬೆಲ್ಲು ಬಾರಿಸಿದರೆ ಪಾಠ ಹೇಳೊದು, ಬೆಲ್ಲು ಬಾರಿಸಿದರೆ ಮನೆ ಸೇರಿಕೊಳ್ಳೊದು. ನಮಗೂ ಅದಕ್ಕೂ ಯಾವ ಸಂಬಂಧಾನು ಇಲ್ಲ. ಹೊಟ್ಟೆ ಪಾಡ್ರಿ, ನಮಗೆ ಇಷ್ಟ ಇಲ್ಲ ಅಂದ್ರೆ ಯಾರು ಕೇಳ್ತಾರೆ...? ಇಷ್ಟ ಇದ್ರೆ ಪಾಠ ಮಾಡಿ ಇಲ್ಲ ಹೊರಡಿ ಅಂತಾರೆ...'' ಇಬ್ಬರು ಪೆಚ್ಚು ಮೋರೆ ಹಾಕಿಕೊಂಡು ಒಬ್ಬರನ್ನೊಬ್ಬರು ನೋಡುತ್ತಾ ಕುಳಿತುಕೊಂಡರು.

''ಆ ಅಮೆರಿಕಾ, ಯುರೋಪ್ ದೇಶಗಳಿಂದಾನೆ ಎಲ್ಲಾ ತರ್ಲೇನೂ, ಮದುವೆ ಆಗದೆ ಇರೊ ಮೈನರ್ ಹೆಣ್ಣುಮಕ್ಕಳಿಗೂ ಮಕ್ಕಳು ಆಗ್ತವಂತೆ. ಅವರಿಗೆ ಎಂಗ್ ಮದರ್ಸ್ ಸ್ಟೈಫಂಡ್ ಬೇರೆ ಕೊಡ್ತಾರಂತೆ. ಮದುವೇಗೆ ಮುಂಚೇನೆ ಹುಡುಗ ಹುಡುಗಿ ಒಟ್ಟಾಗಿರ್ತಾರಂತೆ. ಆಮೇಲೆ ಇಷ್ಟವಾದರೆ ಮದುವೆ ಆಗಬಹುದು. ಇಲ್ಲ ಅಂದರೆ ಬೇರೆ ಆಗಬಹುದು. ಮಿಡ್ಲಿಸ್ಕೂಲ್‌ನಲ್ಲೆ ಸೆಕ್ಸ್ ಎಜುಕೇಷನ್ ಕೊಡ್ತಾರಂತೆ. ಶಾಲೆ, ಕಾಲೇಜ್ ಕ್ಯಾಂಪಸ್‌ಗಳಲ್ಲೆ ಕಂಡೋಮ್ ಡಿಸ್ಪೆನ್ಸರಿಗಳು ಇರ್ತವಂತೆ. ಅದೆಷ್ಟೋ ಮಕ್ಕಳು ಅನಾಥವಾಗಿಬಿಟ್ಟವಿಯಂತೆ...'' ಹೀಗೆ ವೆಂಕಟೇಶ್ ಹೇಳುತ್ತಿದ್ದರು. ರವಿಚಂದ್ರನ್ ''ಅದೆಲ್ಲಾ ಇನ್ನೇನು ನಮ್ಮ ದೇಶದಲ್ಲೂ ಬಂದು ಬಿಡುತ್ತೆ ಬಿಡಿ. ಈಗ್ಲೆ ಎಷ್ಟೊ ಜನ ಮದುವೆ ಇಲ್ಲದೇನೆ ಒಟ್ಟಿಗೆ ಜೀವನ ಮಾಡ್ತಾ ಇಲ್ಲವೆ...?''

ಹೀಗೆ ಅವರಿಬ್ಬರು ಮಾತನಾಡುತ್ತಿದ್ದಂತೆ ಒಳಗೆ ಬಂದ ಅಧ್ಯಾಪಕಿಯೊಬ್ಬರು "ಏನ್ ಸಾರ್ ಕ್ಲಾಸಸ್ ಇಲ್ಲವೆ...?" ಕೇಳಿದರು. "ಏನ್ ಕ್ಲಾಸಸ್ಸೊ ಏನೊ..." ಎಂದು ಗೊಣಗಿದರು.

ದ್ವಿಚಕ್ರವಾಹನಗಳು ಹುಡುಗ ಹುಡುಗಿಯರನ್ನು ಏರಿಸಿಕೊಂಡು ಪುರ್ರನೆ ಹಕ್ಕಿಗಳಂತೆ ಹಾರಿ ಹೋಗುತ್ತಿವೆ. ಉಳಿದವರು ಬೆನ್ನಿನ ಮೇಲೆ ಒಂದು ಬ್ಯಾಗು, ಕೈಯಲ್ಲಿಷ್ಟು ಪುಸ್ತಕಗಳನ್ನು ಹಿಡಿದುಕೊಂಡು ಓಡಾಡುತ್ತಿದ್ದಾರೆ. ಕ್ಯಾಂಪಸ್ ಹೊರಗಡೆ ರಸ್ತೆಯ ಎರಡೂ ಬದಿಗಳಲ್ಲಿ ಜೆರಾಕ್ಸ್ ಅಂಗಡಿಗಳು, ಟೆಲಿಫೋನ್ ಬೂಥುಗಳು, ಕಾಫಿ, ಕೂಲ್‌ಡ್ರಿಂಕ್ಸ್ ಅಂಗಡಿಗಳ ಮುಂದೆ ವಿದ್ಯಾರ್ಥಿಗಳು ಓಡಾಡುತ್ತಿದ್ದಾರೆ. ಮಧ್ಯ ಮಧ್ಯ ಅಂಗಡಿಗಳ ಮುಂದೆ ಮತ್ತು ಒಳಗೆ ಹೆಣ್ಣು ಗಂಡು ಭೇದವಿಲ್ಲದೆ ಕುಳಿತುಕೊಂಡಿದ್ದಾರೆ ವಿದ್ಯಾರ್ಥಿಗಳು ಒಂದು ಕೈಯಲ್ಲಿ ಸಿಗರೇಟು ಹಿಡಿದುಕೊಂಡು ಇನ್ನೊಂದು ಕೈಯಲ್ಲಿ ಉದ್ದನೆ ಗ್ಲಾಸುಗಳಲ್ಲಿ ಚಹಾ, ಕಾಫಿ, ಕುಡಿಯುತ್ತಿದ್ದರೆ, ಹುಡುಗಿಯರು, ಹುಡುಗರ ಪಕ್ಕದಲ್ಲಿ ಕುಳಿತು ಜ್ಯೂಸ್ ಕುಡಿಯುತ್ತ ಅವರು ಬಿಡುವ ಸಿಗರೇಟು ಹೊಗೆಯನ್ನು ನೋಡುತ್ತಿದ್ದಾರೆ. ಹೆಚ್ಚು ವಿದ್ಯಾರ್ಥಿನಿಯರಿಗೆ ತಮ್ಮ ಬಾಯ್ ಫ್ರೆಂಡ್ಸ್ ಸಿಗರೇಟ್ ಸೇದದಿದ್ದರೆ ಸರಿ ಎನಿಸುವುದಿಲ್ಲ. ಅಷ್ಟೇ ಅಲ್ಲ, ಸಾಕಷ್ಟು ಹುಡುಗರು ಒಂದು ಹುಡುಗಿಯ ಸುತ್ತಲು ನಿಂತುಕೊಂಡು ಅವಳ ಭುಜದ ಮೇಲೆ ಕೈ ಹಾಕಿಕೊಂಡು ಬೆನ್ನಿಗೆ ಒರಗಿಕೊಂಡು ಚೇಷ್ಟೆ ಮಾಡುತ್ತ ಆಗಾಗ ಅವಳ ಭುಜ ಕೈ ಬೆನ್ನನ್ನು ತಟ್ಟುತ್ತಿದ್ದರೆ ವಿದ್ಯಾರ್ಥಿನಿಯರಿಗೆ ಖುಷಿ ಎನಿಸುತ್ತದೆ.

ಕಾಲೇಜಿನಲ್ಲಿ ಹೆಚ್ಚು ಹುಡುಗರು ಒಂದು ಹುಡುಗಿಯನ್ನು ಮಾತನಾಡಿಸಿದರೆ ಅದು ಅವಳಿಗೆ ಪ್ರತಿಷ್ಠೆ, ಖುಷಿ ಕೊಡುವಂತಹ ಸಂಗತಿ. ಇತರರಿಗೆ ಅದು ಅಸೂಯೆ ಅವಮಾನದ ಪ್ರಶ್ನೆ. ತಾವು ಬಹಳ ಹಿಂದುಳಿದಿದ್ದೀವಿ ಎಂದುಕೊಳ್ಳುತ್ತಾರೆ. ಹಾಗಾಗಿ ಒಬ್ಬ ವಿದ್ಯಾರ್ಥಿನಿಗೆ ಕನಿಷ್ಠ ಒಬ್ಬ ಬಾಯ್ ಫ್ರೆಂಡ್ ಇರಲೇಬೇಕು. ವಿದ್ಯಾರ್ಥಿಗಳು ಬನ್ ಬಟ್ಟರ್, ಬನ್ ಸಮೊಸ, ವೆಜ್ ಬನ್, ಕಟ್ಲೆಟ್, ಬನ್ ಸ್ಯಾಂಡ್‌ವಿಚ್, ಬನ್ ಬರ್ಗರ್ ಹೀಗೆ ಏನೇನೊ ತೆಗೆದುಕೊಂಡು ತಿನ್ನುತ್ತಿದ್ದಾರೆ.

ಅದೇ ಕಾಲೇಜಿನಲ್ಲಿ ಓದುವ ವೈದ್ಯಕೀಯ ವಿದ್ಯಾರ್ಥಿಗಳಾದ ಅಮರನಾಥ ಮತ್ತು ಸವ್ಯ ಕ್ಯಾಂಪಸ್ಸಿನ ಒಂದು ಮೂಲೆಯಲ್ಲಿ ಕುಳಿತುಕೊಂಡು ಮಾತನಾಡುತ್ತಿದ್ದಾರೆ. "ಲೊ ಸವ್ಯ ಹುಡ್ಗೀರ ಹತ್ತಿರ ಏನು ಮಾತನಾಡ್ಬೇಕು...? ಅವರ್ನ ಯಾವ ರೀತಿ ಪಟಾಯಿಸಬೇಕೊ..." ಅಮರನಾಥ ಕೇಳಿದ. "ಏನು ಪಟಾಯಿಸೊದ...? ಪರವಾಗಿಲ್ಲ ಕಣೊ ನೀನೂ ಏನೇನೊ ಕಲಿತುಕೊಂಡುಬಿಟ್ಟಿದ್ದೀಯ...?" ಸವ್ಯ ಕಿಲ

ಕಿಲನೆ ನಕ್ಕ. ಅಮರನಾಥ ಮತ್ತೆ ಅಂಗಲಾಚಿದ. ''ನೀನು ಈ ಜನ್ಮದಲ್ಲಿ ಸುದುರೊದಿಲ್ಲ ಕಣೊ. ನಿನಗೆ ಹೇಳೊದು ಒಂದೇ.... ಎಮ್ಮೆ , ಬಫೆಲೊ ಇದೆಯಲ್ಲ...? ನೀನು ಹಳ್ಳಿಗಂಡು ತಾನೆ.... ನಿನಗೆ ಗೊತ್ತಿಲ್ಲದೆ ಇರುತ್ತ...?'' ಸವ್ಯ ಅಷ್ಟೇಳಿ ಪಕ್ಕದಲ್ಲಿ ಹಾದುಹೋಗುತ್ತಿದ್ದ ಹುಡುಗಿಯರ ಕಡೆಗೆ ದೃಷ್ಟಿ ನೆಟ್ಟ . ''ಲೊ ಅವರ್‍ನಾಕೆ ನಾಯಿ ನೋಡಿದಂತೆ ನೋಡ್ತೀಯ.... ಹೇಳೊ'' ಅಮರನಾಥ, ಸವ್ಯನನ್ನ ಹಿಡಿದು ಅಲುಗಾಡಿಸಿದ.

''ನೀನು ಒಂದು ರೀತಿಯಲ್ಲಿ ಪಂಟಕಣೊ. ಆದರೆ ಈ ವಿಷಯದಲ್ಲಿ ಮಾತ್ರ ಸಕತ್ತ್ ಗುಳ್ಡು. ಅದೇಗೆ ಬದುಕ್ತೀಯೊ ಏನೊ ಪಾಪ !'' ಸವ್ಯ, ಅಮರನಾಥನ ಕಡೆಗೆ ನೋಡುತ್ತ ವಿಷಾದವಾಗಿ ಹೇಳಿದ. ''ಏಯ್ ! ಏನೊ ಹೆಣ್ಣು ಮಕ್ಕಳಿಗೆ ಹೇಳಿದಂಗೆ ಹೇಳ್ತಾಇದ್ದೀಯಾ...?'' ''ಹೆಣ್ಣು ಮಕ್ಕಳಾ ? ಯಾವ ಕಾಲದಲ್ಲಿ ಇದ್ದೀಯೊ...? ಅವರ ಮುಂದೆ ನೀನೇನಾದರು ಹೆಣ್ಣು ಮಕ್ಕಳು ಗಿಣ್ಣುಮಕ್ಕಳು ಅಂದಿಯೊ.... ನಿನ್ನನ್ನ ಅವರ ಹತ್ತಿರಕೂಡ ಸೇರಿಸೊದಿಲ್ಲ. ಸ್ಟೈಲಾಗಿ ಹಕ್ಕಿ, ಪ್ರೆಟಿ ಗರ್ಲ್ಸ್, ನಲ್ಲೆ , ಪ್ರೀತಿ ಲವ್‌ಅನ್ನು. ಅದನ್ನುಬಿಟ್ಟು... ನಾನು ನಿನ್ನ ಜೊತೇನೆ ಇದ್ದರೆ ನಿನ್ನ ಬುದ್ಧಿ ನನಗೂ ಬಂದುಬಿಡುತ್ತೆ ಮಾರಾಯ'' ಸವ್ಯ ಹೇಳಿದ.

''ನೀನೇನೊ ದೊಡ್ಡ ದೇವರು ಅಂತ ಕೇಳಿದೆ. ಕ್ಷಮಿಸಿಬಿಡು ದೇವರು'' ಅಮರನಾಥ ಕೈಮುಗಿದ. ''ದೇವರು ಅಂದುಬಿಟ್ಟೆಯಲ್ಲೊ ನನ್ನನ್ನ . ಹೋಗ್ಲಿ ಇದನ್ನ ಕೇಳು....? ನಿನ್ನತ್ತಿರ ಗಾಡಿ ಇಲ್ಲ ಅದೊಂದು ದೊಡ್ಡ ಡ್ರಾಬ್ಯಾಕು. ವಾಹನ ಇಲ್ಲದಿದ್ದರೆ ಯಾವ ತಗಡು ಹುಡುಗೀನು ನಿನ್ನ ಕಡೆ ನೋಡೊದಿಲ್ಲ. ಆದರೂ ನಿರಾಶೆ ಆಗಬೇಡ. ನಿನಗೆ ಚಾನ್ಸ್ ಇದೆ.'' ಸವ್ಯ ಹೇಳುತ್ತಿದ್ದಂತೆ ಮಧ್ಯದಲ್ಲಿ ಬಾಯಾಕಿ ''ಅದೇಗೊ...?'' ಅಮರನಾಥ ಪ್ರಶ್ನಿಸಿದ. ''ನೀನು ಮಹಾಕುಡಿಮಿ ಅಲ್ಲವ...? ಅದಕ್ಕೆ'' ಸವ್ಯ ನಕ್ಕ. ಅಮರನಾಥ ತಲೆಯ ಮೇಲಿದ್ದ ಮರದ ಕಡೆಗೆ ನೋಡುತ್ತಿದ್ದ. ''ಹೋಗ್ಲಿ ಇಲ್ಲಿ ಕೇಳು. ಯಾವಾಗಲಾದರು ಒಂದೊಂದು ಸಲ ನನ್ನ ಗಾಡಿ ಕೊಡ್ತೀನಿ. ನೀನು ಹಕ್ಕೀನಾ ಸೆಟ್ ಮಾಡು. ನೋಡು ಹುಡುಗೀರ ಹತ್ತಿರ ಮಾತನಾಡುವಾಗ ಅವರ ಟೇಸ್ಟ್ ಬಗ್ಗೆ... ಅವರು ಧರಿಸಿರೊ ಡ್ರೆಸ್ ಬಗ್ಗೆ.... ಅವರು ಬಾಡಿಗೆಚ್ಚರ್ ಬಗ್ಗೆ.... ಅವರು ಉಪಯೋಗಿಸೊ ಕಾಸ್‌ಮೆಟಿಕ್ಸ್ ಬಗ್ಗೆ, ಒಟ್ಟಿನಲ್ಲಿ ಅವರ ಬಗ್ಗೇನೆ ಪ್ರೈಜ್ ಮಾಡು. ಚಾನ್ಸ್ ಸಿಕ್ಕಿದಾಗ ನೀನು ತುಂಬಾ ಸೆಕ್ಸಿ ಬ್ಯೂಟಿಫುಲ್ ಆಗಿದ್ದೀಯಾ ಅನ್ನು. ಓ... ನಿನ್ನ ಕಣ್ಣು..., ನಿನ್ನ ಗಲ್ಲ.... ಕೆನ್ನೆ ಕೊಲ್‌ಗೇಟ್ ನಗು ಎಲ್ಲದರ ಬಗ್ಗೆಯೂ ಪ್ರೈಸ್ ಮಾಡು. ಸುಮ್ಮನೆ ಗುಳ್ಡು ತರಹ ಪ್ರೈಸ್ ಮಾಡಬೇಡ. ಎಲ್ಲದಕ್ಕೂ ಸುಚ್ಚುಯೇಷನ್ ನೋಡಿಕೊಳ್ಳಬೇಕು. ಇಲ್ಲ ಅಂದರೆ ಇವನ್ಯಾರೊ ಮಬ್ಬು

ಅಂದುಬಿಡ್ತಾರೆ. ಅದಕ್ಕಿನ್ನ ಸುಮ್ಮನೆ ಇರುವುದೇ ಮೇಲು'' ಸವ್ಯ ಹೇಳುತ್ತಿದ್ದಂತೆ ಅಮರನಾಥ ಸುಮ್ಮನೆ ಯಾವ ಪ್ರತಿಕ್ರಿಯೆಯೂ ಇಲ್ಲದೆ ನೋಡುತ್ತಿದ್ದ. ಅಷ್ಟೊತ್ತಿಗೆ ಬೆಲ್ಲು ಬಾರಿಸಿ ಇಬ್ಬರೂ ಎದ್ದು ತಮ್ಮ ಕ್ಲಾಸಿನ ಕಡೆಗೆ ನಡೆದರು.

ಎಲ್ಲರೂ ಕ್ಲಾಸಿನ ಒಳಗೆ ಕುಳಿತುಕೊಳ್ಳುತ್ತಿದ್ದಂತೆ ಅನಾಟಮಿ ಪ್ರೊಫೆಸರು ಬಂದು ನೇರವಾಗಿ ಮೆದುಳಿನ ಬಗ್ಗೆ ಪಾಠ ತೆಗೆದುಕೊಂಡರು. ಅವರು ಪಾಠ ಹೇಳುವಾಗ ವಿದ್ಯಾರ್ಥಿಗಳೆಲ್ಲ ಎಷ್ಟು ತನ್ಮಯರಾಗುತ್ತಿದ್ದರೆಂದರೆ, ಎಲ್ಲರ ಮೇಲೂ ಏಕಕಾಲಕ್ಕೆ ಇಪ್‌ನಾಟಿಸಂ ನಡೆಯುತ್ತಿದೆಯೊ ಏನೊ ಎಂದುಕೊಳ್ಳಬೇಕು.

''ಸೌರಮಂಡಲದಲ್ಲಿ 4.6 ಬಿಲಿಯ ವರ್ಷಗಳ ಹಿಂದೆ ಭೂಮಿ ಸೃಷ್ಟಿಯಾಯಿತು. ಭೂಮಿಯ ಮೇಲೆ ಸುಮಾರು 3.5 ಬಿಲಿಯ ವರ್ಷಗಳ ಹಿಂದೆ ಏಕಕೋಶ ಜೀವಿಗಳು ಹುಟ್ಟಿ ಜೀವ ವಿಕಾಸ ಹೊಂದುತ್ತಾಹೋಗಿ ದಶಲಕ್ಷ ವರ್ಷಗಳ ಹಿಂದೆ ಆದಿಮಾನವ ರೂಪಗೊಂಡ. ಸೃಷ್ಟಿಯ ಅದ್ಭುತಗಳ ನಡುವೆ ಮಾನವನು ಸಹ ಭೂಮಿಯ ಮೇಲೆ ಒಂದೊಂದೆ ಅದ್ಭುತಗಳನ್ನು ಸೃಷ್ಟಿಸತೊಡಗಿದ. ಸಜ್ಞೆ , ಭಾಷೆಯಾಯಿತು. ಲೋಹಗಳನ್ನು ಉಪಯೋಗಿಸ ಲಾಯಿತು. ಪ್ರಪಂಚದ ಮೂಲೆ ಮೂಲೆಯಲ್ಲಿ ಮಾನವ ನಿರ್ಮಿತ ಸ್ಮಾರಕಗಳು ಸೃಷ್ಟಿಯಾದವು. ಮಾನವ ಚಂದ್ರನನ್ನು ತಲುಪಿ ಹಿಂದಿರುಗಿದ. ವಿದ್ಯುತ್, ಕಂಪ್ಯೂಟರ್ ಸೃಷ್ಟಿಯಾಯಿತು. ಪ್ರಸ್ತುತ ಜಿನೋಮ್ ನಕ್ಷೆಯ ತಯಾರಿ ನಡೆದಿದೆ. ಮುಂದಿನ ದಿನಗಳಲ್ಲಿ ಇನ್ನೂ ಎಷ್ಟೋ ಅದ್ಭುತಗಳು ಬರಲು ಸಾಲುಗಟ್ಟಿ ನಿಂತಿವೆ. ಭೂಮಿಯ ಮೇಲಿನ ಈ ಮಾನವ ನಿರ್ಮಿತ, ವೈಜ್ಞಾನಿಕ ಸಂಶೋಧನೆಯ ಅದ್ಭುತಗಳೆಲ್ಲ ಸೃಷ್ಟಿಯಾಗಲು ಒಂದೇ ಒಂದು ಅದ್ಭುತ ಮಾತ್ರ ಕಾರಣ. ಅದೇ ಮಾನವನ ಮಿದುಳೆಂಬ ಮಹಾ ಅದ್ಭುತ.

ಮಾನವನ ತಲೆಯಲ್ಲಿ ಅಡಗಿರಿರುವ ಮೆದುಳು ದೇಹದ ಪ್ರತಿಯೊಂದು ಕ್ರಿಯೆಯನ್ನು ನಿಯಂತ್ರಿಸುತ್ತದೆ. ಶರೀರದ ಎಲ್ಲಾ ಅಂಗಾಂಗಗಳು ನರಕೋಶಗಳ ಮುಖಾಂತರ ಮಿದುಳಿನ ಸಂಪರ್ಕ ಹೊಂದಿರುತ್ತದೆ. ಮಾನವನ ಶರೀರದಲ್ಲಿ ಸುಮಾರು 13 ಬಿಲಿಯ ನರಕೋಶಗಳಿದ್ದು, ಅದರಲ್ಲಿ 10 ಬಿಲಿಯ ನರಕೋಶಗಳು ಮೆದುಳಿನಲ್ಲೇ ಇರುವುದಾಗಿ ತಿಳಿದುಬರುತ್ತದೆ. ಒಬ್ಬ ಆರೋಗ್ಯ ಮನುಷ್ಯನ ಸರಾಸರಿ ಮಿದುಳಿನ ತೂಕ 1.4 ಕೆ.ಜಿ. ತೂಕವಿದ್ದು , ಮಾನವನ ಶರೀರದ ಕ್ರಿಯೆಗಳಾದ ಚಲನೆ, ನಿದ್ದೆ , ಜೀರ್ಣ, ಉಸಿರಾಟ, ಹೀಗೆ ಎಲ್ಲವನ್ನು ಮಿದುಳೇ ನಿಯಂತ್ರಿಸುತ್ತದೆ. ಈ ಕ್ರಿಯೆಗಳನ್ನೆಲ್ಲ ನಡೆಸಲು ಮಿದುಳಿಗೆ ಸಾಕಷ್ಟು ಶಕ್ತಿ ಬೇಕಾಗುತ್ತದೆ. ಆದರಿಂದ ಶರೀರದಲ್ಲಿ ಉತ್ಪತ್ತಿಯಾಗುವ ಐದನೇ ಒಂದು ಭಾಗದ ಶಕ್ತಿ , ಮಿದುಳಿನ ಕ್ರಿಯೆಗೆ ವ್ಯಯವಾಗುತ್ತದೆ.

ಮೆದುಳಿನಿಂದ ದೇಹದ ಎಲ್ಲಾ ಭಾಗಗಳಿಗೂ ಹರಡಿಕೊಂಡಿರುವ ನರಕೋಶಗಳು ಎಲ್ಲಾ ರೀತಿಯ ಕ್ರಿಯೆಗಳನ್ನು ನರಕೋಶಗಳಿಂದ ಮಿದುಳಿಗೆ ಮತ್ತು ಮಿದುಳಿನಿಂದ ನರಕೋಶಗಳ ಮುಖಾಂತರ ದೇಹದ ಕೋನೆ ಕೋನೆಗೂ ತಲುಪಿಸುತ್ತದೆ. ಮನುಷ್ಯನ ಮಿದುಳನ್ನು ಮುಖ್ಯವಾಗಿ ಮೂರು ವಿಭಾಗಗಳಾಗಿ ವಿಂಗಡಿಸಲಾಗಿದೆ. ಸೆರೆಬ್ರಂ. ಸೆರೆಬೆಲ್ಲಂ ಮತ್ತು ಮೆಡುಲ್ಲಾ ಒಬ್ಲೆಂಗೆಟ. ಸೆರಬ್ರೆಂ ಮೆದುಳಿನ ಅತಿ ದೊಡ್ಡದಾದ ಭಾಗವಾಗಿದ್ದು ಇದರಲ್ಲಿ ಎರಡು ಸೆರೆಬ್ರೆಲ್ ಅರೆಗೋಳಗಳಿರುತ್ತವೆ. ಇವುಗಳ ಹೊರಗಿನ ಪದರನ್ನು ಸೆರೆಬ್ರೆಲ್ ಕಾರೆಟೆಕ್ಸ್ ಎಂದು ಕರೆಯಲಾಗುತ್ತದೆ. ಸೆರೆಬ್ರೆಲ್ ಕಾರೆಟೆಕ್ಸ್ ಬೂದು ದ್ರವ್ಯದ ಹಲವು ಮಡಿಕೆಗಳಿಂದ ಕೂಡಿದ್ದು 2500 ಸಾವಿರ ನರಕೋಶಗಳನ್ನು ಹೊಂದಿರುತ್ತದೆ. ದೇಹದಲ್ಲಿ ನಡೆಯುವ ಹಲವು ಚಟುವಟಿಕೆಗಳನ್ನು ಈ ಭಾಗದಿಂದ ನಿಯಂತ್ರಿಸಲಾಗುತ್ತದೆ. ಅಂಗಾಂಗಗಳ ಚಲನೆ, ದೇಹ ಪ್ರಜ್ಞೆಯಲ್ಲಿರುವಿಕೆ, ಭಾಷಣ ಮಾಡುವುದು, ವಾಸನೆ ಹಿಡಿಯುವುದು, ಯೋಚಿಸುವುದು ಮತ್ತು ಜ್ಞಾಪಕಶಕ್ತಿ ಪಡೆಯುವುದು, ಜೊತೆಗೆ ಮನುಷ್ಯನ ಐಕ್ಯೂ ಮತ್ತು ಕಲಿತುಕೊಳ್ಳುವ ಪ್ರಕ್ರಿಯೆಯು ಇಲ್ಲೆ ನಡೆಯುತ್ತದೆ.

ಕಾರ್‌ಪಸ್ ಕಲ್ಲೋಸಮ್ ಎನ್ನುವ ಒಂದು ನರಕೋಶಗಳ ತಂತಿಯಂತಹ ಭಾಗ ಎರಡು ಸೆರೆಬ್ರೆಲ್ ಅರೆ ಕೋಶಗಳ ನಡುವಿನ ಜೋಡಣೆಯಾಗಿ ಕೆಲಸ ಮಾಡುತ್ತದೆ. ಸೆರಬ್ರೆಲ್ಲ ಮಿದುಳಿನ ಎರಡನೇ ದೊಡ್ಡ ಭಾಗವಾಗಿದ್ದು ಇದು ದೇಹದ ಅಂಗಾಂಗಗಳ ಚಲನೆ ಮತ್ತು ಸಮತೊಲನೆಯನ್ನು ಹತೋಟಿಯಲ್ಲಿಡುತ್ತದೆ. ತಲಾಮಸ್ ಎನ್ನುವ ಭಾಗ ಎಲ್ಲಾ ವಿಷಯಗಳನ್ನು ಸಂಗ್ರಹಿಸುವ ಮಿದುಳಿನ ನಿಲ್ದಾನವಾಗಿದ್ದು, ನರಕೋಶಗಳ ಮುಖಾಂತರ ತಲಪುವ ಎಲ್ಲಾ ಸೂಚನೆಗಳನ್ನು ಪರೀಕ್ಷಿಸಿ, ಸಂಯೋಜಿಸಿ ಕಾರೆಟಕ್ಸ್‌ಗೆ ಕಳುಹಿಸಿಕೊಡುತ್ತದೆ.

ಹೈಪೊತಲಾಮಸ್ ಎನ್ನುವ ಮಿದುಳಿನ ಇನ್ನೊಂದು ಭಾಗ ದೇಹದ ಉಷ್ಣತೆಯನ್ನು ರಕ್ತದೊತ್ತಡವನ್ನು ಮತ್ತು ಪಿಟೊಟಿರಿ ಗ್ರಂಥಿಯ ಕ್ರಿಯೆಯನ್ನು ನಿಯಂತ್ರಣದಲ್ಲಿಡುತ್ತದೆ. ಸೆರೆಬೆಲ್ಲಂ ಹೊಂದಿರುವ ಮಿದುಳಿನ ಒಬ್ಲಾಂಗೆಟದ ಮಿದುಳಿನ ತಳಭಾಗ, ಹೃದಯ, ಶ್ವಾಸಕೋಶ ಮತ್ತು ಜೀರ್ಣಾಂಗಗಳನ್ನು ನಿಯಂತ್ರಿಸುತ್ತದೆ. ವಿಚಿತ್ರವೆಂದರೆ ತಲೆಯ ಎಡಭಾಗದಲ್ಲಿರುವ ಮಿದುಳಿನ ಅರೆಕೋಶ ದೇಹದ ಬಲಭಾಗದಲ್ಲಿರುವ ಅಂಗಾಂಗಗಳನ್ನು ನಿಯಂತ್ರಿಸುತ್ತದೆ.

ದಪ್ಪದಾದ ಮತ್ತು ಗಟ್ಟಿಯಾದ ಎಲುಬಿನ ತಲೆ ಬುರುಡೆಯಲ್ಲಿ ಮಿದುಳು ಸುರಕ್ಷಿತವಾಗಿ ಕುಳಿತಿದೆ. ಬುರುಡೆ ಮೇಲೆ ಜೋರಾಗಿ ಹೊಡೆತ ಬಿದ್ದರೆ ಮಿದುಳಿನ

ಮೇಲೆ ಘಾಯದ ಪ್ರಭಾವ ಬೀಳುತ್ತದೆ. ಮುಖ್ಯವಾಗಿ ಆಮ್ಲಜನಕ ನರಕೋಶಗಳಿಗೆ ತಲುಪದೇಹೋದರೆ ಮಿದುಳು ತೊಂದರೆಗೊಳಗಾಗುತ್ತದೆ. ರಕ್ತ ಚಲನೆ ನಿಂತುಹೋದರೆ ನರಕೋಶಗಳು ನಶಿಸುತ್ತವೆ. ಐದು ನಿಮಿಷಗಳಿಗಿಂತ ಹೆಚ್ಚು ಕಾಲ ಆಮ್ಲಜನಕ ನರಕೋಶಗಳಿಗೆ ತಲುಪದೆಯಿದ್ದಲ್ಲಿ ನರಕೋಶಗಳು ಸಂಪೂರ್ಣವಾಗ ನಶಿಸಿ ಹೋಗುತ್ತವೆ. ಮಿದುಳು ರೋಗಗಳಿಂದಲೂ ಮತ್ತು ಮಾರ್ಫಿನ್ ನಂತಹ ಔಷಧಿ ಗಳಿಂದಲೂ ಮಿದುಳಿಗೆ ತೊಂದರೆಯಾಗುತ್ತದೆ.

ಇದು ಮಿದುಳಿನ ಒಂದು ಮುಖವಾದರೆ ಅದರ ಇನ್ನೊಂದು ಮುಖ ಇನ್ನೂ ಅದ್ಭುತವಾದುದು. ಮಿಲಿಯಾಂತರ ವರ್ಷಗಳಲ್ಲಿ ಜೀವ ವಿಕಾಸದ ಜೊತೆಗೆ ಮಾನವನ ಮಿದುಳು ಉಚ್ಚ ಯೋಚನಾಶಕ್ತಿಯನ್ನು ಬೆಳೆಸಿಕೊಂಡಿದೆ. ಕಂಪ್ಯೂಟರಿಗಿಂತ ಹೆಚ್ಚು ವಿಷಯಗಳನ್ನು ಐವತ್ತು ಆರವತ್ತು ವರ್ಷಗಳಷ್ಟು ಧೀರ್ಘಕಾಲ ಸಂಗ್ರಹಿಸಿ ಇಟ್ಟುಕೊಳ್ಳಬಹುದು. ಎಷ್ಟೋ ಅದ್ಭುತಗಳು ಈ ಮಿದುಳಿನಲ್ಲಿ ಸೃಷ್ಟಿಯಾಗಿವೆ. ಮುಂದಿನ ದಿನಗಲಲ್ಲಿ ಸೂಪರ್‌ಮೆನ್ ಸೃಷ್ಟಿಗೊಳ್ಳಲಿದ್ದಾನೆ. ಇಂದಿನ ವೈಜ್ಞಾನಿಕ ಯುಗದಲ್ಲಿ ಮಾನವ ಎಲ್ಲವನ್ನು ವೈಜ್ಞಾನಿಕ ವಿಸ್ಮಯಗಳನ್ನು ಜಗತ್ತಿಗೆ ಕೊಡುಗೆಯಾಗಿ ನೀಡಿದ್ದಾನೆ. ಮನುಷ್ಯನ ಪ್ರತಿಯೊಂದು ಅಂಗವನ್ನು ಸಾರಾಸಗಟಾಗಿ ಹಣ್ಣಿನಂತೆ ಕತ್ತರಿಸಿ ಇನ್ನೊಬ್ಬ ಮನುಷ್ಯನ ಅಂಗಕ್ಕೆ ಜೋಡಿಸುವುದನ್ನು ಅಳವಡಿಸಿಕೊಂಡಿದ್ದರು ಮನಾವನ ಅದ್ಭುತ ಅಂಗವಾದ ಮಿದುಳನ್ನು ತೆಗೆದು ಜೋಡಿಸುವ ವಿಧಾನ ಮಾತ್ರ ಇನ್ನೂ ನಿಗೂಡವಾಗಿಯೇ ಉಳಿದಿದೆ. ಅದನ್ನು ನೀವು ಯಾರಾದರು ಮಾಡಿದರೆ ಎಷ್ಟು ಚೆನ್ನ''.

-ವಿದ್ಯಾರ್ಥಿಗಳೆಲ್ಲ ಯಾವುದೊ ಲೋಕದಿಂದ ಹಿಂದಕ್ಕೆ ಬಂದಂತೆ ಪಿಳಿ ಪಿಳಿ ಎಂದು ಅನಾಟಮಿ ಪ್ರೊಫೆಸರನ್ನೇ ನೋಡುತ್ತಿದ್ದರು.

''ಬಹುಶಃ ಈ ದಿನಕ್ಕೆ ಇಷ್ಟು ಸಾಕು, ಮಿದುಳಿನ ಬಗ್ಗೆ ತಿಳಿದುಕೊಳ್ಳುವುದು ಇನ್ನು ಟನ್ನುಗಟ್ಟಲೆ ಇದೆ.'' ಎನ್ನುತ್ತಿದ್ದಂತೆ ಬೆಲ್ಲು ಒಡೆಯಿತು. ಪ್ರೊಫೆಸರ್ ಪುಸ್ತಕಗಳ ಸಮೇತ ಹೊರಟುಹೋದರು. ವಿದ್ಯಾರ್ಥಿಗಳೆಲ್ಲ ಗುಸುಗುಸುನೆ ಮಾತನಾಡುತ್ತಿದ್ದರು.

* * *

ಆ ತರಗತಿಯ ವಿದ್ಯಾರ್ಥಿಗಳು ಆ ದಿನ ಬೆಳಿಗ್ಗೆ ಅನಾಟಮಿ ಥಿಯರಿ ತರಗತಿ ಮುಗಿದ ಮೇಲೆ ಲಂಚ್ ಮುಗಿಸಿ ಸ್ವಲ್ಪ ವಿಶ್ರಾಂತಿ ಪಡೆದರು. ಅನಂತರ ಮಧ್ಯಾಹ್ನದ ಹೊತ್ತಿಗೆ ಎಲ್ಲರೂ ಏಪ್ರಾನ್ ಧರಿಸಿ ಡೆಸೆಕ್ಷನ್ ಬಾಕ್ಸ್‌ಗಳ ಸಮೇತ ಡಿಸೆಕ್ಷನ್ ಹಾಲ್ ಒಳಕ್ಕೆ ಒಬ್ಬೊಬ್ಬರಾಗಿ ನಡೆದರು. ಕೆಲವು ವಿದ್ಯಾರ್ಥಿನಿಯರು ಬಾಗಿಲಲ್ಲೆ

ನಿಂತುಕೊಂಡು ಒಳಕ್ಕೆ ಹೋಗಲೊ ಬೇಡವೊ ಎಂಬುದಾಗಿ ಇಣಿಕಿ ನೋಡುತ್ತಾ ಯೋಚಿಸತೊಡಗಿದರು. ವಿದ್ಯಾರ್ಥಿಗಳು ಕೆಲವರು ಆಗಲೆ ಹಾಲ್‌ನ ಒಳಕ್ಕೆ ಹೋಗಿ ತಮ್ಮ ತಮ್ಮ 'ಟೇಬಲ್‌ಗಳನ್ನು ಹುಡುಕಾಡುತ್ತ'-

"ಇದು ನಮ್ಮ ಟೇಬಲ್ ಕಣೊ... ಅದೊ ಅಲ್ಲಿದೆ ನಮ್ಮದು..." ಎನ್ನುತ್ತಾ ಹತ್ತಿರಕ್ಕೆ ಹೋಗಿ ನಿಂತುಕೊಂಡರು. ಧೈರ್ಯ ಮಾಡಿ ಒಳಕ್ಕೆ ಬಂದ ವಿದ್ಯಾರ್ಥಿನಿಯರು ಕೆಲವರು ಟೇಬಲ್ ಮೇಲೆ ಎಣ್ಣೆಯಲ್ಲಿ ಫ್ರೈ ಮಾಡಿದ ಕರ್ರಗಿನ ಮೀನಿನಂತಿದ್ದ ಹೆಣವನ್ನು ನೋಡಿ ಹೊಟ್ಟೆಯನ್ನು ಹಿಡಿದುಕೊಂಡು ವಾಕರಿಸಿಕೊಂಡರೆ, ಇನ್ನು ಕೆಲವರು ಕಣ್ಣು ತಿರುಗಿ ನೆಲಕ್ಕೆ ಕುಸಿದುಬಿದ್ದರು. ಕೋಳಿ ಹೃದಯದ ಹುಡುಗರು ಕೆಲವರು ಹುಡುಗಿಯರ ಜೊತೆಗೆ ಮುಖಗಳನ್ನು ಸಣ್ಣಗೆ ಮಾಡಿಕೊಂಡು ಭೀತಿಗೊಳಗಾಗಿದ್ದರು.

ಹಲವಾರು ವರ್ಷಗಳಿಂದ ಆ ಹಾಲ್‌ನಲ್ಲಿ ಹೆಣಗಳ ಜೊತೆಗೆ ವ್ಯವಹಾರ ನಡೆಸುತ್ತಿರುವ ಜವಾನರು ಮಾತ್ರ ಹೊಸ ವಿದ್ಯಾರ್ಥಿಗಳ ಪ್ರತಿಕ್ರಿಯೆಯನ್ನು ನೋಡಲೆಂದೇ ದೂರದಲ್ಲಿ ನಿಂತು ಒಳಗೊಳಗೆ ನಗುತ್ತಿದ್ದಾರೆ. ಹಿಂದೆಯೆ ನಿಂತಿದ್ದ ಪ್ರೊಫೆಸರುಗಳು ಜವಾನರ ಸಹಾಯದಿಂದ ಕುಸಿದುಬಿದ್ದವರನ್ನು ಎತ್ತಿಕೂರಿಸಿ ಮುಖಕ್ಕೆ ನೀರು ಚುಮಿಕಿಸಿ ವಾಕರಿಕೆ ಮಾಡಿಕೊಂಡವರನ್ನು ಹಿಂದಕ್ಕೆ ಕರೆದುಕೊಂಡು ಒಂದು ಬಾಗಿಲಲ್ಲಿ ಬಿಟ್ಟರು. ಮೊದಲಿಗೆ ಅಧೈರ್ಯಗೊಂಡರು ಅನಂತರ ಕೆಲವು ವಿದ್ಯಾರ್ಥಿಗಳು ಹಾಲ್‌ನಲ್ಲಿರುವ ಹೆಣಗಳನ್ನೆಲ್ಲ ಒಂದು ಪ್ರದಕ್ಷಿಣೆ ಹಾಕಿ ಗೋಡೆಗಳಿಗೆ ನೇತಾಕಿರುವ ಚಿತ್ರಗಳನ್ನೆಲ್ಲ ನೋಡತೊಡಗಿದರು.

ಆ ಹಾಲ್‌ನಲ್ಲಿ ಅಮರನಾಥ, ಸವ್ಯ ಮತ್ತು ಹರ್ಷಕೂಡ ಇದ್ದರು. ಆದರೆ ಅವರ ಹೆಣಗಳು ಬೇರೆ ಬೇರೆ ಟೇಬಲ್‌ಗಳ ಮೇಲೆ ಮಲಗಿಕೊಂಡಿದ್ದವು. ಕೃತಿಕಾ, ರೂಪ ವಾಕರಿಕೆ ಮಾಡಿಕೊಂಡು ಕಣ್ಣು ಬಾಯಿಗಳನ್ನು ಮುಚ್ಚಿಕೊಂಡಿದ್ದರೆ, ಅನು ಹುಡುಗರ ಜೊತೆಗೆ ಹಾಲ್‌ನಲ್ಲಿದ್ದ ಪೋಟೊಗಳನ್ನು ಸುತ್ತಿ ಸುತ್ತಿ ನೋಡುತ್ತಿದ್ದಳು.

ಹದಿನಾರನೆ ಶತಮಾನದಲ್ಲಿ ಮೊಟ್ಟ ಮೊದಲಿಗೆ ಆಧುನಿಕ ಸಲಕರಣೆಗಳಿಂದ ಶಸ್ತ್ರಚಿಕಿತ್ಸೆ ನಡೆಸಿದ ಫ್ರೆಂಚ್ ದೇಶದ ಗ್ರೇಸ್‌ನ ಕೆಲವು ಚಿತ್ರಗಳು ಆ ಹಾಲ್‌ನಲ್ಲಿದ್ದವು. ಹಾಗೆ ನಮ್ಮ ದೇಶದ ಕೆಲವು ಋಷಿಗಳು ಶಸ್ತ್ರ ಚಿಕಿತ್ಸೆ ನಡೆಸುತ್ತಿರುವ ಚಿತ್ರಗಳು ಮತ್ತು ದೇವರುಗಳ ಚಿತ್ರಗಳು ಇದ್ದವು. ಇಲ್ಲಕ್ಕಿಂತ ಮುಖ್ಯವಾಗಿ ತ್ರಿನೇತ್ರನಾದ ನೀಲಿ ದೇಹದ ಈಶ್ವರನು ತ್ರಿಶೂಲವನ್ನು ಹಿಡಿದುಕೊಂಡು ರುಧ್ರಭಂಗಿಯಲ್ಲಿ ನಿಂತಿರುವ ದೊಡ್ಡ ಮೂರ್ತಿಯನ್ನು ಆ ಹಾಲ್‌ನಲ್ಲಿ ನಿಲ್ಲಿಸಲಾಗಿತ್ತು. ಅವನ ತಲೆಯಲ್ಲಿ ಗಂಗೆ ನೀರನ್ನು ಸುರಿಸುತ್ತಿದ್ದರೆ, ಕತ್ತಿನಲ್ಲಿ ನಾಗರಹಾವು ಸುತ್ತಿಕೊಂಡಿತ್ತು.

ಮಧ್ಯಾಹ್ನದಿಂದ ಸಾಯಂಕಾಲ ಐದು ಗಂಟೆಯವರೆಗೆ ಆ ಹಾಲ್‌ನ ಒಳಗೆ ಹೊರಗೆ ಮೌನ, ಆತಂಕ ಭಯ ಮತ್ತು ಗುಸುಗುಸು ಮಾತು ಎಲ್ಲವು ತುಂಬಿಕೊಂಡಿದ್ದವು. ಐದು ಗಂಟೆಗೆ ಬೆಲ್ಲು ಬಾರಿಸಿದ್ದೆ ಪ್ರೊಫೆಸರು "ಒಂದು ವಾರ ನಿಮಗೆ ಇದೆ ಕೆಲಸ. ನೀವೆಲ್ಲರು ಮೊದಲು ಈ ಪರಿಸ್ಥಿತಿಗೆ ಒಗ್ಗಿಕೊಳ್ಳಬೇಕು. ಆಮೇಲೆ ಒಂದೊಂದೇ ಭಾಗವನ್ನು ಡಿಸೆಕ್ಷನ್ ಮಾಡಲು ಪ್ರಾರಂಭಿಸಬೇಕು. ಒಂದು ವಾರ ಕಳೆದರೆ ಸಾಕು. ಆಮೇಲೆ ಎಲ್ಲಾ ಸುಗಮವಾಗಿ ನಡೆಯುತ್ತದೆ. ಆರು ತಿಂಗಳಾದ ಮೇಲೆ ನೀವೆ ಹೆಣಗಳ್ನ ಹುಡಿಕಿಕೊಂಡು ಹೋಗ್ತೀರ ನೋಡಿ" ಎನ್ನುತ್ತಿದ್ದಂತೆ ವಿದ್ಯಾರ್ಥಿನಿಯರು ಕೆಲವರು ಮತ್ತೆ ವಾಕ್... ವಾಕ್... ಎಂದು ವಾಕರಿಕೆ ಮಾಡಿಕೊಂಡರು. ಉಳಿದವರು ಊ್ಹ.... ಆ್ಹ... ಎಂದು ಅಂಗಲಾಚುತ್ತ ಆ ದಿನ ಅಲ್ಲಿಂದ ಕಾಲುಕಿತ್ತರು.

ಮರುದಿನ, ಇನ್ನೊಂದು ದಿನ, ಮತ್ತೊಂದು ದಿನ ಹೀಗೆ ಒಂದು ವಾರದ ಕಾಲ ವಿದ್ಯಾರ್ಥಿಗಳೆಲ್ಲ ಆಧುನಿಕ ವೀರಬಾಹುಗಳಂತೆ ಆ ಹೆಣಗಳಿದ್ದ ಟೇಬಲುಗಳ ಸುತ್ತಲು ಅವುಗಳನ್ನು ನೋಡುತ್ತ ಕಾವಲು ಕಾಯತೊಡಗಿದರು. ಅವರು ತಪ್ಪಿಸಿಕೊಂಡು ಹೊರಗೆ ಬಂದಾಗಲೆಲ್ಲ ಅವರನ್ನು ಪ್ರೊಫೆಸರರು ಒಳಕ್ಕೆ ಅಟ್ಟುತ್ತಿದ್ದರು. ಈಗ ಆ ಹಾಲ್‌ನ ಒಳಗಿದ್ದ ಹೆಣಗಳು ಒಂದೊಂದಾಗಿ ಅವರ ಕಣ್ಣು ಪಟಲಗಳಲ್ಲಿ ಸ್ಥಾನವನ್ನು ಪಡೆಯುತ್ತಿದ್ದವು.

ಕನ್ನಡದ ಮೇರು ನಟ ಡಾ॥ ರಾಜ್‌ಕುಮಾರ್ ಅವರನ್ನು ಹಾರಿಸಿಕೊಂಡೋದ ವೀರಪ್ಪನ್‌ನನ್ನು ಮೊದ ಮೊದಲು ರಾಜ್‌ಕುಮಾರ್ ಅವರು ದ್ವೇಷಿಸುತ್ತಿರಬೇಕು. ಅನಂತರ ಬರುಬರುತ್ತ ರಾಜ್‌ಕುಮಾರ್ ಮತ್ತು ವೀರಪ್ಪನ್ ಇಬ್ಬರೂ ವಿಧಿ ಇಲ್ಲದೆ ಒಬ್ಬರ ಮುಖಗಳನ್ನೊಬ್ಬರು ನೋಡುತ್ತಾ ಕುಳಿತುಕೊಳ್ಳಬೇಕಾಗಿ ಅವರ ನಡುವೆ ಯಾವುದೊ ಒಂದು ರೀತಿಯ ಏಟ್ ಅಂಡ್ ಲವ್ ಅನ್ನುವ ಸಂಬಂಧ ಬೆಳೆದಿರಬೇಕು. ಅದಕ್ಕೆ ವೈದ್ಯಕೀಯದಲ್ಲಿ ಪ್ಯಾರಾಸೈಕೊ ಎನ್ನುತ್ತಾರೆ. ಅದೇ ರೀತಿ ಇಲ್ಲಿ ಮೊದಲಿಗೆ ಹೆಣಗಳನ್ನು ನೋಡಿ ಹೆದರಿಕೊಂಡಿದ್ದ ಮತ್ತು ವಾಂತಿ ಮಾಡಿಕೊಂಡಿದ್ದ ವಿದ್ಯಾರ್ಥಿಗಳೆಲ್ಲ ಅನಂತರ ಹೆಣದ ಸುತ್ತಲು ನಿಂತುಕೊಂಡು ಹೆಣದ ಜೊತೆ ಪ್ಯಾರೊ ಸೈಕೊ ಆದಂತೆ ಅದರ ಜೊತೆಗೆ ಮಾತನಾಡಿಕೊಳ್ಳುತ್ತಿದ್ದರು.

ಈ ಹೆಣಕ್ಕೆ ಎಷ್ಟು ವಯಸ್ಸಾಗಿರಬಹುದು...? ಯಾವ ರೀತಿ ಸತ್ತಿರಬಹುದು ? ಯಾರಾದರು ಸಾಯಿಸಿರಬಹುದೆ....? ಇಲ್ಲ ತಾನೆ ಆತ್ಮಹತ್ಯೆ ಮಾಡಿಕೊಂಡಿರಬಹುದೆ....? ಸಾಲ ಮರುಪಾವತಿ ಮಾಡಲಾರದೆ ಹೋದ

ರೈತನೆ...? ಅಂಡರ್ ವರ್ಲ್ಡ್‌ಗೆ ಸೇರಿದ ಹೆಣ ಇರಬಹುದೆ...? ನಕ್ಸ್‌ಲೈಟ್ ಇರಬಹುದೆ...? ಈ ಹೆಣವನ್ನು ಇಲ್ಲಗ್ಗೆ ಯಾರು ತಂದಿರಬಹುದು....? ಹೇಗೆ ತಂದಿರಬಹುದು....? ತಂದವರು ಎಷ್ಟು ಹಣ ಪಡೆದಿರಬಹುದು....? ಹಿಂದುವೊ... ಮುಸ್ಲಿಮೊ.... ಕ್ರಿಶ್ಚಿಯನ್ನೊ.... ಯಾವುದೊ ಸತ್ತೊ ಮೇಲೆ ಬರಿ ಹೆಣ ಅಷ್ಟೇ. ಅದು ಯಾಕಾದರೂ ಹೆಣವಾಯಿತು....?ಯಾವುದಾದರು ಕಾಯಿಲೆ ಬಂದು ಸಾವನ್ನಪ್ಪಿತೆ ? ಯಾರಾದರು ಹೊಡೆದು ಸಾಯಿಸಿದರೆ....? ಒಟ್ಟಿನಲ್ಲಿ ಅನಾಥ ಶವ ಇರಬೇಕು....? ಇಲ್ಲವೆಂದರೆ ಸತ್ತಿರುವ ಹೆಣವನ್ನು ಕಾಲೇಜಿಗೆ ಯಾರು ತಂದುಕೊಡುತ್ತಾರೆ...? ಅದೆಲ್ಲಾ ನಮಗೇಕೆ....? ಎಲ್ಲರೂ ಈಗ ಹೆಣದ ಒಂದೊಂದು ಭಾಗವನ್ನು ಬಹಳ ಜಾಗರೂಕತೆಯಿಂದ ಸ್ಕಾಲ್‌ಪಾಲ್, ಕತ್ತರಿ, ಫೋರ್‌ಸಿಪ್ಸ್ ಇನ್ನಿತರ ಸಲಕರಣೆಗಳನ್ನು ತೆಗೆದುಕೊಂಡು ಡಿಸೆಕ್ಷನ್ ಮಾಡುತ್ತಿದ್ದರು.

* * *

ಸವ್ಯನ ತಂದೆ ತಾಯಿಗೆ ಇಬ್ಬರೆ ಮಕ್ಕಳು ಸವ್ಯ ಮತ್ತು ಅವನ ತಂಗಿ. ಅವರ ಕುಟುಂಬದವರು ಒಂದೆರಡು ತಲೆಮಾರುಗಳಿಂದ ಓದಿಕೊಂಡು ಒಳ್ಳೊಳ್ಳೆ ಸರಕಾರಿ ಕೆಲಸಗಳಲ್ಲಿ ಸೇರಿಕೊಂಡಿದ್ದರು. ಅವರ ಸಂಬಂಧಿಗಳೆಲ್ಲ ದೂರದೂರದ ನಗರಗಳಲ್ಲಿ ಒಳ್ಳೊಳ್ಳೆ ಅಧಿಕಾರಿಗಳಾಗಿ ಕೆಲಸದಲ್ಲಿದ್ದು ಕೆಲವರು ಒಂದೆರಡು ದಶಕಗಳ ಹಿಂದೆಯೆ ಅಮೆರಿಕಾ ಸೇರಿಕೊಂಡಿದ್ದರು. ಉಳಿದವರು ತಮ್ಮ ವೈಧಿಕ ಪರಂಪರೆಯನ್ನು ಮುಂದುವರಿಸಿಕೊಂಡು ಬರುತ್ತಿದ್ದರು. ಸವ್ಯನ ಓದಿಗೆ ಯವುದೇ ತೊಂದರೆ ಇರಲಿಲ್ಲ. ಆವನೂ ಕೂಡ ಅವರ ಪೋಷಕರನ್ನು ನಿರಾಶೆಗೊಳಿಸದೆ ಚೆನ್ನಾಗಿಯೆ ಓದುತ್ತಿದ್ದ. ಅವರ ತಂದೆ ಒಂದು ಸ್ವಂತ ಮನೆಯನ್ನು ಕಟ್ಟಿಕೊಂಡಿದ್ದರು.

ದಲಿತ ಸಮುದಾಯದಿಂದ ಬಂದಿರುವ ಅಮರನಾಥನ ತಂದೆಯೆ ಅವರ ಕುಟುಂಬದಲ್ಲಿ ಸರಕಾರಿ ಕೆಲಸಕ್ಕೆ ಸೇರಿದ ಮೊದಲ ತಲೆಮಾರಿನ ವ್ಯಕ್ತಿ. ಅಂತಹ ಹಿನ್ನೆಲೆಯಿಂದ ಬಂದಿರುವ ಅವರಿಗೆ ಅತ್ತ ಆರ್ಥಿಕ ಸ್ಥಿರತೆಯೂ ಇರಲಿಲ್ಲ ಇತ್ತ ಸಾಮಾಜಿಕ ಸಮಾನತೆಯೂ ಇರಲಿಲ್ಲ. ಎರಡರ ನಡುವೆ ಸಿಲುಕಿಕೊಂಡು ತೊಳಲಾಡುತ್ತಿರುವ ಸಮಯದಲ್ಲಿ ಅಮರನಾಥನ ತಂದೆ ತನ್ನ ತಂದೆ ತಾಯಿಗೂ ಒಡಹುಟ್ಟಿದವರಿಗೂ ಸಹಾಯ ಮಾಡಬೇಕಿತ್ತು. ಹಾಗೆ ತನ್ನ ಮಕ್ಕಳನ್ನು ಓದಿಸಿ ಪೋಷಿಸಬೇಕಾಗಿತ್ತು.

ಅವರಿಗೆ ಬರುತ್ತಿದ್ದ ಸರಕಾರಿ ಸಂಬಳ ಕೈ ಮತ್ತು ಬಾಯಿಯ ನಡುವೆಯೆ

ಇರುತ್ತಿತ್ತು. ಅವನ ತಂದೆಗೆ ಇದ್ದ ಒಂದೇ ಒಂದು ಮಹತ್ವಾಕಾಂಕ್ಷೆ ಎಂದರೆ ಹೇಗಾದರು ಮಕ್ಕಳನ್ನು ಓದಿಸಿ ಅವರನ್ನು ಒಳ್ಳೊಳ್ಳೆ ಕೆಲಸಗಳಿಗೆ ಸೇರಿಸಬೇಕು ಎನ್ನುವುದು. ಅಮರನಾಥ ದೊಡ್ಡ ಮಗನಾಗಿದ್ದು, ಸಾಕಷ್ಟು ಚೆನ್ನಾಗಿಯೆ ಓದುತ್ತಿದ್ದನು,ಇಲ್ಲವೆಂದರೆ ವೈದ್ಯಕೀಯದಲ್ಲಿ ಸೀಟು ದೊರಕುತ್ತಿರಲಿಲ್ಲ. ಬೆಂಗಳೂರಿಗೆ ಮೂವತ್ತು ಕಿ.ಮೀ.ಗಳ ದೂರದಲ್ಲಿರುವ ಅವರ ಹಳ್ಳಿಯಲ್ಲಿ ಅವರಿಗೆ ಒಂದು ಮನೆ ಇದ್ದು ಈಗ ಬೆಂಗಳೂರು ನಗರ ಅವರ ಹಳ್ಳಿಯವರೆಗೂ ಬೆಳೆದುಬಿಟ್ಟಿದೆ.

ಗೌಡ ಜನಾಂಗಕ್ಕೆ ಸೇರಿದ ಹರ್ಷನ ತಂದೆ ಹಳ್ಳಿಯಲ್ಲಿ ಬಡತನ ತಾಳಲಾರದೆ ಬೆಂಗಳೂರಿಗೆ ಓಡಿಬಂದು, ಯಾವುದೊ ಕಾಲದಿಂದ ಆಟೋ ಓಡಿಸುತ್ತಿದ್ದರು. ಅವನ ಕುಟುಂಬದಲ್ಲೂ ಅಷ್ಟೇ ಮೊದಲಬಾರಿಗೆ ಮಕ್ಕಳು ನಾಲ್ಕು ಅಕ್ಷರಗಳನ್ನು ಕಲಿತುಕೊಳ್ಳುತ್ತಿದ್ದರು. ಹರ್ಷನ ತಂದೆ ಆಟೋಚಾಲಕ ನಾದರು ಕುಡಿಯದೆ, ಯಾರ ತಂಟೆಗೆ ಹೋಗದೆ ತನ್ನ ಪಾಡಿಗೆ ತಾನು ಬೆಳಗ್ಗೆಯಿಂದ ರಾತ್ರಿಯವರೆಗೆ ಆಟೋ ಓಡಿಸಿ ಸಾಯಂಕಾಲ ಮನೆಗೆ ಬೇಕಾದದ್ದನ್ನು ತಂದು ಕೊಡುತ್ತಿದ್ದರು. ತಾನಾಯಿತು ತನ್ನ ಕುಟುಂಬ ಮತ್ತು ಮನೆಯಾಯಿತು.

ಬೆಂಗಳೂರಿನ ಒಂದು ಏರಿಯಾದಲ್ಲಿ ಅತ್ತ ಹಳ್ಳಿಯೂ ಅಲ್ಲ ಇತ್ತ ಸ್ಲಮ್ಮು ಅಲ್ಲ, ಅಂತಹ ಒಂದು ಪ್ರದೇಶದಲ್ಲಿ ಎರಡು ಚದರದ ಒಂದು ಸೀಟಿನ ಮನೆಯನ್ನು ಕಟ್ಟಿಕೊಂಡಿದ್ದರು. ಹರ್ಷನ ತಂದೆ ತನ್ನ ಮಗ ಚೆನ್ನಾಗಿ ಓದಿ ವೈದ್ಯಕೀಯದಲ್ಲಿ ಸೀಟು ಗಿಟ್ಟಿಸಿದಾಗ ಏನು ಮಾಡಬೇಕೊ ಗೊತ್ತಾಗದೆ ಜೋರಾಗಿ ತುಂಬಾ ಅತ್ತುಬಿಟ್ಟಿದ್ದರು. ನನ್ನ ಮಗ ವೈದ್ಯಕೀಯ ವಿಜ್ಞಾನ ಓದುತ್ತಿದ್ದಾನೆಂದು ತನ್ನ ಆಟೋದಲ್ಲಿ ಕುಳಿತುಕೊಳ್ಳುವ ಸವಾರಿಗಳಿಗೆಲ್ಲ ಹೇಳಿಕೊಂಡಿದ್ದರು. ಹರ್ಷ ಮನೆಯಲ್ಲಿ ದೊಡ್ಡ ಮಗನಾಗಿದ್ದು, ಅವನಿಗೆ ಇಬ್ಬರು ತಂಗಿಯರಿದ್ದರು.

ಹೀಗೆ ಎಷ್ಟೊ ರೀತಿಯ ಹಿನ್ನಲೆಗಳಿಂದ ಬಂದಿದ್ದ ವಿದ್ಯಾರ್ಥಿಗಳು, ವಿದ್ಯಾರ್ಥಿನಿಯರು ಆ ಕಾಲೇಜಿನಲ್ಲಿ ಓದುತ್ತಿದ್ದರು. ಕೃತಿಕಾ, ರೂಪ ಮತ್ತು ಅನು ಕೂಡ ಅದೆ ಕಾಲೇಜಿನಲ್ಲಿ ಓದುತ್ತಿದ್ದರು. ಅವರ ಕುಟುಂಬಗಳ ಹಿನ್ನೆಲೆಯ ಬಗ್ಗೆ ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಅವರೆಲ್ಲ ಐಶ್ವರ್ಯವಂತರು.

* * *

ಕಾಲೇಜ್ ಕ್ಯಾಂಪಸ್‌ನಲ್ಲಿ ವಿದ್ಯಾರ್ಥಿಗಳು ಎಂದಿನಂತೆ ಲವಲವಿಕೆಯಿಂದ ಓಡಾಡುತ್ತಿದ್ದಾರೆ. ವಿದ್ಯಾರ್ಥಿನಿಯರು ಸ್ಕೂಟಿ, ಕೈನಿಟಿಕ್ ಹೊಂಡಾಗಳಲ್ಲಿ ಬಂದು ಇಳಿಯುತ್ತಿದ್ದರೆ, ವಿದ್ಯಾರ್ಥಿಗಳು ಹೀರೊಹೊಂಡಾ, ಬಜಾಜ್ ಕಾವಾಸಕಿ, ಮುಂತಾದ

ಗಾಡಿಗಳಲ್ಲಿ ಬಂದು ಇಳಿಯುತ್ತಿದ್ದಾರೆ. ಬುದ್ಧಿವಂತ ವಿದ್ಯಾರ್ಥಿಗಳಿಂದ ಕಾಲೇಜ್ ಆವರಣ ತುಂಬಿಹೋಗಿದೆ. ವಿದ್ಯಾರ್ಥಿಗಳು ವಿದ್ಯಾರ್ಥಿನಿಯರೆನ್ನುವ ಭೇದ ಭಾವ ಇಲ್ಲದೆ ಫ್ರಿಯಾಗಿ ಮಾತು ಮಾತಿಗೂ ನಗುತ್ತ ಒಬ್ಬರನ್ನೊಬ್ಬರು ಚಿವುಟುತ್ತಾ, ನಗುತ್ತಾ ಓಡಾಡುತ್ತಿದ್ದಾರೆ. ಎಲ್ಲರೂ ಆಗಲೆ ಏಪ್ರಾನ್ ಧರಿಸಿದ್ದಾರೆ. ಕೆಲವು ವಿದ್ಯಾರ್ಥಿನಿಯರು ಏಪ್ರಾನ್ ಧರಿಸಿರುವುದರಿಂದ ತಮ್ಮ ಸೌಂದರ್ಯವೆಲ್ಲ ಮುಚ್ಚಿಹೋಗಿದೆ ಎಂದು ಚಡಪಡಿಸುತ್ತಿದ್ದಾರೆ. ಆಗ ಕ್ಯಾಂಪಸ್‌ನ ಒಳಕ್ಕೆ ಬಂದ ಅಮರನಾಥ ಮತ್ತು ಹರ್ಷ ತಮ್ಮ ಬ್ಯಾಗುಗಳಲ್ಲಿದ್ದ ಏಪ್ರಾನ್‌ಗಳನ್ನು ತೆಗೆದು ಧರಿಸಿಕೊಂಡರು. ಅಷ್ಟರಲ್ಲಿ ಸವ್ಯ ಗಾಡಿಯಲ್ಲಿ ಬಂದು ಇಳಿಯುತ್ತಿದ್ದಂತೆ ಭವ್ಯ ಕೂಡ ಗಾಡಿಯಲ್ಲಿ ಬಂದು ಇಳಿದಳು.

ಇಬ್ಬರು ವಾಹನ ನಿಲ್ದಾಣದಲ್ಲಿ ಮುಖಾಮುಖಿಯಾದರು. ''ಹಲೊ ಭವ್ಯ... ಹಲೊ ಸವ್ಯ....'' ಎಂದು ಕೈ ಕೈ ಅಮಿಕಿಕೊಂಡರು. ದೂರದಲ್ಲಿ ನಿಂತು ನೋಡುತ್ತಿದ್ದ ಹರ್ಷ ''ಲೋ ಅಮರ್ ಈ ನನ್ನ ಮಗ್ನದು ಲವ್ ಬ್ಲೈಂಡ್ ಅಂತಾರೆ. ಎಲ್ಲಾ ಬೊಗಳೆ ಕಣೋ ಮನಿ ಇದ್ದರೆ ಲವ್ವು ಗಿವ್ವು ಎಲ್ಲಾ ತಾನಾಗೆ ತಾನೆ ಓಡಿಬರುತ್ತೆ '' ಎಂದ. ಅಮರನಾಥ ಯಾವ ಪ್ರತಿಕ್ರಿಯೆಯೂ ತೋರದೆ ಏನೊ ಯೋಚಿಸುತ್ತ ಸುಮ್ಮನೆ ನಿಂತಿದ್ದ.

''ಇವಳು ಚೆನ್ನಾಗಿದಾಳೆ. ಈ ನನ್ನ ಮಗ ಸವ್ಯಾನೆ ಸರಿ ಇಂತವರ್ನ ಪಟಾಕಾಯಿಸೊದಕ್ಕೆ'' ಹರ್ಷ ಹೇಳಿದ. ಗಂಭೀರವಾಗಿ ಏನೋ ಯೋಚಿಸುತ್ತಿದ್ದ ಅಮರನಾಥ ''ಲೋ ನೀನು ಸುಮ್ಮನೆ ಇರೊ. ಬೆಳಗ್ಗೇನೆ ಬ್ರೈನ್‌ಗೆ ಕೈ ಹಾಕಬೇಡ '' ಎಂದ. ''ನಿನ್ನ ತಲೆಯಲ್ಲಿ ಬ್ರೈನ್ ಎಲ್ಲಿದೆ....? ಇರುವುದು ಬರಿ ಬ್ರಾನ್'' ಹರ್ಷ ಜೋರಾಗಿ ನಕ್ಕ. ಹರ್ಷನ ಮಾತಿಗೆ ಅಮರನಾಥನು ನಕ್ಕ. ಅಷ್ಟರಲ್ಲಿ ಇನ್ನಷ್ಟು ವಿದ್ಯಾರ್ಥಿಗಳು ಅವರ ಹತ್ತಿರಕ್ಕೆ ಬಂದರು. ಸವ್ಯ, ಭವ್ಯಳಿಗೆ ಏನೊ ಹೇಳಿ ಗೆಳೆಯರ ಹತ್ತಿರಕ್ಕೆ ನಗುತ್ತಾ ಬಂದು-

''ಹಾಯ್ ಫ್ರೆಂಡ್ಸ್ ಹೇಗಿದ್ದೀರಪ್ಪ...?'' ಎಂದ. ''ಬೆಳಿಗ್ಗೇನೆ ಅಟಕಾಯಿಸಿಕೊಂಡಿದ್ದೀಯ...?'' ಹರ್ಷ ಹೇಳಿದ. ಬೆಳಗ್ಗೇನೆ ಸ್ವಲ್ಪ ಬಿಸಿ ಮಾಡಿಕೊಂಡುಬಿಟ್ರೆ ಕ್ಲಾಸ್‌ನಲ್ಲಿ ಪಾಠ ಚೆನ್ನಾಗಿ ತಲೆಗೇರುತ್ತೆ. ಅದೋಗಲಿ ರಾತ್ರಿ ಏನೇನು ಓದಿದಿರಿ...? ಏನೇನು ಕನಸು ಕಂಡ್ರಿ....?'' ಸವ್ಯ ಮಾತು ಬದಲಿಸಿದ. ''ರಾತ್ರೀದು ಮಾತು ಇರಲಿ ಈಗ ನೀನು ಅವಳ ಜೊತೆ ಏನು ಮಾತನಾಡಿದೆ...?'' ಹರ್ಷ ಪ್ರಶ್ನಿಸಿದ. ''ಲೋ ಅಮರನಾಥ ಇವನೇನೊ ಬೆಳಗ್ಗೇನೆ ಇಂಗ್ ತಲೆತಿಂತಾನೆ...'' ಸವ್ಯ ಕೇಳಿದ. ''ಅವನಿಗೆ ಕ್ಯಾಂಪಸ್‌ನಲ್ಲಿ ಯಾರ್ಯಾರು ಏನೇನು

ಮಾತಾಡ್ತಾರೆ ಎಲ್ಲಾ ಗೊತ್ತಾಗ್ತಿಬಿಡಬೇಕು. ಇಲ್ಲ ಅಂದರೆ ಮೈಯಲ್ಲಿ ತಣ್ಣಗಾಗಿ ಬಿಡುತ್ತಂತೆ'' ಅಮರನಾಥ ನಗುತ್ತಾ ಹೇಳಿದ. ಅಷ್ಟರಲ್ಲಿ ತರಗತಿಯ ಬೆಲ್ಲು ಹೊಡೆದು ಎಲ್ಲರೂ ತಮ್ಮ ತಮ್ಮ ತರಗತಿಗಳ ಕಡೆಗೆ ನಡೆದರು.

ಸುಮಾರು ದೊಡ್ಡದಾದ ತರಗತಿಯಲ್ಲಿ ನೂರಾ ಇಪ್ಪತ್ತು ವಿದ್ಯಾರ್ಥಿಗಳು, ಅವರಿಗೆ ಇಷ್ಟವಾದ ರೀತಿಯಲ್ಲಿ ಕುಳಿತುಕೊಂಡರು. ತರಗತಿಗಳು ಶುರುವಾಗಿ ಆಗಲೆ ಆರು ತಿಂಗಲಾಗಿದ್ದರಿಂದ ಎಲ್ಲರಿಗೂ ಎಲ್ಲರೂ ಪರಿಚಯವಾಗಿ ಹೋಗಿದ್ದರು. ತರಗತಿಗಳಲ್ಲಿ ,ಕ್ಯಾಂಪಸ್‌ನಲ್ಲಿ ವಿದ್ಯಾರ್ಥಿಗಳು ಒಬ್ಬರನ್ನೊಬ್ಬರು ಛೇಡಿಸುತ್ತ ಜೋಕ್‌ಗಳನ್ನು ಕಟ್ ಮಾಡುತ್ತ ನಗಾಡುತ್ತಿದ್ದರು. ಅಮರನಾಥ, ಹರ್ಷ ಮತ್ತು ಸವ್ಯ ಒಂದೇ ಬೆಂಚಿನಲ್ಲಿ ಕುಳಿತುಕೊಳ್ಳುತ್ತಿದ್ದರು. ಈಗೀಗ ಸವ್ಯ ಪಕ್ಷ ಮಾರುವ ರಾಜಕಾರಣೆಯಂತೆ ಆಗಾಗ ಹುಡುಗಿಯರ ಪಕ್ಕಕ್ಕೆ ಸೇರಿಕೊಳ್ಳುತ್ತಿದ್ದ.

ತರಗತಿಯ ಒಳಗೆ, ಹೊರಗೆ ಹಲವು ಗುಂಪುಗಳಾಗಿದ್ದವು. ಕನ್ನಡ ಮಾತನಾಡುವ ವಿದ್ಯಾರ್ಥಿನಿಯರದೆ ಒಂದೆರಡು ಗುಂಪುಗಳಾದರೆ, ಹೊರ ರಾಜ್ಯಗಳಿಂದ ಬಂದ ಬಿಹಾರಿ-ಯು.ಪಿ.ಗಳದೆ ಒಂದು ಗುಂಪಿತ್ತು. ಆಂಧ್ರದವರು, ಬಂಗಾಳಿಗಳು, ಕೇರಳದವರು ಹೀಗೆ ಹಲವು ಗುಂಪುಗಳಿದ್ದವು. ದಿನಕ್ಕೊಂದು ಕಡೆ ಕುಳಿತುಕೊಳ್ಳುವ ವಿದ್ಯಾರ್ಥಿಗಳು ಇದ್ದರು. ಕೃತಿಕಾ, ರೂಪ ಮತ್ತು ಅನು ಮೂವರು ಒಂದೇ ಮನೆಯಲ್ಲಿ ಇದ್ದುದರಿಂದ ಇಲ್ಲಿಯೂ ಒಬ್ಬರನ್ನು ಬಿಟ್ಟು ಒಬ್ಬರು ಇರುತ್ತಿರಲಿಲ್ಲ.

ದಿನಗಳು ಉರುಳುತ್ತಿದ್ದಂತೆ ಒಬ್ಬೊಬ್ಬ ವಿದ್ಯಾರ್ಥಿನಿಯು ಒಬ್ಬೊಬ್ಬ ಹುಡುಗನ ಕಡೆಗೆ ಚುಂಬಕದಂತೆ ಆಕರ್ಷಿತರಾಗುತ್ತಿದ್ದರು. ಈ ತರಗತಿಯಲ್ಲಿ ಇರುವವರನ್ನು ನೋಡಲು ಬೇರೆ ತರಗತಿಗಳ ವಿದ್ಯಾರ್ಥಿಗಳು ಬರುತ್ತಿದ್ದರೆ, ಈ ತರಗತಿಯಲ್ಲಿ ಇರುವವರು ಬೇರೆ ತರಗತಿಗಳಲ್ಲಿ ಇರುವವರನ್ನು ಹುಡುಕಿಕೊಂಡು ಹೋಗುತ್ತಿದ್ದರು. ಕೆಲವು ಕುಡಿಮಿಗಳು ಮತ್ತು ಲವ್ ಮಾಡುವುದರಲ್ಲಿ ಹಿಂದುಳಿದವರು ಯಾರ ಗೊಡವೆಗೂ ಹೋಗದೆ ತಾವಾಯಿತು ತಮ್ಮ ಓದಾಯಿತು, ಅಷ್ಟಕ್ಕೆ ತಮ್ಮ ವ್ಯವಹಾರಗಳನ್ನು ಸೀಮಿತಗೊಳಿಸಿಕೊಂಡಿದ್ದರು.

ಸವ್ಯ, ಅಮರನಾಥ ಮತ್ತು ಹರ್ಷನನ್ನು, ಆಗಾಗ ಅವರ ಗೆಳೆಯರು, ಕೃತಿಕಾಳ ಗುಂಪನ್ನು ನೋಡಿ ''ನೋಡ್ರೋ ನೀವು ಮೂವರಿದ್ದೀರ, ಅವರು ಮೂವರಿದ್ದಾರೆ ಸರಿಯಾದ ಸಮಯ ನೋಡಿ ಅಟಕಾಯಿಸಿಕೊಂಡು ಬಿಡಿ'' ಎಂದು ರೇಗಿಸುತ್ತಿದ್ದರು. ಆ ದಿನ ಅಮರನಾಥ, ಸವ್ಯ ಮತ್ತು ಹರ್ಷ ಒಂದೇ ಬೆಂಚಿನಲ್ಲಿ ಕುಳಿತುಕೊಂಡಿದ್ದರು. ಅವರ ಮುಂದಿನ ಬೆಂಚಿನಲ್ಲಿ ಕೃತಿಕಾ, ರೂಪ ಮತ್ತು ಅನು ಕುಳಿತಿದ್ದರು. ಹಿಂದೆ

ಕುಳಿತಿದ್ದ ಮೂವರು, ಮೂವರನ್ನು ತೀರ ಹತ್ತಿರದಿಂದ ನೋಡುತ್ತ ಪರವಾಗಿಲ್ಲ ಕಣ್ರೊ ಹುಡುಗಿಯರು ತುಂಬಾ ಚೆನ್ನಾಗಿದ್ದಾರೆ. ಇಷ್ಟು ದಿನ ಇಷ್ಟೊಂದು ಸುಂದರವಾಗಿದ್ದರು ನಮ್ಮ ಕಣ್ಣುಗಳಿಗೆ ಕಾಣಿಸಲಿಲ್ಲವಲ್ಲ...? ಎಂದು ಕಣ್ಣುಗಳಲ್ಲೆ ಮಾತನಾಡಿಕೊಂಡರು.

"ಎಕ್ಸ್‌ಕ್ಯೂಸ್ಮಿ ನೀವು ಮೂವರು ಇವೊತ್ತು ತುಂಬಾ ಬೊಂಬಾಟಾಗಿ ಕಾಣಿಸ್ತಾ ಇದ್ದೀರಾ..." ಸವ್ಯ ಹೇಳಿಯೇಬಿಟ್ಟ. "ಥ್ಯಾಂಕ್ಸ್ ಫರ್ ಯುವರ್ ಕಾಂಪ್ಲಿಮೆಂಟ್ಸ್" ಎಂದಳು ಕೃತಿಕಾ. ಜೊತೆಗೆ ರೂಪ ಮತ್ತು ಅನು ಹೂವುಗಳು ಗಿಡಗಳಿಂದ ಉದುರಿಹೋದಂತೆ ನಕ್ಕರು. ಮೂವರು ತಮ್ಮ ಸೌಂದರ್ಯದ ಬಗ್ಗೆ ಹೆಮ್ಮೆ ಪಡುವಂತೆ ಅಟ್ಟಹಾಸಗೊಂಡಿದ್ದರು.

"ನನ್ನ ಮಗ ಒಂದೇ ಸಲಕ್ಕೆ ಮೂವರಿಗೂ ಬೆಣ್ಣೆ ಅಚ್ಚುತ್ತಾನೆ ನೋಡು" ಹರ್ಷ, ಅಮರನಾಥನ ಕಿವಿಯಲ್ಲಿ ಹೇಳಿದ. ಸವ್ಯ ಯಾವುದನ್ನು ತಲೆಗೆ ಅಚ್ಚಿಕೊಳ್ಳದೆ "ಏನು ಸೆಂಟು ಉಪಯೋಗಿಸಿರುವುದು ನೀವು...?" ಕೇಳಿದ. ಮೂವರು ಒಮ್ಮೆಲೆ ಇಲ್ಲೈ ಏಯಿಟೀನ್" ಎಂದರು. ಅಷ್ಟರಲ್ಲಿ ಅನಾಟಮಿ ಪ್ರೊಫೆಸರು ಒಳ್ಳೆ ಸೂಟಿನಲ್ಲಿ ಒಳಕ್ಕೆ ಬಂದು ಬ್ಲಾಕ್ ಬೋರ್ಡಿನ ಮುಂದೆ ನಿಂತುಕೊಂಡು ಎಲ್ಲರನ್ನು ಮುಗುಳುನಗುತ್ತಾ ನೋಡುತ್ತಿದ್ದರು. ಮಾತನಾಡುತ್ತಿದ್ದ ವಿದ್ಯಾರ್ಥಿಗಳ ಕಡೆಗೆ ಅವರು ನೋಡುತ್ತಿದ್ದಂತೆ ಎಲ್ಲರೂ ಮಾತು ನಿಲ್ಲಿಸಿ ಸುಮ್ಮನಾದರು. ಎಲ್ಲರನ್ನು ಸುಮ್ಮನಾಗಿಸಲು ಅವರು ಮೊದಲು ಮಾಡುತ್ತಿದ್ದ ಉಪಾಯ ಅದಾಗಿತ್ತು. ತರಗತಿಯಲ್ಲಿ ನಿಶಬ್ಧ ತುಂಬಿಕೊಳ್ಳುತ್ತಿದ್ದಂತೆ ಹಾಜರಿ ಪುಸ್ತಕ ತೆಗೆದುಕೊಂಡು ಹಿಂದಿನ ತರಗತಿಗಳಲ್ಲಿ ಹಾಜರಿ ಆಗದೆ ಇರುವವರ ಹೆಸರುಗಳನ್ನು ಮಾತ್ರ ಕರೆಯುತ್ತಿದ್ದರು. ಅದು ಅವರು ಹಾಜರಿ ಹಾಕುವ ಶೈಲಿ. ಸಂದೇಹ ಬಂದಾಗ ಹೆಸರು ಕರೆದು ವಿದ್ಯಾರ್ಥಿಗಳ ಕಡೆಗೆ ನೋಡುತ್ತಿದ್ದರು. ಒಟ್ಟಿನಲ್ಲಿ ಒಬ್ಬೊಬ್ಬರ ಹಾಜರಿ ಏರುಪೇರಾದರು ವಿದ್ಯಾರ್ಥಿಗಳ ಹಾಜರಿಯನ್ನು ಸರಿಯಾಗಿಯೆ ಹಾಕುತ್ತಿದ್ದರು. ಈ ರೀತಿ ಮಾಡುವುದರಿಂದ ಸಮಯ ಹೆಚ್ಚು ಹಾಳಾಗುತ್ತಿರಲಿಲ್ಲ.

-"ಓಕೆ ಈಹೊತ್ತು ಯಾವ ಪಾಠ ? ಲಂಗ್ಸ್ ಅಲ್ಲವ....?" ಎಂದಿದ್ದೆ ಲಂಗ್ಸ್ ಬಗ್ಗೆ ಹೇಳುತ್ತಾ ಹೋಗುತ್ತಿದ್ದರು. "ತಾಯಿಯ ಗರ್ಭದಲ್ಲಿ ಬಾಯಿಮುಚ್ಚಿಕೊಂಡು ಕುಳಿತಿರುವ ಮಗು ಹೊರಜಗತ್ತಿಗೆ ಬಂದೊಡನೆಯೆ ಒಮ್ಮೆಲೆ ಉಸಿರಾಡಲಾಗದೆ ಕಕ್ಕಾಬಿಕ್ಕಿಯಾಗುತ್ತದೆ. ಆಗ ದಾದಿಯರು ಮಗುವಿನ ಎರಡು ಕಾಲುಗಳನ್ನು ಗಾಳಿಯಲ್ಲಿ ಹಿಡಿದುಕೊಂಡು ಬೆನ್ನಿನ ಮೇಲೆ ಮೃದುವಾಗಿ ಒಂದು ಏಟು ಬಾರಿಸಿದಾಗ ನವಜಾತ

ಶಿಶು ಬಾಯಿ ತೆರೆದುಕೊಂಡು ಚಿಟ್ಟನೆ ಚೀರಿಕೊಳ್ಳುತ್ತದೆ. ಪಂಚಭೂತಗಳಲ್ಲಿ ಒಂದಾದ ವಾಯು ಆ ಮಗುವಿನ ದೇಹವನ್ನು ಪ್ರವೇಶಿಸಿ ದೇಹಕ್ಕೆ ಉಸಿರು ತುಂಬುತ್ತದೆ. ತಾಯಿಯ ಗರ್ಭದಿಂದ ಬೇರ್ಪಟ್ಟ ಮಗುವಿನ ಪುಟ್ಟ ಹೃದಯ ಸ್ವಯಮ್ಮಾಗಿ ಲಬ್‌ಡಬ್ ಎಂದು ಬಡಿದುಕೊಳ್ಳಲು ಪ್ರಾರಂಭಿಸುತ್ತದೆ.'' ಹಾಗೆ ಉಸಿರುಗೂಡು ಕೂಡ ವಿಶೇಷವಾಗಿ ಸುತ್ತಲಿನ ಪ್ರಪಂಚದ ಜೊತೆಗೆ ಶ್ವಾಸ, ನಿಶ್ವಾಸವನ್ನು ಪ್ರಾರಂಭಿಸುತ್ತದೆ.'' ಹೀಗೆ ಈ ಪ್ರೊಫೆಸರು ಹೇಳುತ್ತಾ ಹೋಗುತ್ತಿದ್ದರೆ ವಿದ್ಯಾರ್ಥಿಗಳು ಕೇಳುತ್ತ ಕೇಳುತ್ತಾ ಅವರ ಬೆನ್ನ ಹಿಂದೆಯೆ ಸಾಗಿದ್ದರು.

ಬೆಲ್ಲು ಡಣ್... ಡಣ್.... ಎಂದು ಬಾರಿಸಿದಾಗ ಎಲ್ಲರೂ ವಾಸ್ತವಕ್ಕೆ ಬಂದಿದ್ದರು. ಪಾಠ ಕೇಳುತ್ತಾ ಕೇಳುತ್ತಾ ಅವರಿಗೆ ಸಮಯದ ಅರಿವೆ ಗೊತ್ತಾಗಲಿಲ್ಲ. ಪ್ರೊಫೆಸರು ಪುಸ್ತಕಗಳನ್ನು ತೆಗೆದುಕೊಂಡು ಹೊರಟು ಹೋದರು. ಮತ್ತೆರಡು ತರಗತಿಗಳನ್ನು ಮುಗಿಸಿಕೊಂಡು ವಿದ್ಯಾರ್ಥಿಗಳೆಲ್ಲ ಹೊರಗೆ ಬರುತ್ತಿದ್ದಂತೆ ದೆವ್ವ ಎಲ್ಲಿದೆ ಎಂದರೆ ಬಾಗಿಲಲ್ಲೆ ನಿಂತಿದೆ ಎನ್ನುವಂತೆ ರೊನಾಲ್ಡ್ ಎದುರಿಗೆ ನಿಂತಿದ್ದಾನೆ....? ತರಗತಿಯಿಂದ ಹೊರಗಡೆಗೆ ಬರುತ್ತಿದ್ದ ಪ್ರತಿಯೊಬ್ಬ ವಿದ್ಯಾರ್ಥಿನಿಯನ್ನು ನೋಡುತ್ತಾ ನಿಂತಿದ್ದ ರೊನಾಲ್ಡ್ ರೂಪ, ಕೃತಿಕಾ ಮತ್ತು ಅನುಳನ್ನು ತದೇಕಚಿತ್ತದಿಂದ ಕೆಳಗಿನಿಂದ ಮೇಲಿನವರೆಗೂ ನೋಡಿ ''ವಾವ್ ಒಳ್ಳೆ ಚಿಟ್ಟಗಳಿವೆಯಲ್ಲ...? ಈ ತರಗತಿಯಲ್ಲಿ....?'' ಎಂದು ಉದ್ಗಾರ ತೆಗೆದ. ಅಷ್ಟರಲ್ಲಿ ಹರ್ಷ, ಅಮರ್ ಮತ್ತು ಸವ್ಯ ಮೂವರು ರೊನಾಲ್ಡ್ ಕಡೆಗೆ ನೋಡುತ್ತ ಒಂದು ಕಡೆ ನಿಂತುಕೊಂಡರು.

ರೊನಾಲ್ಡ್‌ನ ಘಾಟಿ ಕಣ್ಣುಗಳು ಅಮರನಾಥನ ಗುಂಪನ್ನು ಗುರುತಿಸಿ ''ಓ ಬಚ್ಚು ನೀವೂ ಇದೆ ಕ್ಲಾಸೇನಾ...?'' ಎಂದ. ಅವನ ಅಕ್ಕಪಕ್ಕ ನಿಂತಿದ್ದ ಚಮಚಾಗಳು ''ಏನು ಪೀಸುಗಳು ಗುರು'' ಎಂದು ರಾಗ ತೆಗೆದರು. ರೊನಾಲ್ಡ್, ಕೃತಿಕಾ ಮತ್ತು ಗೆಳತಿಯರ ಹಿಂದೆ ನಡೆಯುತ್ತ ನಾಲಿಗೆಯನ್ನು ಚಪ್ಪರಿಸುತ್ತ ಹೋಗಿತ್ತಿದ್ದ. ಕೃತಿಕಾ ಗೆಳತಿಯರು ಪಕ್ಕಕ್ಕೆ ಸರಿದು ನಿಂತುಕೊಂಡರು. ಹತ್ತಿರಕ್ಕೆ ಬಂದ ರೊನಾಲ್ಡ್ ''ಹಲೊ ಗರ್ಲ್ಸ್.... ನನ್ನೆಸರು ರೊನಾಲ್ಡ್ , ರಿಕಿ ರೊನಾಲ್ಡ್ ವಿಲಿಯಮ್ಸ್ ಅಂತ. ನೀವು ಬೇಕಾದರೆ ರಿಕ್ಕಿ ಅಂತ ಕರೆಯಬಹುದು'' ಎಂದ, ದೇಹವನ್ನೆಲ್ಲ ಅಲ್ಲಾಡಿಸುತ್ತ. ಮೂವರಿಗೂ ಏನು ಹೇಳಬೇಕೊ ಅರ್ಥವಾಗದೆ ಇದ್ದಾಗ ''ದಟ್ಸ್ ಓಕೆ '' ಎಂದಳು ಅನು.

''ಫೈನ್.... ನೀವು ಮೂವರು ಕಾಲೇಜಿನಲ್ಲೆ ತುಂಬ ಸುಂದರವಾಗಿದ್ದೀರಿ...'' ರೊನಾಲ್ಡ್ ಮಾತಿಗೆ ''ಅದಕ್ಕೇನಿಗಾ...?'' ಕೃತಿಕಾ ಪ್ರಶ್ನಿಸಿದಳು. ರೊನಾಲ್ಡ್

ಪಕ್ಕದಲ್ಲಿದ್ದ ಚಮಚಾ ತನ್ನ ಕೆನ್ನೆಯನ್ನು ಮುಟ್ಟಿಕೊಳ್ಳುತ್ತ "ಅದಕ್ಕೇನೀಗಾ...?" ಎಂದ. ಮೂವರು ಅಲ್ಲಿಂದ ಹಿಂದಕ್ಕೆ ತಿರುಗಿಕೊಂಡು ಬೇರೆಕಡೆಗೆ ಬಿರುಬಿರನೆ ಹೊರಟುಹೋದರು. ದೂರದಲ್ಲಿ ನಿಂತು ಎಲ್ಲವನ್ನು ನೋಡುತ್ತಿದ್ದ ಅಮರ್ ಮತ್ತು ಅವನ ಗೆಳೆಯರು. "ಏನೊ ಈ ನನ್ನ ಮಗ ನಮ್ಮ ತರಗತಿ ಹುಡುಗಿಯರಿಗೆ ಮುತ್ತಿಕೊಳ್ತಾ ಇದ್ದಾನೆ. ಇವನಿಗೆ ಏನಾದರು ಒಂದು ದಾರಿ ತೋರಿಸಬೇಕು. ಇಲ್ಲ ಅಂದರೆ ತೊಂದರೆ ಬರೊದು ನಮಗೇನೆ...?" ಹರ್ಷ ಹೇಳಿದ. "ಒಳ್ಳೆ ಸಹವಾಸ ಆಯಿತಲ್ಲ ಈ ಬಿಹಾರಿ ನನ್ನ ಮಗನ್ದು...? ಇವನ ಚರಿತ್ರೆ ಚೆನ್ನಾಗಿಲ್ಲ.... ಏನು ಮಾಡೊದು ಈಗ ....? ಇವನು ಕಾಲೇಜು ಓದ್ತಾ ಇರೊದರಿಂದ ಒಳಗಡೆ ಬರಬೇಡ ಅಂತ ಹೇಳೊದು ಕಷ್ಟ. ಪ್ರಿನ್ಸಿಪಾಲ್‌ಗೆ ಹೇಳೋಣವಾ" ಸವ್ಯ ಹೇಳಿದ.

"ನಾವು ಆಹೊತ್ತೆ ಸಿಗರೇಟ್‌ನಲ್ಲಿ ಡ್ರಗ್ಸ್ ಹಾಕಿ ಕೊಟ್ಟಾಗಲೆ ಪ್ರಿನ್ಸಿಪಾಲ್‌ಗೆ ಹೇಳಿಬಿಡಬೇಕಾಗಿತ್ತು" ಅಮರ್ ಹೇಳಿದ. "ಅದನ್ನೇ ಈಗ ಹೇಳೊದು" ಹರ್ಷ ಹೇಳಿದ. "ಈಗ ಹೇಳಿದರೆ ಏನೂ ಪ್ರಯೋಜನವಿಲ್ಲ. ಯಾರಿಗಾದರು ಹೇಳಿ ನಾಲ್ಕು ಬಾರಿಸಿದರೆ...?" ಹರ್ಷ ಮತ್ತೆ ಹೇಳಿದ. ಈ ನನ್ನ ಮಗ ಎಲ್ಲಿಂದಾನೊ ಬಂದು ನಮ್ಮ ತಲೆ ತಿನ್ನುತ್ತಾನಲ್ಲ?" ಸವ್ಯ ಗಡ್ಡ ಹಿಡಿದುಕೊಂಡು ಯೋಚಿಸತೊಡಗಿದ.

* * *

ಅಂದು ರಾತ್ರಿ ಹರ್ಷನ ತಂದೆ ಎಂದಿನಂತೆ ಆಟೊ ಓಡಿಸಿಕೊಂಡು ಒಂಭತ್ತು ಗಂಟೆಗೆ ಮನೆಗೆ ಬಂದಿದ್ದರು. ಹರ್ಷನ ತಾಯಿ ಅಡಿಗೆ ರೆಡಿ ಮಾಡಿಕೊಂಡು ಗಂಡನು ಬಂದರೆ ಒಟ್ಟಿಗೆ ಊಟ ಮಾಡೋಣವೆಂದು ಕಾಯುತ್ತಿದ್ದಳು. ಹರ್ಷ ತನ್ನ ಇಬ್ಬರು ತಂಗಿಯರನ್ನು ಓದಿಸುತ್ತ , ತಾನು ಓದಿಕೊಳ್ಳುತ್ತಿದ್ದ. ಹರ್ಷನ ತಂದೆ ಕೈಕಾಲು ತೊಳೆದುಕೊಂಡು ಬಂದು ಮನೆಯ ಒಳಗೆ ಗೋಡೆಗೆ ಒರಗಿಕೊಂಡು ಕುಳಿತುಕೊಂಡರು. ತಾಯಿ ಎಲ್ಲರನ್ನು ಕರೆದು ಊಟ ಬಡಿಸಿದಳು.

ರಾತ್ರಿ ಹೊತ್ತು ಯಾವಾಗಲು ತಿನ್ನಲು ಏನಾದರು ತರುತ್ತಿದ್ದ ತಂದೆ ಆಟೋದಲ್ಲಿ ಮರೆತು ಬಂದಿದ್ದನ್ನು ಜ್ಞಾಪಿಸಿಕೊಂಡಿದ್ದೆ , ಅವರ ಚಿಕ್ಕಮಗಳು ಓಡಿಹೋಗಿ ಗಾಡಿಯಲ್ಲಿದ್ದ ಪೊಟ್ಟಣವನ್ನು ತೆಗೆದುಕೊಂಡು ಬಂದಳು. ಪೊಟ್ಟನವನ್ನು ಬಿಚ್ಚಿದ ತಂದೆ ಎಲ್ಲರಿಗೂ ಒಂದೊಂದು ಚಮ್‌ಚಮ್ ಸಿಹಿ ತೆಗೆದುಕೊಟ್ಟು ಮಿಕ್ಕಿದ್ದನ್ನು ಪತ್ನಿಯ ಕೈಗೆ ಕೊಡುತ್ತಾ....

"ಯಾಗ್ ಓದ್ತಾಯಿದ್ದೀಯಪ್ಪ ಹರ್ಷ...?" ಎಂದು ಮಗನನ್ನು ಕೇಳಿದರು.

''ಚೆನ್ನಾಗಿ ಓದ್ತಾಇದ್ದೀನಪ್ಪ... ನನ್ನ ಬಗ್ಗೆ ನೀವೇನೂ ಯೋಚಿಸಬೇಡಿ. ಒಂದು ವಿಷಯದಲ್ಲೂ ಫೇಲಾಗುವುದಿಲ್ಲ. ಕೋರ್ಸ್ ಮುಗಿದರೆ ನಾನು ಪಾಸಾದಂತೆ'' ಹರ್ಷ ಊಟ ಮಾಡುತ್ತ ಹೇಳಿದ.

''ಏನೊ ಅಪ್ಪ... ನೀನು ಓದಿ ಪಾಸಾಗಿಬಿಟ್ಟರೆ ಸಾಕು. ನಾನು ಬೇಕಾದರೆ ನನ್ನ ಮೈಯಲ್ಲಿ ರಕ್ತ ಇರೊವರೆಗೆ ಆಟೋ ಓಡಿಸಿ ನಿಮ್ಮ ಮೂವರನ್ನು ಓದಿಸ್ತೀನಿ. ನಿನ್ನ ಬಗ್ಗೆ ನನಗೇನೂ ಯೋಚನೆಯಿಲ್ಲ . ನಿನ್ನ ತಂಗಿಯರ ಬಗ್ಗನೆ ನನಗೆ ಯೋಚನೆ. ಅವರಿಬ್ಬರಿಗೂ ಒಳ್ಳೆ ಹುಡುಗರು ಸಿಕ್ಕಿ ಮದುವೆಯಾಗಿ ಬಿಟ್ಟರೆ ಸಾಕು'' ಎನ್ನುತ್ತಿದ್ದಂತೆ ಹರ್ಷನ ತಾಯಿ, ''ಇದೇನ್ರಿ...? ಮಕ್ಕಳು ಸುಮ್ಮನೆ ಊಟ ಮಾಡ್ಲಿ ಬಿಡಿ. ಆಗೊ ಹೊತ್ತಿಗೆ ಎಲ್ಲ ಆಗುತ್ತೆ. ಅವರು ಇನ್ನೂ ಚಿಕ್ಕ ಮಕ್ಕಳು. ಇನ್ನೂ ಬಹಳ ವರ್ಷ ಇದೆ'' ಎಂದಳು. ನಮ್ಮ ತಂದೆ ಯಾಕೆ ಇವೊತ್ತು ಈ ತರಹ ಮಾತಾಡ್ತಾರೆ ಎಂದುಕೊಂಡ, ಹರ್ಷ. ಅವನು ನಾಲ್ಕಾರು ದಿನಗಳಿಂದ ಒಂದಷ್ಟು ಪುಸ್ತಕಗಳಿಗಾಗಿ ತಂದೆಯನ್ನು ಹಣ ಕೇಳಲು ಯೋಚಿಸುತ್ತಿದ್ದರು ತನ್ನ ತಂದೆಯ ಕಷ್ಟಗಳನ್ನು ನೋಡಿ ಸುಮ್ಮನಾದ.

ಕಾಲೇಜಿಗೆ ಸೇರಿದಾಗಿಂದ ಫೀಜು, ಪುಸ್ತಕ, ಬಟ್ಟೆಗಳೆಂದು ಸಾವಿರಾರು ರೂಪಾಯಿಗಳು ಖರ್ಚಾಗಿತ್ತು. ಎಲ್ಲಿಂದಲೊ ಸಾಲ ತಂದಿದ್ದ ತಂದೆ ಅದನ್ನು ತೀರಿಸಲು ಬೆಳಗ್ಗೆಯಿಂದ ರಾತ್ರಿ ಒಂಭತ್ತು ಗಂಟೆಯವರೆಗೂ ಆಟೊ ಓಡಿಸುತ್ತಿದ್ದರು, ಎನ್ನುವುದು ಹರ್ಷನಿಗೆ ತಿಳಿದಿತ್ತು.

ಹೇಗೂ ಇನ್ನು ಮೂರು ವರ್ಷಗಳಲ್ಲಿ ಕೋರ್ಸ್ ಮುಗಿಯುತ್ತದೆ. ಅನಂತರ ಒಂದು ವರ್ಷ ಹೌಸಿಂಗ್ ಮಾಡುವಾಗ ಸ್ವಲ್ಪ ಸ್ಟೈಫಂಡ್ ಸಿಗುತ್ತದೆ. ಆ ವರ್ಷ ಮುಗಿದ ಮೇಲೆ ನಮ್ಮ ತಂದೆ ಆಟೋ ಓಡಿಸುವುದನ್ನು ನಿಲ್ಲಿಸಿ ಮನೆಯ ಪೂರ್ಣ ಜವಾಬ್ದಾರಿಯನ್ನು ತಾನೆ ತೆಗೆದುಕೊಳ್ಳಬೇಕು. ಇಬ್ಬರು ತಂಗಿಯರಿಗೆ ನಾನೇ ಮದುವೆ ಮಾಡಬೇಕು. ಈಗ ಇದನ್ನೆಲ್ಲ ನಾನೇಕೆ ಯೋಚಿಸುತ್ತಿದ್ದೇನೆ...? ಇದ್ಯಾವುದನ್ನು ನಾನು ಮನಸ್ಸಿಗೆ ಅಚ್ಚಿಕೊಳ್ಳಬಾರದು. ಬರಿ ಓದುವುದು ಮಾತ್ರ ನನ್ನ ಕೆಲಸ, ಎಂದುಕೊಂಡ.

* * *

ಕೃತಿಕಾ, ರೂಪ ಮತ್ತು ಅನು ಮನೆಯಲ್ಲಿ ಅಸ್ತವ್ಯಸ್ತ ತೊಡುಗೆಗಳಲ್ಲಿ ಕುಳಿತುಕೊಂಡು ಯಾವುದೊ ಪತ್ರಿಕೆ ನೋಡುತ್ತಾ ಮಾತನಾಡಿಕೊಳ್ಳುತ್ತಿದ್ದಾರೆ. ಅಡಿಗೆ ಮನೆಯಲ್ಲಿ ಅಡಿಗೆಯವಳು ಅಡಿಗೆ ಮಾಡುತ್ತಿದ್ದಾಳೆ.

''ನೋಡೆ ಬಟಕ್ಸ್ ದಪ್ಪವಾಗಿದ್ದರೆ ಜೀನ್ಸ್ ಪ್ಯಾಂಟ್ ಹಿಂದುಗಡೆ ಪಾಕೆಟ್ಸ್ ಇರಬಾರದಂತೆ. ಇದ್ದರೂ ಪಾಕೆಟ್ಟುಗಳನ್ನಿಟ್ಟು , ಅಂಪ್ಲಿಕಟ್ ರೀತಿಯಿದ್ದರೆ ಸಣ್ಣದಾಗಿ

ಕಾಣಿಸ್ತಾರಂತೆ. ಗಿಡ್ಡ ಕಾಲುಗಳು ಇರೋರು ಬೂಟ್‌ಕಟ್ ಪ್ಯಾಂಟು ಹಾಕಿಕೊಂಡರೆ ಉದ್ದವಾಗಿ ಕಾಣ್ತಾರಂತೆ. ದೇಹಕ್ಕೆ ಸರಿಹೊಂದೊ ತರಹ ನಡುವಿನ ಕೆಳಕ್ಕೆ ಕುಳಿತುಕೊಳ್ಳುವಂತೆ ಪ್ಯಾಂಟ್ ಹೊಲಸ್ಕೋಬೇಕಂತೆ. ದೊಡ್ಡ ಹಿಪ್ಸ್ ಇರುವವರು ರಿಲ್ಯಾಕ್ಸ್ ಸ್ಟೈಲ್‌ನಲ್ಲಿ ಟೇಪ್‌ರಿಂಗ್‌ಗಾಗಿ ಪ್ಯಾಂಟು ಹೊಲಿದುಕೊಂಡರೆ ಚೆನ್ನಾಗಿ ಕಾಣಿಸುತ್ತದಂತೆ. ಹೊಕ್ಕಳಕ್ಕಿಂತ ಕೆಳಕ್ಕೆ ರಿಲ್ಯಾಕ್ಸಾಗಿ ಬಿಟ್ಟು ತೊಡೆಗಳವರೆಗೆ ಸ್ನಾರೊ ಹಾಗೆ ಹೊಲಿಸಿಕೊಂಡರೆ ಚೆನ್ನಾಗಿರುತ್ತದಂತೆ. ಹುಡುಗರ ರೀತಿ ಕಾಣಿಸಬೇಕಾದರೆ ನಿಮ್ಮ ದೇಹದ ಆಕಾರಕ್ಕೆ ತಕ್ಕ ಹಾಗೆ ಕೆಳಕ್ಕೆ ಅಗಲವಾಗಿ ಹೊಲಿದುಕೊಂಡು ದೊಡ್ಡ ಪಾಕೆಟ್‌ಗಳನ್ನು ಇಟ್ಟುಕೊಳ್ಳಬೇಕಂತೆ. ತೊಡೆಗಳು ದೊಗಳೆಯಾಗಿ ವ್ಯಯಿಸ್ಟ್‌ನಿಂದ ಕೆಳಕ್ಕೆ ನೇರವಾಗಿ ಹೊಲಿದು ಹಾಕಿಕೊಳ್ಳಬೇಕಂತೆ...''

ಅವರವರ ದೇಹಗಳ ಆಕಾರಗಳಿಗೆ ತಕ್ಕ ಹಾಗೆ ಜೀನ್ಸ್ ಪ್ಯಾಂಟುಗಳನ್ನು ಯಾವ ಯಾವ ರೀತಿ ಹೊಲಿದು ಹಾಕಿಕೊಳ್ಳಬೇಕು ಎಂಬುದಾಗಿ ಒಂದು ಇಂಗ್ಲೀಷ್ ಪುಸ್ತಕವನ್ನು ಓದಿ ತಿಳಿದುಕೊಳ್ಳುತ್ತಿದ್ದರು ಮೂವರು.

''ನೀವೆಲ್ಲ ಗಿಡ್ಡು ಗಿಡ್ಡಾದ ಹುಡುಗಿಯರ ತರಹ ಹೊಲಿಸಿಕೊಳ್ಳಿ. ನಾನು ಹುಡುಗರ ತರಹ ಪ್ಯಾಂಟು ಹೊಲಿದುಕೊಳ್ತೀನಿ'' ಎಂದಳು ಅನು. ''ನೀನು ಹುಡುಗರ ತರಹ ಏನು....? ಹುಡುಗಾನೆ ಕಣೆ '' ಎಂದಳು ರೂಪ. ''ಲೇ ನಾನು ಒಂದು ಬ್ಲೂ ಪಿಲ್ಮಂ ನೋಡಬೇಕು. ಏನಾದರು ವ್ಯವಸ್ಥೆ ಮಾಡಿ'' ಅನು ಕೂಲಾಗಿ ಹೇಳಿದಾಗ, ಬೆಚ್ಚಿಬಿದ್ದ ಕೃತಿಕಾ ಮತ್ತು ರೂಪ ಒಬ್ಬರನ್ನೊಬ್ಬರು ನೋಡಿಕೊಂಡು ''ಏನೇ.... ಇವಳು ನೀನು ಬೆಂಗಳೂರಿಗೆ ಏನು ಮಾಡೊದಕ್ಕೆ ಬಂದಿದ್ದೀಯಾ....? ಲೇ ರೂಪ ನಾವು ಬೇರೆ ಮನೆ ಮಾಡಿಕೊಂಡು ಹೋಗುವುದು ಒಳ್ಳೆಯದು. ಇವಳ ಜೊತೆಯಲ್ಲಿದ್ದರೆ ಏನೊ ತಲೇಗೆ ತಂದಿಡ್ತಾಳೆ '' ಕೃತಿಕಾ ಹೇಳಿದಳು.

''ನನ್ನನ್ನು ಬಿಟ್ಟು ಬೇರೆ ಮನೆ ಮಾಡ್ತೀರಾ...? ನಿಮ್ಮಿಬ್ಬರಿಗೂ ನಾನು ಒಬ್ಬ ಗಂಡಸು ಪಕ್ಕದಲ್ಲಿದ್ದಂತೆ. ನನ್ನನ್ನು ಬಿಟ್ಟು ನೀವು ಬೇರೆಹೋದರೆ ರೇಪ್ ಹಾಗೋಗ್ತೀರ'' ಎಂದಳು ಅನು. ''ಇವಳೇನೆ ಬಾಯಿಗೆ ಬಂದಂಗೆಲ್ಲ ಮಾತಾಡ್ತಾಳೆ ?'' ಕೃತಿಕಾ ಹೇಳುತ್ತಿದ್ದಂತೆ '' ಅಮ್ಮ ಎಲ್ಲಾನು ಟೇಬಲ್ ಮೇಲೆ ಇಟ್ಟಿದ್ದೀನಿ'' ಅಡಿಗೆಯವಳು ಬಾಗಿಲು ಮುಚ್ಚಿಕೊಂಡು ಹೊರಟು ಹೋದಳು. ಮೂವರು ಕೈ ತೊಳೆದುಕೊಂಡು ಊಟ ಮಾಡಲು ಮೇಜಿನ ಕಡೆಗೆ ಹೊರಟರು. ಆ ದಿನ ಭಾನುವಾರವಾದುದರಿಂದ ಅವರಿಗೆ ಆಗತಾನೆ ಬೆಳಗಾಗಿತ್ತು.

✲ ✲ ✲

ಕಾಲೇಜು ಆವರಣ ಎಂದಿನಂತೆ ಅಧ್ಯಾಪಕರು, ವಿದ್ಯಾರ್ಥಿಗಳು ಮತ್ತು ವಾಹನಗಳಿಂದ ತುಂಬಿಹೋಗಿದೆ. ಬೆಳಿಗ್ಗೆ ಎಲ್ಲರಿಗೂ ಒಂದು ವಿಶೇಷವಾದ ಸಮಾಚಾರವೆಂದರೆ ಪರೀಕ್ಷೆಗಳ ವೇಳಾಪಟ್ಟಿಯನ್ನು ಪ್ರಕಟಿಸಲಾಗಿತ್ತು. ಎಲ್ಲಾ ತರಗತಿಗಳ ವಿದ್ಯಾರ್ಥಿಗಳು ತಮ್ಮ ತಮ್ಮ ವೇಳಾಪಟ್ಟಿಯನ್ನು ನೋಡುತ್ತಿದ್ದರು. ಮೊದಲನೇ ವರ್ಷದ ವೈದ್ಯಕೀಯ ತರಗತಿಯ ವೇಳಾಪಟ್ಟಿಯನ್ನು ನೋಡಿದ ವಿದ್ಯಾರ್ಥಿಗಳು ಸ್ವಲ್ಪ ಸೆಳೆತಗೊಂಡರು. ಕಾರಣ ಮೊದಲನೆ ವರ್ಷದಲ್ಲಿದ್ದ ಅನಾಟಮಿ, ಫಿಜಿಯಾಲಜಿ ಮತ್ತು ಬಯೊಕೆಮಿಸ್ಟ್ರಿ ಮೂರು ವಿಷಯಗಳನ್ನು ಪೆಂಡಿಂಗ್ ಇಟ್ಟುಕೊಳ್ಳುವಂತಿರಲಿಲ್ಲ. ಪೆಂಡಿಂಗ್ ಇಟ್ಟುಕೊಂಡರೆ ಮುಂದಿನ ವರ್ಷಕ್ಕೆ ಹೋಗುವಂತಿರಲಿಲ್ಲ. ಎಲ್ಲರೂ ಇವತ್ತಿನಿಂದ ನಿದ್ದೆ ಮಾಡದೆ, ಕ್ಯಾಂಪಸ್‌ನಲ್ಲಿ ಸಮಯ ಹಾಳುಮಾಡದೆ ಓದಬೇಕೆಂದು ಒಳಗೊಳಗೆ ನಿರ್ಧರಿಸಿಕೊಳ್ಳುತ್ತಿದ್ದರು.

ಒಟ್ಟಿನಲ್ಲಿ ಎಲ್ಲರಿಗೂ ನಡುಕ ಶುರುವಾಗಿತ್ತು. ಇದಕ್ಕೆ ಇನ್ನೊಂದು ಕಾರಣವು ಇತ್ತು. ಮೊದನೆ ವರ್ಷದಲ್ಲಿ ಪಾಸಾಗಿಬಿಟ್ಟರೆ ಕೊನೆಯ ವರ್ಷದವರೆಗೆ ಸರಾಗವಾಗಿ ಹೋಗಿಬಿಡಬಹುದು. ಒಂದು ವೇಳೆ ಇಲ್ಲಿಯೆ ಮುಗ್ಗರಿಸಿಬಿಟ್ಟರೆ ಮತ್ತೆ ಮೊದಲನೆ ವರ್ಷದಲ್ಲಿಯೆ ಐದಾರು ವರ್ಷಗಳಾದರು ಆಗಿಬಿಡಬಹುದು ಅಥವಾ ವೈದ್ಯಕೀಯ ವಿಜ್ಞಾನವನ್ನೇ ಮರೆತುಬಿಡಬೇಕಾಗ ಬಹುದು. ಪ್ರಸ್ತುತ ಎರಡನೇ ವರ್ಷದಲ್ಲಿ ಕೇವಲ ಅರವತ್ತು ವಿದ್ಯಾರ್ಥಿ ಗಳಿರುವುದಾಗಿ ತಿಳಿದುಕೊಂಡಿದ್ದ ಮೊದಲನೆ ವರ್ಷದ ವಿದ್ಯಾರ್ಥಿಗಳ ಜಂಬಾಬಲವೆ ಉಡುಗಿಹೋಗಿತ್ತು. ಕಾರಣ ಅರವತ್ತು ವಿದ್ಯಾರ್ಥಿಗಳು ಫೇಲಾಗಿದ್ದರು.

ಬೆಲ್ಲು ಹೊಡೆದಿದ್ದೆ ಎಲ್ಲರೂ ತಮ್ಮ ತಮ್ಮ ತರಗತಿಗಳ ಕಡೆಗೆ ಹೊರಟುಹೋದರು. ಪ್ರೊಫೆಸರು ಪಾಠ ಮಾಡುತ್ತಿದ್ದರು, ಯಾರ ತಲೆಗೂ ಏನೂ ಏರುತ್ತಿರಲಿಲ್ಲ. ನಾವು ಈ ವರ್ಷ ಪಾಸ್‌ಆಗ್ತೀವೋ....? ಇಲ್ಲ ಡುಮುಕಿ ಹೊಡೀತೀವೊ....? ಎನ್ನುವ ಸಂದೇಹದ ಹುಳ ಎಲ್ಲರ ತಲೆಯನ್ನು ಜೂಯ್.... ಎಂದು ಕೊರೆಯುತ್ತಿತ್ತು. ತರಗತಿಗಳು ಮುಗಿದರೆ ಸಾಕು, ಎಲ್ಲರೂ ತಮ್ಮ ತಮ್ಮ ಮನೆಗಳಿಗೆ, ಹಾಸ್ಟೆಲಿಗೆ ಹೋಗಿ ಓದಿಕೊಳ್ಳಬೇಕು ಎಂದುಕೊಂಡರು. ಕೆಲವರಂತು ನಾಳೆಯಿಂದ ಥಿಯರಿ ತರಗತಿಗಳಿಗೆ ಬರುವುದೇ ಬೇಡವೆಂದು ನಿರ್ಧಾರ ತೆಗೆದುಕೊಂಡುಬಿಟ್ಟರು. ಉಳಿದ ಒಂದೆರಡು ಅನಾಟಮಿ ಪ್ರಾಕ್ಟಿಕಲ್ಸ್ ತರಗತಿಗಳನ್ನು ಮುಗಿಸಿದರೆ ಪರೀಕ್ಷೆಗಳಿಗೆ ಮಾತ್ರ ಕ್ಯಾಂಪಸ್ ಕಡೆಗೆ ಬರಬೇಕು ಎಂದುಕೊಳ್ಳುತ್ತಿದ್ದಂತೆ ಬೆಲ್ಲು ಬಾರಿಸಿ ಎಲ್ಲರು ಹೊರಕ್ಕೆ ಲಗುಬಗನೆ ಹೊರಟು ಹೋದರು.

ಸವ್ಯ ಮತ್ತು ಅವನ ಗೆಳೆಯರು ಸ್ವಲ್ಪ ಹೊತ್ತು ಕಾಲೇಜ್ ಆವರಣದಲ್ಲಿ ನಿಂತುಕೊಂಡು ಪರೀಕ್ಷೆಗಳ ತಯಾರಿ ಬಗ್ಗೆ ಯೋಜನೆ ರೂಪಿಸಿದರು. ''ನೋಡ್ರೊ ಬೇಕಾದರೆ ನಮ್ಮ ಮನೇಗೆ ಬಂದುಬಿಡಿ. ಒಂದು ಪ್ರತ್ಯೇಕ ಕೋಣೆ ಇದೆ. ಎಲ್ಲರೂ ರಾತ್ರಿಯಲ್ಲಿ ಓದಿಕೊಳ್ಳಬಹುದು'' ಎಂದು ಸವ್ಯ, ಹರ್ಷ ಮತ್ತು ಅಮರನಾಥನನ್ನು ತನ್ನ ಮನೆಗೆ ಆಹ್ವಾನಿಸಿದ. ''ನೀನು ಹೇಳೊದು ಸರಿಕಣೊ ನಮ್ಮ ಮನೆಗಳಲ್ಲಿ ಓದಿಕೊಳ್ಳುವುದಕ್ಕೆ ಸ್ಥಳಾನೆ ಇಲ್ಲ. ದಿನದಲ್ಲಿ ನಮ್ಮ ಮನೆಗಳಲ್ಲೆ ಓದಿಕೊಂಡು ರಾತ್ರಿ ಹೊತ್ತು ನಿಮ್ಮ ಮನೇಗೆ ಬಂದುಬಿಡ್ತೀವಿ'' ಹರ್ಷ ಮತ್ತು ಅಮರ್ ಹೇಳಿದರು.

ಸರಿ ನಡೆಯಿರಿ ಎಂದು ಮೂವರು ನಡೆದುಕೊಂಡು ಬರುತ್ತಿದ್ದಂತೆ - ಹರ್ಷ '' ಲೊ ಸವ್ಯ, ಅಮರ್... ಅಲ್ಲಿ ನೋಡ್ರೋ...?'' ಎಂದಿದ್ದೆ ಎಲ್ಲರೂ ಆ ಕಡೆಗೆ ನೋಡಿದರು. ರೊನಾಲ್ಡ್ ಜೊತೆಗೆ ಕೃತಿಕಾ, ರೂಪ ಮತ್ತು ಅನು ಹುಲ್ಲಿನಲ್ಲಿ ಕುಳಿತುಕೊಂಡು ಹರಟೆ ಹೊಡೆಯುತ್ತಿದ್ದಾರೆ. ಮೂವರು ಒಮ್ಮೆಲೆ ಶಾಕ್ ಹೊಡೆದುಕೊಂಡಂತೆ ತಬ್ಬಿಬ್ಬಾಗಿಬಿಟ್ಟರು. ಕೆಲವು ಕ್ಷಣಗಳು ಅವರಿಂದ ಮಾತುಗಳೆ ಹೊರಡಲಿಲ್ಲ.

''ಗಾನ್ ಕೇಸುಗಳು... ಗಾನ್ ವಿಥ್‌ದ ವಿಂಡ್... ಬಿದ್ದೋದವು. ಏನು ಬಂತೊ ಇವರಿಗೆ....? ಹೋಗಿ ಹೋಗಿ ಆ ಡ್ರಗ್ಗಿಷ್ಟ್... ರೋಗ್ಸ್ ಜೊತೆ ಫ್ರೆಂಡ್‌ಶೀಪ್ ಮಾಡಿಕೊಂಡಿದ್ದಾರೆ. ಒಳ್ಳೆ ಹುಡುಗಿಯರು ಇಂತಹವರ ಕೈಯಲ್ಲಿ ಸಿಕ್ಕಾಕಿಕೊಂಡರಲ್ಲೊ.... ಕುರಿಗಳು ಕಟುಕರನ್ನೆ ನಂಬೊದು. ಲೊ ನಡಿಯಿರೊ ಹಾಳಾಗಿ ಹೋಗ್ಲಿ ನಮಗೇನಂತೆ....!'' ಹೀಗೆ ಎಲ್ಲರೂ ಒಂದೊಂದು ಮಾತನಾಡುತ್ತ ಕ್ಯಾಂಪಸ್ ಎದುರಿಗಿರುವ ಸಣ್ಣ ಹೋಟಲಿಗೆ ಬಂದರು.

''ಏನು ತೆಗೆದುಕೊಳ್ತೀರೊ...?'' ಸವ್ಯ ಕೇಳಿದ. ಏನು ತೆಗೆದುಕೊಳ್ಳೊದು...? ಸ್ವಲ್ಪ ವಿಷ ತೆಗೆದುಕೊಳ್ಳಬೇಕು. ಯಾವುದೊ ಬಿಹಾರಿನಿಂದ ಬಂದ ರೌಡಿ ನನ್ಮಗ ನಮ್ಮ ತರಗತಿಯಲ್ಲಿರೊ ಹುಡುಗಿಯರ ಜೊತೆ ಜಮಯಿಸಿಕೊಂಡಿದ್ದಾನಲ್ಲ...?'' ಹರ್ಷ ನೊಂದುಕೊಳ್ಳುತ್ತಾ ಹೇಳಿದ.

''ಅವರೇನು ನಿಮ್ಮ ಮಾವನ ಮಕ್ಕಳಾ....?'' ಅಮರ್ ಪ್ರಶ್ನಿಸಿದ. ಜೋರಾಗಿ ನಕ್ಕ ಸವ್ಯ ''ಹೋಗ್ಲಿ ಚಹಾ ಕುಡಿಯಿರಪ್ಪ'' ಎಂದು ಇಬ್ಬರಿಗೂ ಟೀ ಗ್ಲಾಸುಗಳನ್ನು ತೆಗೆದುಕೊಟ್ಟು ತಾನು ತೆಗೆದುಕೊಂಡ. ''ನನಗೆ ಬಾರಿ ಅವಮಾನ ಆಗ್ತಾಇದೆ ಕಣ್ರೊ'' ಹರ್ಷ ಬಡಬಡಿಸುತ್ತಿದ್ದ.

ಅಷ್ಟರಲ್ಲಿ ರೊನಾಲ್ಡ್, ಕೃತಿಕಾ ಗುಂಪಿನ ಜೊತೆಗೆ ಇನ್ನಷ್ಟು ಹುಡುಗ

ಹುಡುಗಿಯರನ್ನು ಕರೆದುಕೊಂಡು ಬಂದು ಅದೆ ಹೋಟಲಿನಲ್ಲಿ ಕುಳಿತುಕೊಂಡ. ಬೆರರ್ ಅವರ ಹತ್ತಿರಕ್ಕೆ ಹೋಗಿದ್ದ ರೊನಾಲ್ಡ್ ಎಲ್ಲರಿಗೂ ಏನೇನು ಬೇಕೆಂದು ಕೇಳುತ್ತಿದ್ದ. ಸವ್ಯ ಮತ್ತು ಅವನ ಗೆಳೆಯರು ಚಹ ಕುಡಿದು ಅಲ್ಲಿ ನಿಲ್ಲಲಾಗದೆ ಹೊರಟುಬಿಟ್ಟರು. ಹೋಗುವ ಮುಂಚೆ ಕೃತಿಕಾ ಮತ್ತು ಅವಳ ಗೆಳತಿಯರ ಕಡೆಗೆ ಒಮ್ಮೆ ದುರುಗುಟ್ಟಿ ನೋಡಿ ಹೊರಟು ಹೋದರು.

ಹರ್ಷ ಬಸ್ಸಿಳಿದು ತನ್ನ ಮನೆಯಿದ್ದ ಬೀದಿಯ ಕಡೆಗೆ ನಡೆಯತೊಡಗಿದ. ಗಿಜಿಬಿಜಿ ಜೀವನಕ್ಕೆ ಒಗ್ಗಿಹೋಗಿದ್ದ ಬೆಂಗಳೂರಿನ ಜನರಿಗೆ ಗಲಾಟೆ ಕೂಗಾಟ ವಾಹನಗಳ ಓಡಾಟ, ಅಪಘಾತ ಎಲ್ಲವೂ ಮಾಮೂಲಿಯಾಗಿಹೋಗಿದೆ. ಹರ್ಷ ಬ್ಯಾಗನ್ನು ಹೆಗಲಿಗೆ ನೇತಾಕಿಕೊಂಡು ಮನೆಯ ಹತ್ತಿರಕ್ಕೆ ಬರುತ್ತಿದ್ದಂತೆ, ಮನೆಯ ಮುಂದೆ ಜನರ ಗುಂಪಿರುವುದು ಕಾಣಿಸಿತು. ಏನಿರಬಹುದು...? ಹೃದಯದ ಬಡಿತ ಒಮ್ಮಲೆ ಜೋರಾಯಿತು. ಹೆಜ್ಜೆಗಳನ್ನು ಉದ್ದುದ್ದಕ್ಕೂ ಇಡುತ್ತ ಬರುತ್ತಿದ್ದಂತೆ ಗುಂಪಿನ ಮಧ್ಯದಿಂದ ಯಾರೊ ಅಳುವುದು ಜೋರಾಗಿ ಕೇಳಿಸುತ್ತಿದೆ.

ಅಳುತ್ತಿರುವುದು ಯಾರು....? ನನ್ನ ತಾಯಿ, ತಂಗಿಯರು.... ಹರ್ಷ ಗುಂಪನ್ನು ಭೇದಿಸಿಕೊಂಡು ಬಂದು ನೋಡುತ್ತಾನೆ. ಅಪ್ಪನ ದೇಹವನ್ನು ಮಂಚದ ಮೇಲೆ ಮಲಗಿಸಿದ್ದಾರೆ. ಹರ್ಷನ ತಾಯಿ ಹರ್ಷನನ್ನು ನೋಡಿದ್ದೆ ''ಅಯ್ಯೊ.... ಹರ್ಷ. ಅಪ್ಪ ನಮಗೆ ಇನ್ನ್ಯಾರಪ್ಪ ಗತಿ....? ಎನ್ನುತ್ತಾ ಎದೆಯನ್ನು ಜೋರಾಗಿ ಬಡಿದುಕೊಂಡು ಅಳತೊಡಗಿದಳು. ಒಂದೆರಡು ನಿಮಿಷಗಳು ಹರ್ಷನಿಗೆ ಏನಾಯಿತೊ ಏನೊ ಹಾಗೆ ನಿಂತುಕೊಂಡುಬಿಟ್ಟ. ಅನಂತರ ಅವನಿಗೆ ಗೊತ್ತಿಲ್ಲದೆಯೆ ನಿಧಾನವಾಗಿ ದುಃಖಿಸಿ ದುಃಖಿಸಿ ಅಳುತ್ತ ಅವನ ತಂದೆಯ ದೇಹವನ್ನೆಲ್ಲ ಮುಟ್ಟಿನೊಡಿ ಏನೇನೊ ಒಳಗೊಳಗೆ ಹೇಳಿಕೊಳ್ಳುತ್ತಿದ್ದ.

ಹರ್ಷನ ತಾಯಿ ಅವನ ದುಃಖವನ್ನು ನೋಡಲಾಗದೆ ಗೋಳಾಡ ತೊಡಗಿದಳು. ಅಕ್ಕಪಕ್ಕದಲ್ಲಿ ನಿಂತಿದ್ದವರು ''ಬೆಂಗ್ಳೂರುನಲ್ಲಿ ಅಪಘಾತಗಳು ತುಂಬಾ ಜಾಸ್ತಿ ಆಗಿಬಿಟ್ಟವು. ಬಿಟಿಎಸ್ ಬಸ್ಸು ಆಟೋಗೆ ಹಿಂದಿನಿಂದ ಗುದ್ದಿಬಿಟ್ಟಿತಂತೆ. ಈ ಮಕ್ಕಳ ಗತಿ ಏನಪ್ಪಾ!'' ಎಂದು ಮಾತನಾಡಿಕೊಳ್ಳುತ್ತಿದ್ದರು.

ಹರ್ಷ ಹಾಗೆ ಸುಮಾರು ಹೊತ್ತು ಅತ್ತಮೇಲೆ ಪಕ್ಕದ ಮನೆಯವರು ಹರ್ಷನನ್ನು ಹಿಡಿದುಕೊಂಡು ''ಹರ್ಷ ಈ ಮನೇಗೆ ಇವೊತ್ತಿನಿಂದ ನೀನೇ ದೊಡ್ಡವನು. ಈ ಕ್ಷಣದಿಂದ ಈ ಮನೆ ಜವಾಬ್ದಾರಿ ನಿನ್ನದೆ. ಯಾವ ಯಾವ ಕಾಲಕ್ಕೆ ಏನೇನಾಗಬೇಕೊ ಅದನ್ನ ತಪ್ಪಿಸೊದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ಧೈರ್ಯತಂದುಕೊ ಮಗು... ಧೈರ್ಯತಂದುಕೊ... ಯಾರ್‍ಯಾರಿಗೆ ಹೇಳಿ

ಕಳುಹಿಸಬೇಕೊ ಸ್ವಲ್ಪ ಹೇಳು. ಫೋನ್ ಸಂಖ್ಯೆ ಇದ್ದರೆ ತೆಗೆದುಕೊಂಡು ಬಾ. ಇಲ್ಲ ಅಂದರೆ ವಿಳಾಸ ಹೇಳು. ನಾವು ಯರನ್ನಾದರು ಕಳುಹಿಸ್ತೀವಿ'' ಎಂದರು.

ಹರ್ಷನಿಗೆ ಮೊದಲಬಾರಿಗೆ ಪ್ರಪಂಚವೆಲ್ಲ ಖಾಲಿಖಾಲಿಯಾಗಿ ಕಾಣಿಸಿತು. ಅವನಿಗೆ ತನ್ನ ತಾಯಿ ಮತ್ತೆ ತಂದೆಯ ಸಂಬಂಧಗಳನ್ನು ಬಿಟ್ಟರೆ ಪ್ರಪಂಚದ ಯಾವುದೇ ಸಂಬಂಧಗಳು ಗೊತ್ತಿರಲಿಲ್ಲ. ಹರ್ಷ ತನ್ನ ತಾಯಿಯ ಹತ್ತಿರಕ್ಕೆ ಹೋಗಿ '' ಅಮ್ಮ ಯಾರ್ಯಾರಿಗೆ ತಿಳಿಸಬೇಕಮ್ಮ...?'' ಅವನ ಗಂಟಲಿಂದ ಆ ಮಾತುಗಳು ಹೊರಕ್ಕೆ ಬರದೆ ಒಳಗೆಯೆ ಉಳಿದುಕೊಂಡವು. ಹರ್ಷ ಅಳುತ್ತಾ ಮತ್ತೆ ಕೇಳಿದ. ''ಅಯ್ಯೋ ಕಂದ ನಮಗೆ ಯಾರಿದ್ದಾರಪ್ಪ..? ಅವರ್ನೆಲ್ಲ ಯಾವತ್ತೊ ಬಿಟ್ಟು ಬಂದುಬಿಟ್ಟ ನಿಮ್ಮಪ್ಪ. ನಮ್ಮ ಮನೆಗೂ ನಿಮ್ಮ ತಂದೆ ಮನೆಗೂ ತಿಳಿಸಪ್ಪ'' ಎಂದಳು. ಹರ್ಷ ಕಣ್ಣೀರೊರೆಸಿಕೊಳ್ಳುತ್ತ ಎದ್ದುಬಂದು ವಿಳಾಸಗಳನ್ನು ಪಕ್ಕದ ಮನೆಯವರ ಹತ್ತಿರ ಹೇಳಿದ.

ನಾಲ್ಕು ಹುಡುಗರನ್ನು ಕರೆದು ಹಣಕೊಟ್ಟು ಎರಡು ಊರುಗಳಿಗೂ ಕಳುಹಿಸಿಕೊಟ್ಟರು. ಸಾಯಂಕಾಲದ ಒಳಗಡೆ ಬಂದುಬಿಟ್ಟರೆ ಈ ದಿನಾನೆ ಹೆಣಾನ ಎತ್ತಿಬಿಡಬೇಕು. ಇಲ್ಲ ಅಂದರೆ ನಾಳೆ ಸಾಯಂಕಾಲನೆ. ಇನ್ನು ಒಂದು ಗಂಟೆ. ಒಬ್ಬರು ರಾಮನಗರದಿಂದ ಇನ್ನೊಬ್ಬರು ಮಾಗಡಿಯಿಂದ ಬರಬೇಕು. ಇಬ್ಬರೂ ಹತ್ತಿರಾನೆ ಇದ್ದಾರೆ ಬಂದುಬಿಡ್ತಾರೆ. ಅವರವರೆ ಮಾತನಾಡಿಕೊಳ್ಳುತ್ತಿದ್ದರು. ಹರ್ಷ ಹತ್ತಿರದಲ್ಲಿದ್ದ ಟೆಲಿಫೋನ್ ಬೂಥಿಗೋಗಿ ಅಮರನಾಥ ಮತ್ತು ಸವ್ಯನಿಗೆ ಫೋನ್‌ಮಾಡಿ ತಿಳಿಸಿಬಂದ.

ಸಾಯಂಕಾಲ ಆರುಗಂಟೆಗೆ ಎರಡು ಊರುಗಳಿಂದಲೂ ಜನರು ಬಂದುಬಿಟ್ಟಿದ್ದರು. ಬೆಂಗಳೂರಿನಲ್ಲಿ ರಾತ್ರಿಯಲ್ಲಿ ಹೆಣ ಇಟ್ಟುಕ್ಕೊಳ್ಳುವುದು ಕಷ್ಟ ಎಂದು ವಿದ್ಯುತ್ ಚಿತಾಗಾರಕ್ಕೆ ಕಾರ್ಪೊರೇಷನ್ ವ್ಯಾನಿನಲ್ಲಿ ಕೊಂಡೊಯ್ದು ಹೆಣವನ್ನು ಸುಟ್ಟು ಬೂದಿ ಮಾಡಿಕೊಂಡು ತಂದುಬಿಟ್ಟರು. ಊರುಗಳಿಂದ ಬಂದಿದ್ದ ನೆಂಟರಲ್ಲಿ ಕೆಲವರು, ಮನೆಗೆ ಬಂದು ಉಳಿದುಕೊಂಡರೆ, ಉಳಿದವರು ಹೊರಟುಹೋದರು. ಅಮರನಾಥ ಮತ್ತು ಸವ್ಯ, ಹರ್ಷನಿಗೆ ಸಮಾಧಾನ ಹೇಳಿ ಕೊನೆಗೆ ಹೊರಟು ಹೋದರು.

ಎದುರಿಗೆ ಬರುತ್ತಿದ್ದ ಬಿಟಿಎಸ್ ಬಸ್ಸಿನ ಸ್ಟೇರಿಂಗ್ ಕಟ್ಟಾಗಿದ್ದರಿಂದ ರಭಸವಾಗಿ ಆಟೋಗೆ ಬಂದು ಗುದ್ದುಬಿಟ್ಟಿತಂತೆ. ಅಲ್ಲೇ ಇದ್ದ ಪೊಲೀಸರು ಹರ್ಷನ ತಂದೆಯನ್ನು ಆಸ್ಪತ್ರೆಗೆ ಸಾಗಿಸುತ್ತಿದ್ದಾಗ ದಾರಿಯಲ್ಲೆ ಪ್ರಾಣ ಹೋಗಿಬಿಟ್ಟಿತಂತೆ. ಅನಂತರ ವೈದ್ಯರು ತಪಾಸಣೆ ನಡೆಸಿದ ಮೇಲೆ, ಪೊಲೀಸರು ಹೆಣವನ್ನು ಮನೆಗೆ ತಂದು ಒಪ್ಪಿಸಿ ಹೋದರಂತೆ. ಬಸ್ಸು ಚಾಲಕನನ್ನು ಪೊಲೀಸರು ಬಂದಿಸಿದ್ದಾರಂತೆ. ಏನು ಪ್ರಯೋಜನ

ಸತ್ತೋದವರು ಮತ್ತೆ ಬರುತ್ತಾರೆಯೇ....? ಹೀಗೆ ಅಲ್ಲಿದ್ದವರು ತಮಗೆ ತಿಳಿದಿದ್ದನ್ನು ಮಾತನಾಡಿಕೊಳ್ಳುತ್ತಿದ್ದರು.

ಮೂರನೆ ದಿನ ಸಂಪ್ರದಾಯದಂತೆ ಹರ್ಷನ ಕುಟುಂಬದವರು ಹತ್ತಿರದಲ್ಲಿದ್ದ ಒಂದು ತೋಟಕ್ಕೋಗಿ ತಂದೆಗೆ ಹಾಲು ಸುರಿದು ಮನೆಗೆ ಹಿಂತಿರುಗಿದರು. ಆ ಮನೆಯಲ್ಲಿ ಒಡೆಯನಿಲ್ಲದೆ ಎಲ್ಲರೂ ಚೆದರಿದ ಬೊಂಬೆಗಳಂತೆ ಒಂದೊಂದು ಮೂಲೆಯಲ್ಲಿ ಮಾತು ಕಳೆದುಕೊಂಡು ಕುಳಿತಿದ್ದರು. ಹರ್ಷನ ತಾಯಿಯನ್ನು ಅಕ್ಕಪಕ್ಕದ ಮನೆಯವರು ಎಷ್ಟೇ ಕೇಳಿಕೊಂಡರು ಏನು ತಿನ್ನಲಿಲ್ಲ. ಹರ್ಷನ ತಂಗಿಯರಾದ ಕಮಲ ಮತ್ತು ವಿಮಲ ಅತ್ತು ಅತ್ತು ಬಳಲಿಹೋಗಿದ್ದರು. ಅಕ್ಕಪಕ್ಕದ ಮನೆಗಳವರು ಬಲವಂತ ಮಾಡಿ ಇಬ್ಬರಿಗೂ ಸ್ವಲ್ಪ ತಿನ್ನಿಸಿದ್ದರು. ಹರ್ಷ ಏನು ತಿಂದನೊ.... ಯಾವಾಗ ತಿಂದನೊ ಅವನಿಗೆ ಯಾವುದು ಜ್ಞಾಪಕವಿರಲಿಲ್ಲ.

ನಾಳೆಯಿಂದ ಮನೆ ನಡೆಸುವುದು ಹೇಗೆ...? ಅಪ್ಪಾ ಯಾರ್‍ಯಾರ ಹತ್ತಿರ ಸಾಲ ಮಾಡಿದ್ದಾರೊ... ಏನೊ....? ಅವರೆಲ್ಲ ಮನೆಗೆ ಬಂದರೆ ಏನು ಮಾಡುವುದು....? ಮನೆ ಖರ್ಚು... ತಂಗಿಯರ ಓದು... ಹೀಗೆ ಒಂದೇ ಸಮನೆ ಅವನ ತಲೆಯ ತುಂಬಾ ಯೋಚನೆಗಳು ತುಂಬಿಹೋಗಿದ್ದವು. ಅಪ್ಪನ ತಿಥಿಯಾದ ಮೇಲೆ ಆಟೋ ರಿಪೇರಿ ಮಾಡಿ ನಾನೆ ಓಡಿಸಬೇಕು ಎಂದುಕೊಂಡ. ಆದರೆ ಪೊಲೀಸ್ ಠಾಣೆಯಲ್ಲಿದ್ದ ಆಟೋ ನೋಡಿಬಂದ ಹರ್ಷ ಆಟೋ ಓಡಿಸುವ ಯೋಚನೆಯನ್ನು ಬಿಟ್ಟುಬಿಡಬೇಕಾಯಿತು. ಆ ಆಟೋ ಪೂರ್ಣವಾಗಿ ಜಜ್ಜಿಹೋಗಿದ್ದು ಅದನ್ನು ರಿಪೇರಿ ಮಾಡಲು ಸಾಧ್ಯವಿಲ್ಲದೆ ಹೋಗಿತ್ತು.

ಒಂದೇ ದಿನದಲ್ಲಿ ಅವನ ಆಸೆ ಆಕಾಂಕ್ಷೆಗಳೆಲ್ಲ ನುಚ್ಚುನೂರಾಗಿ ಹೋಗಿದ್ದವು. ಹರ್ಷ ಮನೆಯ ಹೊರಗೆ ಕುಳಿತುಕೊಂಡು ಯೋಚಿಸುತ್ತಿದ್ದಾನೆ. ಹರ್ಷನ ಸಂಬಂಧಿಗಳಲ್ಲಿ ಯಾರೂ ಯಾವ ರೀತಿಯಲ್ಲೂ ಸಹಾಯ ಮಾಡುವ ಸ್ಥಿತಿಯಲ್ಲಿರಲಿಲ್ಲ , ವೈದ್ಯನಾಗುವ ಅವನ ಆಸೆ ಅವನ ತಂದೆಯ ಸಾವಿನ ಜೊತೆಗೆ ಕಮರಿಹೋಯಿತು. ಈಗ ಏನು ಮಾಡಬೇಕು....? ಒಂದೇ ಯೋಚನೆ. ಅಲ್ಲೆ ಕುಳಿತುಕೊಂಡಿದ್ದರೆ ಹುಚ್ಚೆ ಹಿಡಿದುಬಿಡುತ್ತದೊ ಏನೊ....?

ಅಷ್ಟರಲ್ಲಿ ಅದೇ ಬೀದಿಯಲ್ಲಿ ಗದ್ದಲ ಕೇಳಿಸಿಕೊಂಡಿತು. ನೋಡು ನೋಡುತ್ತಿದ್ದಂತೆ ಗದ್ದಲ ಜಾಸ್ತಿಯಾಗಿ ಯಾರೋ ಒಡೆದಾಡುತ್ತಿರುವಂತೆ ಕೇಳಿಸುತ್ತಿದೆ. ಹರ್ಷ ನಿಧಾನವಾಗಿ ಎದ್ದು ಗಲಾಟೆ ನಡೆಯುತ್ತಿರುವ ಕಡೆಗೆ ನಡೆದ. ತಿಳಿದಿರುವವರೆ. " ಏನು ಸಾರ್ ಗಲಾಟೆ...?" ಕೇಳಿದ. "ಏನಪ್ಪ ಹೇಳ್ಳಿ...? ನಾನು ರಿಟೈರ್ಡ್ ಆದಾಗ ಸ್ವಲ್ಪ ಹಣ ಬಂದಿತ್ತು. ಆ ಹಣದಲ್ಲಿ ಮನೆಕಟ್ಟಿ ಬಾಡಿಗೆಗೆ ಕೊಟ್ಟಿದ್ದೆ. ಆ

ಹಣದಲ್ಲೆ ನನಗೆ ಜೀವನ ಆಗ್ಬೇಕು. ನನಗೆ ಯಾರೂ ಇಲ್ಲ. ಇದ್ದ ಒಬ್ಬ ಮಗ ಖಾಯಿಲೆಬಂದು ಸತ್ತೋದ. ಆರು ತಿಂಗಳಾಯಿತು ಬಾಡಿಗೆ ಕೊಟ್ಟಿಲ್ಲ. ಮನೆ ಖಾಲಿ ಮಾಡು ಅಂದ್ರೂ ಮಾಡ್ತಾಯಿಲ್ಲ. ಬಾಡಿಗೆ ಕೇಳಿ ಕೇಳಿ ಸಾಕಾಗೋಯ್ತು. ಇವೊತ್ತು ಹೋಗಿ ಬಾಡಿಗೆ ಕೇಳಿದ್ದಕ್ಕೆ ನನಗೆ ಹೊಡೆದುಬಿಟ್ಟ'' ಎಂದು ಜೋರಾಗಿ ಅಳತೊಡಗಿದರು.

''ಯಾರು... ಅವನು....? ಹರ್ಷ ಕೇಳಿದ. ''ಯಾರೊ ಒಳ್ಳೆಯವನು ಅಂತ ಮನೆ ಕೊಟ್ಟೆ. ಅವನು ಪುಡಾರಿ ಅಂತ ಗೊತ್ತಿರಲಿಲ್ಲ. ಅಲ್ಲಿ ನೋಡಿ ಮನೆ ಮೇಲೆ ನಿಂತಿದ್ದಾನೆ. ಮನೆ ಖಾಲಿ ಮಾಡಬೇಕಾದರೆ ಐವತ್ತು ಸಾವಿರ ಕೊಡಬೇಕಂತೆ. ನಾನು ಎಲ್ಲಿಂದ ತರಲಿ...?'' ಮುದುಕಪ್ಪ ಜೋರಾಗಿ ಅಳುತ್ತಾ ಅವನ ಕಡೆಗೆ ಕೈ ತೋರಿಸಿದರು. ಮುದುಕಪ್ಪನನ್ನು ನೋಡಿ ಹರ್ಷನಿಗೆ ಏನಾಯಿತೊ ಏನೊ ''ಯೊ ಬಾರಯ್ಯ ಇಲ್ಲಿ'' ಒಂದು ಕೂಗಾಕಿದ. ಮನೆ ಮೇಲೆ ನಿಂತಿದ್ದವನು ''ಯಾಕೊ ಅವನಿಗಾಗಿದೆ. ನಿನಗೂ ಬೇಕೇನು...? ನನ್ನ ಮಗನೆ ಎಂದು ಕೇಳುತ್ತಾ ಕೆಳಕ್ಕೆ ಇಳಿದುಬಂದ. ಹರ್ಷ ವೇಗವಾಗಿ ಅವನ ಹತ್ತಿರಕ್ಕೆ ದಾವಿಸಿಕೋಗಿ ಒಂದು ಕ್ಷಣವು ಯೋಚಿಸದೆ ಅವನ ಮುಖಕ್ಕೆ ನಾಲ್ಕಾರು ಗುದ್ದಿದ. ಒಂದು ಉದ್ದವಾದ ನೀರಿನ ಪೈಪನ್ನು ತೆಗೆದು ಸುತ್ತಿಕೊಂಡು ಮನಸಾ ಇಚ್ಛಾ ಬಾರಿಸತೊಡಗಿದ. ಅಚಾನಕ್ಕಾಗಿ ನಡೆದುಹೋದ ಏಟುಗಳ ಪ್ರಹಾರದಿಂದ ಬಾಡಿಗೆ ಮನೆಯಲ್ಲಿದ್ದವನು ನೋಡಲು ಗಟ್ಟಿಮುಟ್ಟಗಿದ್ದರು ''ಅಯ್ಯೊಯ್ಯೊ ಕಾಪಾಡ್ರಪ್ಪೊ... ಕಾಪಾಡ್ರಪ್ಪೊ'' ಎಂದು ಕಿರುಚಾಡುತ್ತ ನೆಲದಲ್ಲೆಲ್ಲ ಉರುಳಾಡತೊಡಗಿದ.

''ನನ್ನ ಮಗನೆ ಎಲ್ಲಿಂದಾನೊ ಬೆಂಗ್ಳೂರಿಗೆ ಬಂದು ನಮ್ಮವರ್ನೆ ಒಡಿತಿಯಾ....? ಅದು ವಯಸ್ಸಾದವರ ಮೇಲೆ ಕೈ ಮಾಡ್ತೀಯಾ....?'' ಹರ್ಷನು ಮೈಮೇಲೆ ದೇವರು ಬಂದಂತೆ ಬಾರಿಸತೊಡಗಿದ. ಅಷ್ಟರಲ್ಲಿ ಸಾಕಷ್ಟು ಜನರು ಓಡಿಬಂದು ಹರ್ಷನನ್ನು ಹಿಡಿದುಕೊಂಡರು.

''ರೀ ಬಿಡ್ರಿ ನಿಮ್ಮಂತವರಿಂದಾನೆ ಈ ನನ್ನ ಮಕ್ಕಳು ಬೆಂಗಳೂರಿನಲ್ಲಿ ಹೀಗಾಡುತ್ತಿರುವುದು'' ಜೋರಾಗಿ ಗದರಿದ. ಹರ್ಷನನ್ನು ಹಿಡಿದು ಕೊಂಡಿದ್ದವರು ಬಿಟ್ಟಿ ಬಿಟ್ಟರು. ಮನೆಯ ಒಳಕ್ಕೆ ನುಗ್ಗಿದ ಹರ್ಷ ಕೈಗೆ ಸಿಕ್ಕಿದ ಸಾಮಾನುಗಳನ್ನೆಲ್ಲ ಹೊರಕ್ಕೆ ಒಂದೊಂದಾಗಿ ಎಸೆಯತೊಡಗಿದ. ಬಾಡಿಗೆ ಮನೆಯಲ್ಲಿದ್ದವನಿಗೆ ಏನು ಮಾಡಬೇಕೊ ಅರ್ಥವಾಗದೆ ಮನೆಯ ಒಳಗಡೆಗೆ ಬಂದು ''ನೋಡು ಇಲ್ಲಿಂದ ಹೊರಟುಹೋಗು ಇಲ್ಲ ಅಂದರೆ ಪೊಲೀಸರನ್ನು ಕರೆದುಕೊಂಡು ಬರ್ತೀನಿ'' ಎಂದಿದ್ದೆ ಹರ್ಷ ಓಡಿಹೋಗಿ ಅವನ ಜುಟ್ಟು ಹಿಡಿದುಕೊಂಡು ಅಲ್ಲೆ ಇದ್ದ ಒಂದು ಮಚ್ಚನ್ನು ಕೈಗೆ

ತೆಗೆದುಕೊಂಡು, ''ಬಾ ಇಲ್ಲಿ. ಎಲ್ಲಾ ಸಾಮಾನು ನೀನೆ ತೆಗೆದು ಹೊರಗಡೆ ಇಡು. ಇಲ್ಲ ಅಂದರೆ ಸಾಯಿಸಿಬಿಡ್ತೀನಿ'' ಮಚ್ಚನ್ನು ಗಾಳಿಯಲ್ಲಿ ಒಮ್ಮೆ ಬೀಸಿದ. ಅವನೆ ಮನೆಯ ಒಳಗಿದ್ದ ಸಾಮಾನುಗಳನ್ನೆಲ್ಲ ಎತ್ತಿಕೊಂಡೋಗಿ ಹೊರಗಿಟ್ಟ. ಆ ದಿನ ಅವನ ಮನೆಯಲ್ಲಿ ಹೆಂಡ್ತಿ, ಮಕ್ಕಳು ಯಾರೂ ಇರಲಿಲ್ಲ. ಹೊರಗೆ ನೋಡುತ್ತಿದ್ದವರೆಲ್ಲ ''ಈ ನನ್ನ ಮಗನಿಗೆ ತುಂಬಾ ಅಹಂಕಾರ ಇವನಿಂದ ಈ ಬೀದಿನೆ ಹಾಳಾಗೊಯ್ತು. ಹರ್ಷ ಒಳ್ಳೇದು ಮಾಡ್ತಾ ಇದ್ದಾನೆ. ಪೊಲೀಸರು ಬಂದರೆ ನಾವೆಲ್ಲ ಹರ್ಷನಿಗೆ ಸಹಾಯ ಮಾಡಬೇಕು'' ಎಂದು ಮಾತನಾಡಿ ಕೊಳ್ಳುತ್ತಿದ್ದರು.

ಸಾಮಾನುಗಳನ್ನೆಲ್ಲ ಹೊರಗೆ ಇಟ್ಟಮೇಲೆ ಮನೆಗೆ ಬೀಗ ಹಾಕುವಂತೆ ಹರ್ಷ ಮುದಕಪ್ಪನಿಗೆ ಹೇಳಿದ. ಮುದುಕಪ್ಪ ಓಡಿಹೋಗಿ ಬೀಗ ತೆಗೆದುಕೊಂಡು ಬಂದು ಬಾಗಿಲುಮುಚ್ಚಿ ಬೀಗ ಹಾಕಿ ಬೀಗದ ಕೈಯನ್ನು ಹರ್ಷನ ಕೈಗೆ ಕೊಡುತ್ತಾ ''ಇದು ನಿನ್ನ ಹತ್ತಿರಾನೆ ಇಟ್ಟುಕೊಳ್ಳಪ್ಪ ನಾನು ಆಮೇಲೆ ತೆಗೆದುಕೊಳ್ತೀನಿ'' ಎಂದ ಅಷ್ಟರಲ್ಲಿ ಇನ್ನಷ್ಟು ಹುಡುಗರು ಬಂದು ಹರ್ಷನ ಹತ್ತಿರ ನಿಂತುಕೊಂಡರು. ಕೆಲವು ಹುಡುಗರು ಒಂದು ಮಿನಿ ಲಾರಿ ತಂದು ಸಾಮಾನುಗಳನ್ನೆಲ್ಲ ಅದರಲ್ಲಿ ತುಂಬಿಸಿಕೊಂಡು ಜೊತೆಗೆ ಅವನನ್ನು ಕೂರಿಸಿಕೊಂಡು ದೂರದಲ್ಲಿ ಬಿಟ್ಟುಬರಲು ಹೊರಟುಹೋದರು. ಹರ್ಷ ಮತ್ತು ಮುದುಕಪ್ಪ ಅಲ್ಲೆ ನಿಂತಿದ್ದರು.

ಹರ್ಷನಿಗೆ ಮೊದಲ ಬಾರಿಗೆ ಮನಸ್ಸಿನಲ್ಲಿ ತುಸು ಅಳುಕು ಮೂಡಿತು. ನನಗೇಕೆ ಇದೆಲ್ಲ...? ಪೊಲೀಸರು ಬಂದರೆ ಏನು ಮಾಡುವುದು....? ಅವನ ಮನಸ್ಸಿನಲ್ಲಿ ಏನೇನೊ ಯೋಚನೆಗಳು ಓಡತೊಡಗಿದವು. ಅಷ್ಟರಲ್ಲಿ ಯಾರೊ ಒಬ್ಬರು ಹತ್ತಿರಕ್ಕೆ ನಡೆದು ಬಂದು '' ಇಲ್ಲಿ ಯಾವುದಾದರು ಬಾಡಿಗೆ ಮನೆ ಖಾಲಿ ಇದಿಯಾ'', ಕೇಳಿದರು.

''ಈ ಮನೆ ಖಾಲಿ ಇದೆ ನೋಡಿ. ಅಜ್ಜ ಹೋಗಿ ಮನೆ ತೋರಿಸಿ'' ಎಂದಿದ್ದೆ ಮುದುಕಪ್ಪ ಹರ್ಷನ ಕೈಯಿಂದ ಬೀಗದ ಕೈ ತೆಗೆದುಕೊಂಡು ಬಾಗಿಲು ತೆಗೆದು ಮನೆ ಒಳಗೆಲ್ಲ ತೋರಿಸಿದರು. ಹರ್ಷ ಮನೆಯ ಹೊರಗಡೆಯೆ ನಿಂತುಕೊಂಡಿದ್ದ. ಮನೆ ನೋಡಿದವರು ಜೇಬಿನಿಂದ ಐದು ಸಾವರಿ ಅಡ್ವಾನ್ಸ್ ತೆಗೆದುಕೊಟ್ಟು '' ಸಾಯಂಕಾಲವೆ ಮನೆಗೆ ಬಂದು ಬಿಡ್ತೀವಿ. ಉಳಿದ ಅಡ್ವಾನ್ಸ್ ಸಾಯಂಕಾಲ ಮನೆಗೆ ಬಂದಾಗ ಕೊಡ್ತೀನಿ'' ಎಂದೇಳಿ ಬೀಗದ ಕೈಯಿ ತೆಗೆದುಕೊಂಡು ಹೊರಟು ಹೋದರು.

ಮುದುಕಪ್ಪ ಆ ಐದು ಸಾವಿರ ರೂಪಾಯಿಗಳ ಕಟ್ಟನ್ನು ಹರ್ಷನ ಕೈಗೆ

ಕೊಡಲೋದರು. ಹರ್ಷ ನನಗೆ ಬೇಡ ಎಂದು ಎಷ್ಟೆ ಕೊಸರಾಡಿದರು ಮುದುಕಪ್ಪ ಬಿಡಲಿಲ್ಲ. "ನೋಡಪ್ಪ ಹರ್ಷ ನೀನು ಇನ್ನು ಚಿಕ್ಕವನು. ನಿನಗೆ ಜೀವನದ ಬಗ್ಗೆ ಏನು ಗೊತ್ತಿಲ್ಲ. ಈ ಪ್ರಪಂಚದಲ್ಲಿ ಬದುಕೊದು ಕಲಿತುಕೊಳ್ಳಬೇಕು. ಹಣಾನೆ ಜೀವನ ಅಲ್ಲದೆ ಇದ್ದರೂ ಮನುಷ್ಯನಿಗೆ ಹಣ ಬೇಕು. ಹಣ ತೆಗೆದುಕೊಳ್ಳೊದು ಇಷ್ಟ ಇಲ್ಲ ಅಂದರೆ ಸಾಲ ಅಂತ ತೆಗೆದುಕೊಂಡು ನಿನಗೆ ಹಣ ಬಂದಾಗ ಕೊಟ್ಟುಬಿಡು" ಮುಕುಕಪ್ಪನ ಮಾತುಗಳಿಗೆ ಮರುಳಾದ ಹರ್ಷ ಹಣವನ್ನು ಕೈಗೆ ತೆಗೆದುಕೊಂಡ. ಆದರೆ ಅವನ ಮನಸ್ಸಿನಲ್ಲಿ ಮತ್ತೆ ಏನೇನೊ ಯೋಚನೆಗಳು ಏಳತೊಡಗಿದವು.

* * *

ಮೊದಲನೆ ವರ್ಷದ ವೈದ್ಯಕೀಯ ಪರೀಕ್ಷೆಗಳು ಹತ್ತಿರಬರುತ್ತಿದ್ದಂತೆ ಎಲ್ಲರೂ ಅನಾಟಮಿ, ಫಿಜಿಯಾಲಜಿ ಮತ್ತು ಬಯೊಕೆಮಿಸ್ಟ್ರಿ ಪಾಠಗಳನ್ನು ಹಗಲು ರಾತ್ರಿ ಎನ್ನದೆ ಓದಿಕೊಳ್ಳುತ್ತಿದ್ದರು. ಅಮರನಾಥ ಮತ್ತು ಸವ್ಯ ಒಂದೆರಡು ವಾರಗಳು ಹರ್ಷನ ತಂದೆಯ ಸಾವಿನಿಂದ ಓದಿನ ಮೇಲೆ ಹಿಡಿತವನ್ನು ಕಳೆದುಕೊಂಡರು. ಅನಂತರ ಓದುವುದರಲ್ಲಿ ಮತ್ತೆ ಏಕಾಗ್ರತೆಯನ್ನು ಗಳಿಸಿಕೊಂಡಿದ್ದರು. ಹರ್ಷ ಕಾಲೇಜಿಗೆ ಬರುವುದನ್ನು ಬಿಟ್ಟುಬಿಟ್ಟದ್ದರಿಂದ ಅಮರನಾಥ ಮತ್ತು ಸವ್ಯ ಕ್ಯಾಂಪಸ್‌ನಲ್ಲಿ ಇಬ್ಬರೆ ಅಲೆಯುತ್ತಿದ್ದರು.

ಕೃತಿಕಾ, ರೂಪ ಮತ್ತು ಅನು ಮೊದಲನೆ ವರ್ಷವೆ ತರಗತಿಗಳಿಗೆ ಚಕ್ಕರ್ ಹೊಡೆದು ಮಜಾ ಉಡಾಯಿಸಿದ್ದರಿಂದ ಸ್ವಲ್ಪ ದಿಗಿಲುಗೊಂಡಿದ್ದರು. ಆದರೂ ತಾವು ಕಾನ್ವೆಂಟ್‌ನಲ್ಲಿ ಓದಿದ್ದರಿಂದ ಬಾರಿ ಬ್ರಿಲಿಯಂಟ್ಸ್ ಎಂದು, ತಮಗೆ ಭಯಂಕರ ಗ್ರಾಸ್ಪಿಂಗ್ ಪವರ್ ಇದೆಯೆಂದು ಇಂಗ್ಲೀಷ್ ಗೊತ್ತಿದ್ದರೆ ಪ್ರಪಂಚದಲ್ಲಿ ಇನ್ನೇನಿದೆ....? ತಾವು ಫೇಲಾಗಲು ಸಾಧ್ಯವೆ ಇಲ್ಲ . ಸರಿಯಾಗಿ ಒಂದು ತಿಂಗಳು ಕುಳಿತುಕೊಂಡು ಬಿಟ್ಟರೆ ಸಾಕು ಪಾಸಾಗಿ ಬಿಡುತ್ತೇವೆಂದು ಮಾತನಾಡಿಕೊಳ್ಳುತ್ತಿದ್ದರು.

"ಬರೊ ಸೋಮವಾರದಿಂದ ಎಲ್ಲಿಗೂ ಹೋಗಬಾರದು. ಮನೆಯಲ್ಲೆ ಕುಳಿತುಕೊಂಡು ಓದಬೇಕು. ಪ್ರಾಕ್ಟಿಕಲ್ ಕ್ಲಾಸಸ್ ಬೇರೆ ಇರುತ್ತಲ್ಲ....?" ರೂಪ ಹೇಳಿದಳು. " ಪ್ರಾಕ್ಟಿಕಲ್ ಕ್ಲಾಸಸ್ ಅಟೆಂಡ್ ಮಾಡದೆ ಹೋದರೆ ಏನಂತೆ...." ಕೃತಿಕಾ ಪ್ರಶ್ನೆ " ಮತ್ತೆ ಪ್ರಾಕ್ಟಿಕಲ್ಸ್‌ನಲ್ಲಿ ಪ್ರೊಫೆಸರ್ಸ್ ಕೇಳಿದರೆ ಏನು ಎಕ್ಸ್‌ಪ್ಲೇನ್ ಮಾಡ್ತೀಯಾ...?" ಅನು ಕೇಳಿದಳು. "ಹತ್ತು ಲಕ್ಷ ಕೊಟ್ಟರೆ ಸೀಟು ಕೊಡೊರು ಇನ್ನೈದು ಲಕ್ಷ ಕೊಟ್ಟರೆ ಪಾಸ್ ಮಾಡೊದಿಲ್ಲವಾ" ಕೃತಿಕಾ ಪ್ರಶ್ನೆ.

"ಇವಳೇನೆ ಹೀಗೆಳ್ತಾಳೆ....? ಈಗ ಮೊದಲನೆ ವರ್ಷ ಪಾಸಾಗೊದು ಹೇಳು.

ಆ ಮೇಲೆ ಎಲ್ಲಾ ಸರಿಹೋಗುತ್ತೆ...'' ರೂಪ ಹೇಳಿದಳು. ''ನಮ್ಮ ಕ್ಲಾಸಿನಲ್ಲಿ ನಾವೆ ಫೇಲಾಗಿಬಿಟ್ಟರೆ, ಇನ್ನು ಪಾಸಾಗುವುದು ಯಾರು...?'' ಕೃತಿಕಾ ಹೆಮ್ಮೆಯಿಂದ ಹೇಳಿಕೊಂಡಳು. ''ಕಾನ್‌ಫಿಡೆನ್ಸ್ ಅಂದ್ರೆ ಇದು'' ಅನು ಎದ್ದು ನಿಂತು ಎರಡು ಭುಜಗಳನ್ನು ಕುಣಿಸಿದಳು.

''ಅದೆಲ್ಲಾ ಹೋಗಲಿ ಇವೊತ್ತು ತುಂಬಾ ಓದಿ ಬಿಟ್ಟಿದ್ದೀವಿ. ಒಂದೊಂದು ಪಫ್ ಎಳೆಯಿರಿ'' ಎಂದು ಅನು ಡಬ್ಬಿಯಲ್ಲಿ ಅಡಗಿಸಿಟ್ಟಿದ್ದ ಸಿಗರೇಟು ಒಂದನ್ನು ತೆಗೆದುಕೊಂಡು ಬೆಂಕಿ ಹೊತ್ತಿಸಿ ಒಂದು ದಮ್ಮು ಎಳೆದಳು.

''ನೀನು ಯಾವ ಗಂಡಸಿಗೂ ಕಡಿಮೆ ಇಲ್ಲ ಕಣೆ. ಅವನು ರಿಕಿ ರೊನಾಲ್ಡ್ ಕೂಡ ಇಷ್ಟು ಸ್ಟೈಲಾಗಿ ಸಿಗರೇಟ್ ಸೇದುವುದಿಲ್ಲ. ಏಯ್ ನಿಮಗೆ ಇನ್ನೊಂದು ವಿಷಯ ಗೊತ್ತ....? ಹರ್ಷನ ತಂದೆ ಆಕ್ಸಿಡೆಂಟ್‌ನಲ್ಲಿ ಸತ್ತೋದ್ರನಂತೆ '' ರೂಪ ಹೇಳಿದಳು. '' ಹೌದಾ ! ಅದಕ್ಕೆ ಅವನು ಇನ್ನು ಕಾಲೇಜಿಗೆ ಬರ್‍ತಾ ಇಲ್ಲ. ಅವನಪ್ಪ ಆಟೋ ಓಡಿಸ್ತಾ ಇದ್ದರಂತೆ ಪಾಪ ! ಪೂರ್ ಪೆಲೊ... ಅಮರನಾಥ, ಸವ್ಯ ಇಬ್ಬರೂ ತುಂಬಾ ಅಪ್‌ಸೆಟ್ ಆಗಿಬಿಟ್ಟಿದ್ದಾರೆ.

ಹೀಗೆ ಮಾತನಾಡುತ್ತಲೆ ಮೂವರು ಒಂದೇ ಸಿಗರೇಟನ್ನು ಬದಲಾಯಿಸಿ ಬದಲಾಯಿಸಿ ಸೇದಿದರು. ''ನಿಜವಾಗಿ ಸಿಗರೇಟ್ ಸೇದೊದರಲ್ಲಿ ಯಾವುದೊ ಒಂದು ಮಜಾ ಇದೆ ಕಣೆ. ಆದರೆ ಚೈನಾ ಸ್ಮೋಕರ್ಸ್ ಆಗಬಾರದು. ಆರೋಗ್ಯಕ್ಕೆ ಒಳ್ಳೆಯದಲ್ಲ. ಯಾವಾಗಲಾದರು ಒಂದೊಂದು ದಿನ ಸೇದಬೇಕು. ಡ್ರಿಂಕ್ಸ್‌ಕೂಡ ಅಷ್ಟೇ.'' ಅನು ಹೊಗೆ ಬಿಡುತ್ತ ಹೇಳಿದಳು.

ಕೃತಿಕಾ ಮತ್ತು ರೂಪ ಇಬ್ಬರೂ ಅವಳನ್ನೇ ನೋಡುತ್ತಿದ್ದರು. ''ನೀನು ಪೂರ್ವಜನ್ಮದಲ್ಲಿ ಗಂಡಸಾಗಿ ಹುಟ್ಟಿರಬೇಕು. ಇಲ್ಲ ಅಂದರೆ ನಿನ್ನಲ್ಲಿ ಒಂದೆರಡು ಟೆಸ್ಟಿಟ್ರೋಮ್ ಜೀನ್ಸ್ ಸೇರಿಕೊಂಡಿರಬೇಕು'' ರೂಪ ಹೇಳಿದಳು. ''ನೀವೇನು ಕಡಿಮೆ ಇಲ್ಲ ಬಿಡ್ರೆ. ನಾನು ನಿಮಗಿಂತ ಉದ್ದವಾಗಿ ಮೈಕೈ ತುಂಬಿಕೊಂಡಿದ್ದೀನಿ ಅಷ್ಟೆ. ನಿಮ್ಮ ತರಹ ಡಯಟ್ ಕಂಟ್ರೋಲ್ ಮಾಡದೆ ತಿಂದು ತಿಂದು ಹಾಗಿದ್ದೀನಿ. ಜ್ಯೂಸ್ ಫಾಂಟಾ ಕೋಕೊ ಕುಡಿದುಕೊಂಡಿದ್ದರೆ ಹೀಗೇನೆ. ನಿಮ್ ಲಿಪ್ಸ್ ನೋಡಿದರೆ ಯಾರಿಗಾದರು ಕಿಸ್ ಮಾಡೊದಕ್ಕೆ ಮೂಡ್ ಬರುತ್ತಾ.... ಹೋಗಿ ಕನ್ನಡಿಯಲ್ಲಿ ನೋಡಿಕೋಳ್ಳಿ...... ನನ್ನನ್ನ ನೋಡಿ....?'' ಎನ್ನುತ್ತ ನಾಲಿಗೆಯಿಂದ ತುಟಿಗಳನ್ನು ಸವರಿಕೊಂಡಳು.

''ಏನೇ ನೀನು ಹೇಳ್ತಾ ಇರೂದು....? ನಮ್ಮ ತುಟಿಗಳಿಗೆ ಏನಾಗಿದೆ...?''

ಇಬ್ಬರೂ ಒಮ್ಮೆಲೆ ಹೌಹಾರಿದರು. ''ಏನು ಏನಾಗಬೇಕು...? ತುಟಿ ತೊಂಡೆಹಣ್ಣಿನಂತಿರಬೇಕು...? ಕೆನ್ನೆ ಆಪಲ್ ಹಣ್ಣಿನಂತಿರಬೇಕು...? ಮೂಗು ಸಂಪಿಗೆ ಹೂವಿನಂತಿರಬೇಕು ಅಂತಾರೆ. ನಿಮಗೆ ಹಾಗೆ ಯಾವುದು ಇಲ್ಲ. ಸರಿಯಾಗಿ ತಿಂದರೆ ತಾನೆ....? ಹುಡುಗಿಯರಿಗೆ ಎದೆಗಳು ಎದ್ದು ಕಾಣಿಸಬೇಕು. ಇಲ್ಲ ಅಂದರೆ ಯಾವ ಹುಡುಗಾನು ನೋಡೊದಿಲ್ಲ.''

''ಲೇ ಇವಳು ಸಿಗರೇಟು ಸೇದಿ ಏನೇನೊ ಮಾತಾಡ್ತಾಳೆ. ಇವೊತ್ತು ಇವಳ ಜೊತೆ ಮಾತನಾಡೊದು ಬೇಡ. ನಡಿಯೆ ಮಲಗಿಕೊಳ್ಳೊಣ'' ರೂಪ ಮುನಿಸಿಕೊಂಡು ಎದ್ದುನಿಂತಳು. ''ನಿಮ್ಮನ್ನ ಮಲಗೊದಕ್ಕೆ ಬಿಡಬೇಕಲ್ಲ ನಾನು. ಇವೊತ್ತು ನಮ್ಮ ಕ್ಲಾಸಿನಲ್ಲಿ ಟಾಪ್ಸ್ ಮೇಲೆ ಆರೋಸ್ ಅಂತ ಹಾಕಿಕೊಂಡಿದ್ದಳು ನೋಡಿದರಾ....?'' ಅನು ಜೋರಾಗಿ ನಕ್ಕಳು. ''ಹೌದಾ ! ನಾವು ನೋಡಲಿಲ್ಲವಲ್ಲ!'' ಎಂದರು ಇಬ್ಬರು.

''ಹುಡುಗರದು ಏನೂ ತಪ್ಪಿಲ್ಲ. ಹುಡುಗಿಯರಿಂದಾನೆ ಎಲ್ಲಾ ರಾಮಾಯಣ.... ಮಹಾಭಾರತ '' ಎಂದಳು ಅನು. ''ಹೌದು! ನೀನ್ಯಾಕೆ ಆ ರಿಕಿ ಜೊತೆ ಮಾತನಾಡ್ತೀಯಾ ಕ್ಯಾಂಪಸ್‌ನಲ್ಲಿ. ಅವನ ಜೊತೆ ಮಾತನಾಡೊದಕ್ಕೆ ಎಲ್ಲರೂ ಎದುರಿಕೊಳ್ತಾರೆ ನೀನು ಇನ್ನು ಮೇಲೆ ಅವನ ಜೊತೆ ಮಾತನಾಡಿದರೆ, ನಾವು ನಿನ್ನ ಜೊತೆ ಮಾತನಾಡುವುದಿಲ್ಲ'' ರೂಪ ಹೇಳಿದಳು. ''ಮಾತನಾಡೊದರಲ್ಲಿ ಏನಿದೆ ಬಿಡೆ. ನನ್ನನ್ನ ಯಾರೂ ಏನೂ ಮಾಡೊದಕ್ಕೆ ಆಗೊದಿಲ್ಲ. ನಾನು ಲೈಕ್ ಮಾಡಿದರೆ ಮಾತ್ರ ಸಾಧ್ಯ...? ಯಾವ ಹುಡುಗ್ನು ನನ್ನನ್ನ ಟಚ್ ಮಾಡೊದಕ್ಕೆ ಬಿಡೊದಿಲ್ಲ. ನನ್ನನ್ನ ಮದುವೆ ಆಗೋನೆ ನನ್ನನ್ನ ಟಚ್ ಮಾಡಬೇಕು. ಕಾಲೇಜ್‌ನಲ್ಲಿ ಒಮ್ಮೋಪ್ಪು ದಿನ ಹುಡುಗರ ಜೊತೆ ಓಡಾಡ್ತೀವಿ.... ಮಾತನಾಡ್ತೀವಿ... ನಗಾಡ್ತೀವಿ ಅಷ್ಟೆ. ಮದುವೆಯಾದ ಮೇಲೆ ಹುಡುಗರ ಜೊತೆ ಮಾತನಾಡೊದಕ್ಕೆ ಎಲ್ಲಿ ಚಾನ್ಸ್ ಸಿಕ್ಕುತ್ತೆ....?'' ನೀವು ಬೇಕಾದರೆ ಯಾರನ್ನಾದರು ಲವ್ ಮಾಡಿ ನಾನು ಹೆಲ್ಪ್ ಮಾಡ್ತೀನಿ'' ಅನು ಹೇಳಿದಳು.

''ಈ ವರ್ಜಿನ್ ಗಿರ್ಜಿನ್ ಅಂತಾರಲ್ಲ ಅದರ ಬಗ್ಗೆ ನೀನು ಏನಂತೀಯಾ...?'' ರೂಪ ಪ್ರಶ್ನಿಸಿದಳು. ''ಅದು ಅವರವರ ಇಷ್ಟ . ಇಂಡಿಯಾ ಇನ್ನೂ ಯುರೋಪ್ ಆಗಿಲ್ಲವಲ್ಲ...?'' ಅನು ಉತ್ತರಿಸಿದಳು. '' ಅಲ್ಲಕಣೆ ಈ ಭುವನಸುಂದರಿಯರು... ವಿಶ್ವ ಸುಂದರಿಯರು ಗೆದ್ದಾಗ ನಾನು ಸ್ಲಮ್ ಮಕ್ಕಳಿಗಾಗಿ ದುಡಿತೀನಿ... ಮಹಿಳೆಯರಿಗಾಗಿ ದುಡಿತೀನಿ.... ಅಂಗವಿಕಲರಿಗಾಗಿ ದುಡಿತೀನಿ ಅಂತ ಭಾಷಣ

ಕೊಡ್ತಾರೆ. ಒಂದು ವರ್ಷ ಪ್ರಪಂಚ ಸುತ್ತಿದ ಮೇಲೆ ಸಿನಿಮಾ ಸೇರಿಕೊಂಡುಬಿಡ್ತಾರಲ್ಲ.... ಯಾಕೆ....? ಇವರಿಗೆ ಹಣ ಏನು ಕಡಿಮೇನಾ....? ನಮ್ಮ ಸಂಸ್ಕೃತಿ ಉನ್ನತವಾದದ್ದು, ಪುರಾತನವಾದದ್ದು, ಅಂತ ಹೇಳ್ತಾ ಎಷ್ಟು ಲಕ್ಷ ಹಣ ಕೊಡ್ತಾರೊ ಅಷ್ಟು ಅಲಕ್ಷ್ಯವಾಗಿ ಬಟ್ಟೆ ತೊಡ್ತಾರಲ್ಲ...? ಇವರೆಲ್ಲ ನಮ್ಮ ದೇಶದ ಸಾಂಸ್ಕೃತಿಕ ರಾಯಬಾರಿಗಳು....'' ಅನು ಹೇಳುತ್ತಾ ಹೋಗುತ್ತಿದ್ದಳು. ''ಇವಳಿಗೆ ಏನಾಯಿತೆ ಇವೊತ್ತು....? ಏನೇನೊ ಮಾತಾಡ್ತಾಳೆ... ಕೃತಿಕಾ, ರೂಪ ಇಬ್ಬರೂ ಆಶ್ಚರ್ಯವಾಗಿ ಅವಳ ಕಡೆಗೆ ನೋಡುತ್ತಿದ್ದರು.

''ನೀನು ಪಾಲಿಟೆಕ್ಸ್‌ಗೆ ಯಾಕೆ ಸೇರಿಕೊಳ್ಳಬಾರದು.....? ಹೋಗಿ ಹೋಗಿ ವೈದ್ಯಕೀಯ ಸೇರಿಕೊಂಡಿದ್ದಿಯಲ್ಲ...?'' ರೂಪ ಪ್ರಶ್ನಿಸಿದಳು. ''ನಮ್ಮ ತಂದೆ ತಾಯಿ ಬಿಡಬೇಕಲ್ಲ ....'' ಹೋಗಲಿ ನಡೆಯಿರಿ ತುಂಬಾ ಹೊತ್ತಾಗೋಗಿದೆ. ಊಟ ಮಾಡೋಣ'' ಎಲ್ಲರೂ ಎದ್ದು ಡೈನಿಂಗ್ ಟೇಬಲ್ ಕಡೆಗೆ ನಡೆದರು. ಅಡಿಗೆ ಮಾಡುವ ಹೆಂಗಸು ಆಗಲೇ ಅಡಿಗೆ ಮಾಡಿಟ್ಟು ಹೊರಟುಹೋಗಿದ್ದಳು.

* * *

ಕಾಲೇಜ್ ಆವರಣ. ಮೊದಲನೇ ವರ್ಷದ ವಿದ್ಯಾರ್ಥಿಗಳಿಗೆ ಅನಾಟಮಿ ಪ್ರಾಕ್ಟಿಕಲ್ಸ್ ಪರೀಕ್ಷೆಗಳು ನಡೆಯುತ್ತಿವೆ. ಹೊರಗಿನ ವಿಶ್ವವಿದ್ಯಾಲಯದಿಂದ ಬಂದಿರುವ ಪ್ರೊಫೆಸರುಗಳು ವಿದ್ಯಾರ್ಥಿಗಳನ್ನು ಒಬ್ಬೊಬ್ಬರಾಗಿ ಕರೆದು ಮನುಷ್ಯನ ಅಂಗಾಂಗಗಳು ಮತ್ತು ಅವುಗಳ ಪ್ರಕ್ರಿಯೆಗಳ ಬಗ್ಗೆ ಪ್ರಶ್ನಿಸುತ್ತಿದ್ದಾರೆ. ವಿಶಾಲವಾದ ಟೇಬಲಿನ ಮೇಲೆ ಮನುಷ್ಯನ ಎಲ್ಲಾ ಅಂಗಾಂಗಗಳನ್ನು ಮಾಂಸದ ಅಂಗಡಿಯಲ್ಲಟ್ಟಂತೆ ಇಟ್ಟಿದ್ದಾರೆ ಕತ್ತರಿಸಿದ ತಲೆ, ಮಿದುಳು, ಮೂಳೆ, ಕೀಲು, ಕೈಕಾಲು ನರಗಳು ಸ್ನಾಯುಗಳು ಹೃದಯ, ಪುಟ್ಟ ಕಣ್ಣು, ಮೂಗು ಕಿವಿ ನಾಲಿಗೆ ಹೀಗೆ ಪ್ರತಿಯೊಂದು ಭಾಗವನ್ನು ಇಟ್ಟಿದ್ದಾರೆ. ಒಬ್ಬ ವಿದ್ಯಾರ್ಥಿ ಹೊರಕ್ಕೆ ಬರುತ್ತಿದ್ದಂತೆ ಹೊರಗಿರುವವರು ಅವರನ್ನು ಸುತ್ತುವರಿದು ಏನೇನು ಕೇಳಿದರು ಎಂದು ತಿಳಿದುಕೊಳ್ಳುತ್ತಿದ್ದಾರೆ. ಬಂದವರೆಲ್ಲ ಪರವಾಗಿಲ್ಲ ನಲವತ್ತು ಐವತ್ತು ಮಾರ್ಕ್ಸ್ ಬರುತ್ತೆ ಎನ್ನುತ್ತಿದ್ದರು.

ಕೊನೆಯದಾಗಿ ಅಮರನಾಥ ಮತ್ತು ಸವ್ಯ ಇಬ್ಬರೂ ಹೊರಕ್ಕೆ ಬರುತ್ತಿದ್ದಂತೆ ರಿಕಿ ರೊನಾಲ್ಡ್ ಎದುರಿಗೆ ನಿಂತಿದ್ದಾನೆ.

''ಈ ನನ್ಮಗ ಯಾಕೊ ಬಂದ ಇಲ್ಲಗೆ...? ಕೊನೆ ದಿನ ಒಳ್ಳೆ ಮೂಡ್‌ನಲ್ಲಿದ್ದಾಗ ಎದುರಾದನಲ್ಲೊ... ಜಗತ್ ಮಿಂಡ್ರಿ'' ಸವ್ಯ ಗೊಣಗುತ್ತಿದ್ದಂತೆ ''ಅವನು ಎಲ್ಲಾದರು ಬರ್‍ಲಿ ಬಿಡೊ ನಮಗೇನು....?'' ಇಬ್ಬರು ಅವನನ್ನು ನೋಡುತ್ತಲೆ ಮುಂದಕ್ಕೆ

ಬಂದುಬಿಟ್ಟರು. ''ಈ ನನ್ಮಗ ಹೀಟ್ ಮಾಡಿಕೊಳ್ಳುವುದಕ್ಕೆ ಬಂದಿದ್ದಾನೆ'' ಸವ್ಯ ಮತ್ತೆ ಗೊಣಗಿದ. ''ನಮ್ಮ ಕ್ಲಾಸ್ ಹುಡುಗಿಯರಿಗೆ ಕಾಯ್ತಾ ಇರಬೇಕು ಈ ನನ್ಮಗ'' ಅಮರನಾಥ ಜ್ಞಾನೋಧಯವಾದಂತೆ ಹೇಳಿದ.

''ನೀನು ನಿಜವಾಗಿಯೂ ಮದ್ದು ಕಣೊ.... ಇನ್ನು ಯಾತಕ್ಕೆ ಬರ್ತಾನೆ ಅವನು....?'' ಸವ್ಯ, ಅಮರನಾಥನ ತಲೆ ಸವರುತ್ತ ಹೇಳಿದ. ''ಲೋ ಇವೊತ್ತು ಹೋಗ್ತಾ ಹರ್ಷನ್ನ ನೋಡಿಕೊಂಡೋಣ'' ಅಮರನಾಥ, ಸವ್ಯನಿಗೆ ಹೇಳುತ್ತಿದ್ದಂತೆ ''ಹೌದಲ್ಲ! ಮನೆಯಲ್ಲಿ ಹೇಳಲಿಲ್ಲವಲ್ಲೊ ನಡಿ ಮನೆಗೆ ಫೋನ್ ಮಾಡಿ ಆಮೇಲೆ ಹೋಗೋಣ. ಇಬ್ಬರು ರಸ್ತೆ ದಾಟಿ ಫೋನ್ ಬೂಥ್ ಮುಂದೆ ನಿಂತುಕೊಂಡರು.

''ಲೊ... ಮಕ್ಕಳಾ.... ಇಲ್ಲಿ ಬನ್ನಿರೊ....'' ಯಾವುದೊ ಅಪ್ಯಾಯಮಾನವಾದ ಕೂಗು. ಇಬ್ಬರೂ ಒಮ್ಮೆಲೆ ತಿರುಗಿನೋಡಿದರು...? ಹರ್ಷ ನಿಂತಿದ್ದಾನೆ. ಇಬ್ಬರೂ ಓಡಿಹೋಗಿ ''ಏನು ಮಗ ಹೇಗಿದ್ದೀಯ....? ಎಂದು ತಬ್ಬಿಕೊಂಡರು. ಹರ್ಷ ಇಬ್ಬರನ್ನು ತಬ್ಬಿಕೊಂಡ.

''ನೀವು ಈವೊತ್ತು ಪ್ರಿಯಾಗಿರ್ತೀರ ಅಂತ ಗೊತ್ತಾಯಿತು. ಅದಕ್ಕೆ ಬಂದೆ ಕಣ್ರೊ...?''

''ನಾವು ನಿಮ್ಮ ಮನೇಗೆ ಬರೋಣ ಅಂತ ಬರ್ತಾ ಇದ್ದಿವಿ'' ಎಂದರು.

''ನಡೆಯಿರಿ ಅಲ್ಲಿ ಕುಳಿತುಕೊಳ್ಳೋಣ'' ಮೂವರು ಫೋನ್ ಬೂಥಿನ ಹತ್ತಿರ ಕುಳಿತುಕೊಂಡು ಚಹಾಗೆ ಹೇಳಿದರು.

''ನಿಮ್ಮ ತಾಯಿ ತಂಗಿಯರು ಚೆನ್ನಾಗಿದ್ದಾರೇನೊ....?'' ಸವ್ಯ ಪ್ರಶ್ನಿಸಿದ. ಚೆನ್ನಾಗಿದ್ದಾರೆ ಕಣೊ. ಹರ್ಷ ಹೇಳಿದ. ''ಸಾಯಂಕಾಲ ಏನಾದರು ಕೆಲಸ ನೋಡಿಕೊಂಡು ದಿನದಲ್ಲಿ ಕಾಲೇಜಿಗೆ ಬಾರೊ'' ಅಮರನಾಥ ಹೇಳಿದ. ''ಅದು ಆಗೊದಿಲ್ಲ ಬಿಡ್ರೊ. ಇವ್‌ನಿಂಗ್ ಕಾಲೇಜ್‌ನಲ್ಲಿ ಎಲ್.ಎಲ್.ಬಿಗೆ ಸೇರಿಕೊಂಡು ಲಾಯರ್ ಆಗಿಬಿಡ್ತೀನೊ. ಸರಿ ಅಂದರೆ ತಪ್ಪು ಅನ್ನುವುದು, ತಪ್ಪು ಅಂದರೆ ಸರಿ ಅನ್ನುವುದು. ಅದೆ ತಾನೆ ಲಾಯರ್ ಕೆಲಸ...? ಜೊತೆಗೆ ರಾಜಕಾರಣ. ನನ್ನಮಗಂದು ಬಂಡವಾಳಾನೂ ಬೇಡ ಬುದ್ಧಿನೂ ಬೇಡ.''

ಇಬ್ಬರು ಹರ್ಷನ ಮಾತುಗಳನ್ನು ಕೇಳುತ್ತ, ಕಾಲೇಜು ಬಿಟ್ಟು ಇನ್ನೂ ಸರಿಯಾಗಿ ಆರು ತಿಂಗಲಾಗಿಲ್ಲ , ಆಗಲೆ ಏನೇನೊ ಮಾತಾಡ್ತಾನಲ್ಲೊ.....? ಎಂದು ಭೀತಿಗೊಳಗಾದವರಂತೆ ಅವನನ್ನೇ ನೋಡಿದರು. ಅಷ್ಟರಲ್ಲಿ ರಿಕಿ ರೊನಾಲ್ಡ್, ಇಬ್ಬರು ಹುಡುಗಿಯರು, ಇಬ್ಬರು ಚೇಲಾಗಳ ಜೊತೆಗೆ ರಸ್ತೆ ದಾಟಿ ನಡೆದುಬರುತ್ತಿದ್ದ. ಬಂದವನೆ

ನೇರವಾಗಿ ಹರ್ಷ ಮತ್ತು ಗೆಳೆಯರನ್ನು ದಿಟ್ಟಿಸಿ ನೋಡಿದ. ಅನಂತರ ನೇರವಾಗಿ ಹತ್ತಿರಕ್ಕೆ ಬಂದು ಮೂವರನ್ನು ಕೆಲಗಿಂದ ಮೇಲಕ್ಕೆ ನೋಡಿ ಒಮ್ಮೆ ನಕ್ಕ. ಮೂವರು ಅವನನ್ನೇ ನೋಡಿದರು.

ರಿಕಿ ''ಲೋ ಪಂಡು ಒಂದು ಸಿಗರೇಟು'' ಎಂದಿದ್ದೆ ಪಕ್ಕದಲ್ಲಿದ್ದವನು ಒಂದು ಸಿಗರೇಟನ್ನು ತೆಗೆದು ಹರ್ಷನಿಗೆ ಕೊಡಲೊದ. ಹರ್ಷ ತೆಗೆದುಕೊಳ್ಳದೆ ಅವನನ್ನೇ ದುರುಗುಟ್ಟಿ ನೋಡಿದ. ''ಡೋಂಟ್‌ವರಿ ಇದು ಮಾಮೂಲಿ ಸಿಗರೇಟು. ಇದರಲ್ಲಿ ಮಸಾಲಾ ಏನೂ ಇಲ್ಲ'' ರಿಕಿ ನಕ್ಕ. ಅಷ್ಟರಲ್ಲಿ ಅನು ಮತ್ತು ಅವಳ ಗೆಳತಿಯರು ರಸ್ತೆ ದಾಟಿ ಬರುತ್ತಿದ್ದರು. ''ತೆಗೆದುಕೊ ಮಗ. ಏನು ಯೋಚಿಸ್ತೀಯಾ....?'' ರಿಕಿ ಹೇಳಿದ. ''ತೆಗೆದುಕೊಳ್ಳಲ್ಲ ಅಂದರೆ....?'' ಹರ್ಷ ಕುರ್ಚಿಯಲ್ಲಿ ಕುಳಿತುಕೊಂಡೆ ಕೇಳಿದ. ಅಮರನಾಥ ಮತ್ತು ಸವ್ಯ ಏನೊ ಅನಾಹುತ ನಡೆಯುತ್ತದೆ ಎಂದು ತುಸು ಭೀತಿಗೊಳಗಾದಂತೆ ಕಂಪನಗೊಂಡರು.

ಹರ್ಷನ ಮಾತು ಕೇಳಿದ ರಿಕಿ ಮತ್ತು ಅವನ ಗೆಳೆಯರು ಜೋರಾಗಿ ಒಮ್ಮೆಲೆ ನಕ್ಕರು. ಸುತ್ತಲಿರುವ ವಿದ್ಯಾರ್ಥಿಗಳು ಇವರ ಕಡೆಗೆ ನೋಡ ತೊಡಗಿದರು. ರಿಕಿ ಕಣ್ಣು ಸನ್ನೆ ಮಾಡಿದ್ದೆ ಅವನ ಚೇಲಾ ಒಬ್ಬ ಹರ್ಷನ ಬಾಯಿಗೆ ಸಿಗರೇಟನ್ನು ಇಡಲು ಹತ್ತಿರಕ್ಕೆ ನಡೆದ. ಹರ್ಷ ಎದ್ದು ನಿಂತವನೆ ಕಣ್ಣುಗಳಲ್ಲಿ ಬೆಂಕಿ ಹೊತ್ತಿಸಿಕೊಂಡು ಬಂದವನ ಕಡೆಗೆ ಒಮ್ಮೆ ದುರುಗುಟ್ಟಿ ನೋಡಿದ. ಅವನು ಹರ್ಷನ ಕೋಪವನ್ನು ನೋಡಿ ಒಂದು ಹೆಜ್ಜೆ ಹಿಂದೆ ಹಾಕಿದ್ದೆ ತಡ. ಹರ್ಷ ಒಂದೆಜ್ಜೆ ಮುಂದಕ್ಕೆ ಸಾಗಿ ರಿಕಿಯ ಕೆನ್ನೆಗೆ ಬಲವಾಗಿ ಒಂದು ಗುದ್ದಿದ.

ಆ ಗುದ್ದು ಎಷ್ಟು ಜೋರಾಗಿತ್ತೆಂದರೆ ಪಟಾಕಿ ಸಿಡಿದಂತಾಗಿ ಅವನು ಹತ್ತು ಅಡಿಗಳ ದೂರಕ್ಕೆ ಹಾರಿಬಿದ್ದಿದ್ದ. ಈಗ ಎಲ್ಲರೂ ಆ ಕಡೆಗೆ ಒಮ್ಮೆಲೆ ನೋಡಿದರು. ಹರ್ಷ ಪ್ಯಾಂಟಿಗೆ ಸುತ್ತಿದ್ದ ಬೆಲ್ಟನ್ನು ಬಿಚ್ಚಿಕೊಂಡು ಹತ್ತಿರಕ್ಕೆ ನಿಧಾನವಾಗಿ ನಡೆದ. ರಿಕಿ ಏನಾಗುತ್ತಿದೆ ಎಂದು ತಿಳಿದುಕೊಳ್ಳುವುದರೊಳಗೆ ಬೆಲ್ಟು ಅವನ ದೇಹವನ್ನು ಎರಡು ಬಾರಿ ಹಾವಿನಂತೆ ಸುತ್ತಿಕೊಂಡಿತ್ತು. ರಿಕಿ ಹಿಂದಕ್ಕೆ ತಿರುಗಿ ನೊಡುತ್ತ ನೋಡುತ್ತಾ ಎದ್ದುಬಿದ್ದು ಒಂದೇ ಓಟಕ್ಕೆ ಅಲ್ಲಿಂದ ಓಡತೊಡಗಿದ. ಹರ್ಷ ಹಿಂದಕ್ಕೆ ನೋಡುವುದರಲ್ಲಿ ಅವನ ಜೊತೆಗಿದ್ದ ಚೇಲಾಗಳು ಒಬ್ಬರೂ ಕಾಣಿಸಲಿಲ್ಲ. ಅನು ಮತ್ತು ಅವಳ ಗೆಳತಿಯರು ಅಲ್ಲಿಂದ ಹುಲಿಯನ್ನು ನೋಡಿದ ಜಿಂಕೆಗಳಂತೆ ಹಾರಿಹೋಗಿದ್ದರು.

ಹರ್ಷ ಪ್ಯಾಂಟಿಗೆ ಬೆಲ್ಟು ಸುತ್ತಿಕೊಳ್ಳುತ್ತ ನಿಧಾನವಾಗಿ ಹಿಂದಕ್ಕೆ ನಡೆದುಬಂದು

ಸುತ್ತಲು ನೋಡುತ್ತ ಅದೆ ಚೇರಿನಲ್ಲಿ ಕುಳಿತುಕೊಂಡ. ಅನಂತರ ಸವ್ಯ ಮತ್ತು ಅಮರನಾಥನ ಕಡೆಗೆ ನೋಡುತ್ತ "ಕುಳಿತುಕೊಳ್ಳಿರೊ" ಎಂದ. ಇಬ್ಬರೂ ಅವನನ್ನೇ ನೋಡುತ್ತಾ ಕುಳಿತುಕೊಂಡರು. ಹುಡುಗ ಚಹಾ ತಂದು ಮೂವರಿಗೂ ಕೊಟ್ಟ. ಹರ್ಷ ಕೆಲವೇಕ್ಷಣಗಳಲ್ಲಿ ಏನೊ ನಡೆದೆ ಇಲ್ಲ ಎನ್ನುವಷ್ಟು ಸಲೀಸಾಗಿ ಮತ್ತೆ ಮಾತನಾಡತೊಡಗಿದ. ಸವ್ಯ ಮತ್ತು ಅಮರನಾಥನಿಗೆ ಒಳಗೊಳಗೆ ನಗು ಉಕ್ಕಿಬರುತ್ತಿದ್ದರು ಇನ್ನೆಲ್ಲೊ ಒಂದು ಮೂಲೆಯಲ್ಲಿ ಸಣ್ಣದಾಗಿ ನಡುಕ ಪ್ರಾರಂಭವಾಗಿತ್ತು.

ಅಮರನಾಥ ಮತ್ತು ಸವ್ಯನ ಜೊತೆಗೆ ಸುಮಾರು ಹೊತ್ತು ಸಮಯ ಕಳೆದ ಹರ್ಷ ಅವರಿಂದ ಬೀಳ್ಕೊಂಡು ಹೊರಟುಹೋದ. ಅಮರನಾಥ ಮತ್ತು ಸವ್ಯ ತಮ್ಮ ತಮ್ಮ ಮನೆಗಳನ್ನು ಸೇರಿಕೊಂಡರು. ಇಬ್ಬರಿಗೂ ರಾತ್ರಿಯೆಲ್ಲಾ ಒಂದೇ ಯೋಚನೆ ಹರ್ಷನಿಗೆ ಇಷ್ಟು ಧೈರ್ಯ ಹೇಗೆ ಬಂದಿತು....? ಸಿನಿಮಾದಲ್ಲಿ ಮಾತ್ರ ಆ ರೀತಿಯ ಗುದ್ದನ್ನು ನೋಡಿದ್ದ ಅವರಿಗೆ ರಿಕಿ ಹಕ್ಕಿಯಂತೆ ಹಾರಿಹೋಗಿ ಬಿದ್ದದ್ದು ಆಶ್ಚರ್ಯವಾಗಿತ್ತು. ಅವನ ಗುದ್ದಿಗೆ ಅಷ್ಟು ಶಕ್ತಿ ಎಲ್ಲಿಂದ ಬಂದಿತು...? ಹರ್ಷ ಕಾಲೇಜಿಗೆ ಬರುವುದಿಲ್ಲ. ರಿಕಿ ತನ್ನ ಗ್ಯಾಂಗ್ ಸಮೇತ ಬಂದರೆ ಸಿಕ್ಕಿಕೊಳ್ಳುವುದು ನಾವೆ...? ಒಳ್ಳೆ ಗ್ರಹಚಾರವಾಯಿತಲ್ಲ. ಇಬ್ಬರಿಗೂ ರಾತ್ರಿ ಸರಿಯಾಗಿ ನಿದ್ದೆ ಬರಲಿಲ್ಲ. ನಾಳೆ ಕಾಲೇಜಿಗೆ ಹೋದರೆ ಏನಾಗುತ್ತದೊ ಏನೊ....? ಒಂದೇ ಯೋಚನೆ.

ಅನು ಮತ್ತು ಅವಳ ಗೆಳತಿಯರು ಮನೆ ಸೇರಿಕೊಂಡಿದ್ದರು. ಅಂದು ಕೊನೆಯ ದಿನದ ಪರೀಕ್ಷೆಗಳು ಮುಗಿದಿದ್ದರಿಂದ ರಾತ್ರಿ ಎಂಜಾಯ್ ಮಾಡಬೇಕೆಂದು ಏನೇನೊ ಯೋಚಿಸಿಕೊಂಡಿದ್ದರು. ಆದರೆ ಹರ್ಷ ಅವರ ಕಣ್ಣೆದುರಿಗೆ ರಿಕಿಗೆ ಹೊಡೆದ ಏಟುಗಳನ್ನು ನೆನೆಸಿಕೊಂಡು ಹಾವು ತುಳಿದಂತೆ ಬೆಚ್ಚಿಬಿಟ್ಟಿದ್ದರು. ಆ ರಾತ್ರಿ ಅವರಿಗೆ ಎಂಜಾಯ್ ಮಾಡಲು ಯಾವ ದಾರಿಗಳು ಹೊಳೆಯಲಿಲ್ಲ. ಅಲ್ಲಿ ಏನು ನಡೆಯಿತು ಎನ್ನುವುದು ಅವರಿಗೆ ಸರಿಯಾಗಿ ಗೊತ್ತಿರಲಿಲ್ಲ.

ರಿಕಿಗೆ ಡ್ರಗ್ಸ್‌ನೆಟ್‌ನ ಸಂಬಂಧವಿರುವುದು ಕೇಳಿದ್ದರು. ಜೊತೆಗೆ ಒಂದು ದಿನ ಹರ್ಷನಿಗೆ ಸಿಗರೇಟ್ ಕುಡಿಸಿ ಗೋಳು ಹೊಯ್ದುಕೊಂಡಿರುವ ವಿಷಯವು ಅವರಿಗೆ ಗೊತ್ತಿತ್ತು. ಈ ಹರ್ಷನಿಗೆ ಇಷ್ಟು ಧೈರ್ಯ ಹೇಗೆ ಬಂದಿತು....? ಯಾವುದಾದರು ರೌಡಿ ಗ್ಯಾಂಗ್ ಜೊತೆಗೆ ಸಂಬಂಧ ಬೆಳೆಸಿಕೊಂಡಿದ್ದಾನೆಯೆ ....? ಕ್ಯಾಂಪಸ್‌ನಲ್ಲಿ ಇನ್ನು ಏನೇನು ಗಲಾಟೆ ಆಗುತ್ತೊ....? ಹೀಗೆ ಏನೇನೊ ಯೋಚಿಸುತ್ತ ಮಾತನಾಡುತ್ತ ಮೂವರು ಊಟಮಾಡಿ ಗಪ್‌ಚಿಪ್ ಎಂದು ಮಲಗಿಬಿಟ್ಟರು.

ಮೂವರು ಒಂದೇ ಕೋಣೆಯಲ್ಲಿ ಅಸ್ತವ್ಯಸ್ತವಾಗಿ ಮಲಗಿಕೊಂಡಿದ್ದಾರೆ. ಆಗಾಗ ಸಣ್ಣದಾಗಿ ಗೊರಕೆಗಳ ಕೇಳುತ್ತಿವೆ. ಬೆಂಗಳೂರಿನ ನವಿರಾದ ಚಳಿ ಅವರ ದೇಹಗಳಿಗೆ ಏನೊ ಬೇಕೆಂದು ಹೇಳುತ್ತಿದೆ. ಸಣ್ಣಗೆ ಗರಗಸ ಸರಿದಾಡಿದಂತಹ ಗೊರಕೆಗಳ ನಡುವೆ ಸಿಕ್ಕಿಕೊಂಡ ಅನು ನಿಧಾನವಾಗಿ ಕಣ್ಣುಗಳನ್ನು ಮುಚ್ಚಿಕೊಂಡೆ ಸುತ್ತಲು ಕೈಯಾಕಿ ಹುಡುಕಾಡಿದಳು. ಮೆತ್ತನೆ ಮೂಟೆಗಳಂತೆ ಅವಳ ಕೈಗಳಿಗೆ ಏನೊ ಸಿಕ್ಕುತ್ತಿದೆ. ರೂಪ ಕೈಕಾಲುಗಳನ್ನು ಹತ್ತಿರಕ್ಕೆ ಎಳೆದುಕೊಂಡು ದೇಹ ಮತ್ತು ತೊಡೆಗಳ ಮಧ್ಯದಲ್ಲಿ ಕೈಗಳನ್ನು ಇಟ್ಟುಕೊಂಡಳು. ಕೃತಿಕಾ ಒಂದು ಕಾಲನ್ನು ಮೇಲಕ್ಕೆತ್ತಿ ರೂಪಾಳ ಮೇಲೆ ಹಾಕಿಕೊಂಡು ಒಂದು ಕೈಯಿಂದ ಅವಳನ್ನು ತಬ್ಬಿಕೊಂಡಳು. ಅನು ಶೇಕ್ಸ್‌ಪಿಯರ್‌ನ ಲೇಡಿ ಮ್ಯಾಕ್‌ಬತ್‌ನಂತೆ ನಿಧಾನವಾಗಿ ಎದ್ದು ಅಡಿಗೆ ಮನೆಗೆ ಹೋಗಿ ಏನೊ ತಿಂದು ನೀರು ಕುಡಿದು ಮತ್ತೆ ಹಿಂದಕ್ಕೆ ಬಂದು ಬೇರೆ ಮಂಚದ ಮೇಲೆ ಉರುಳಿಕೊಂಡಳು. ಚಳಿಗೆ ಬ್ಲಾಂಕೆಟನ್ನು ಮೈತುಂಬಾ ಹೊದ್ದುಕೊಂಡು ಕನಸುಗಳ ಒಳಕ್ಕೆ ಜಾರಿಕೊಂಡಳು.

ಬೆಂಗಳೂರು, ಸೂರ್ಯನ ಕಣ್ಣುಗಳಲ್ಲಿ ಸ್ಪಷ್ಟವಾಗಿ ಕಾಣಿಸಿಕೊಂಡು ಎರಡು ಮೂರು ಗಂಟೆಗಳಾಗಿದ್ದರು ಅವರು ಇನ್ನೂ ಕನಸಿನ ಲೋಕದಲ್ಲೇ ವಿಹರಿಸುತ್ತಿದ್ದರು. ಕೆಲಸದ ಆಳು ಬಾಗಿಲು ತಟ್ಟಿದ ಮೇಲೆ ಮೂವರಿಗೂ ಎಚ್ಚರವಾಗಿ ಬಾಗಿಲು ತೆಗೆದು ಬಾಥ್‌ರೂಂ ಕಡೆಗೆ ಒಬ್ಬೊಬ್ಬರಾಗಿ ನಡೆದರು. ಕೃತಿಕಾ ಮತ್ತು ರೂಪ ಹತ್ತು ದಿನಗಳು ರಜಾ ಇರುವುದರಿಂದ ತಮ್ಮ ಊರುಗಳಿಗೆ ಹೋಗಲು ತಯಾರಾದರು. ಅನು ತನ್ನ ಊರಿಗೆ ಮರುದಿನ ಹೋಗುವುದಾಗಿ ತೀರ್ಮಾನಿಸಿದ್ದರಿಂದ ಆ ದಿನ ರೂಪ ಮತ್ತು ಕೃತಿಕಾಳನ್ನು ಅವರ ಊರುಗಳಿಗೆ ಬೀಳ್ಕೊಟ್ಟು ರಾತ್ರಿ ಒಬ್ಬಳೆ ಮನೆಯಲ್ಲೆ ಉಳಿದುಕೊಂಡಳು.

* * *

ಅಡಿಗೆ ಮಾಡುವ ಹೆಂಗಸು ಮರುದಿನ ಬೆಳಗ್ಗೆ ಎಂದಿನಂತೆ ಆರುಗಂಟೆಗೆಲ್ಲ ಮನೆಯ ಗೇಟನ್ನು ತೆಗೆದುಕೊಂಡು ಬಂದು ಗೋಡೆಯ ಮೇಲಿದ್ದ ಕರೆಗಂಟೆ ಒತ್ತಿದಳು. ಮನೆಯ ಒಳಗಿಂದ ಯಾವ ಸದ್ದು ಬರಲಿಲ್ಲ . ನಾಲ್ಕಾರು ಸಲ ಬೆಲ್ಲು ಬಾರಿಸಿದಳು. ಬಾಗಿಲು ತೆಗೆಯಲಿಲ್ಲ. ಹೊರಗೆ ಬಾಗಿಲಿಗೆ ಬೀಗವು ಹಾಕಿರಲಿಲ್ಲ. ಅಕ್ಕಪಕ್ಕದ ಮನೆಗಳಲ್ಲಿ ಆಗಲೆ ಜನರು ಎದ್ದಿದ್ದರಿಂದ,

''ಈ ಮನೆಯವರು ಯಾರೂ ಇಲ್ಲವ ಸ್ವಾಮಿ....?'' ಕೇಳಿದಳು. ''ಇಬ್ಬರು ಹುಡುಗಿಯರು ರಾತ್ರಿ ಊರಿಗೋದರು. ಇನ್ನೊಂದು ಹುಡುಗಿ ಇದ್ದಳಲ್ಲ..?'' ಎಂದರು ವಯಸ್ಸಾದವರೊಬ್ಬರು. ''ಹೌದು ! ನನಗೂ ಹಾಗೇನೆ ಹೇಳಿದ್ದರು. ಆದರೆ

ಬಾಗಿಲು ತೆಗಿತಾ ಇಲ್ಲವಲ್ಲ....?'' ಅಡಿಗೆಯವಳು ತಾನೆ ಪ್ರಶ್ನಿಸಿಕೊಂಡಳು. ''ಎಲ್ಲೋ ಜೋರಾಗಿ ನಿದ್ದೆ ಮಾಡ್ತ ಇರಬೇಕು. ಇನ್ನೊಂದು ಸಲ ಬಾಗಿಲು ತಟ್ಟಮ್ಮ'' ಎಂದರು.

ಆಕೆ ಬಾಗಿಲು ಹತ್ತಿರಕ್ಕೆ ಹೋಗಿ ಮತ್ತೆ ಗಂಟೆ ಬಾರಿಸಿದಳು. ಕಿಟಕಿಗಳಲ್ಲಿ ಇಣಿಕಿ ನೋಡಿದಳು. ಬೆಡ್‌ರೂಮ್ ಮೊದಲನೆ ಮಹಡಿಯಲ್ಲಿ ಇರುವುದರಿಂದ ಅವಳಿಗೆ ಯಾರೂ ಕಾಣಿಸಲಿಲ್ಲ. ಮತ್ತೆ ಹೊರಕ್ಕೆ ಬಂದು ''ಬಾಗಿಲು ತೆಗಿತಾ ಇಲ್ಲವಲ್ಲ ಸ್ವಾಮಿ'' ಎಂದಳು. ವಯಸ್ಸಾದವರು ''ಇಷ್ಟೊತ್ತಿಗೆ ಆ ಹುಡುಗಿ ಎಲ್ಲಿಗೂ ಹೋಗೊದಿಲ್ಲವಲ್ಲ....? ನಾನು ಅರ್ಧಗಂಟೆಯಿಂದ ಇದೆ ರಸ್ತೆಯಲ್ಲಿ ವಾಕ್ ಮಾಡ್ತಾ ಇದ್ದೀನಿ. ಹೊರಗಡೆ ಬರಲಿಲ್ಲವಲ್ಲ...?'' ಎನ್ನುತ್ತಾ ಕಾಂಪೌಂಡ್ ಒಳಕ್ಕೆ ಬಂದು ಕಿಟಕಿಗಳ ಒಳಕ್ಕೆ ಇಣಕಿ ನೋಡುತ್ತಾ..... ಬಾಗಿಲನ್ನು ನಾಲ್ಕಾರು ಸಲ ಬಡಿದು ಬೆಲ್ಲು ಬಾರಿಸಿ ನೋಡಿದರು.

ಹು ಹ್ಞೂ..... ಅನು ಮನೆಯ ಒಳಗಿರುವ ಯಾವ ಸೂಚನೆಗಳು ಕಾಣಲಿಲ್ಲ. ವಯಸ್ಸಾದವರು ನಿಧಾನವಾಗಿ ತಮ್ಮ ಮನೆಯ ಮೇಲಕ್ಕೆ ಹತ್ತಿಹೋಗಿ ಮೇಲಿನಿಂದ ಬೆಡ್‌ರೂಂ ಒಳಕ್ಕೆ ಕಿಟಕಿ ಗ್ಲಾಸಿನ ಮೂಲಕ ಇಣಿಕಿ ನೋಡಿದರು. ಅನು ಹಾಸಿಗೆ ಮೇಲೆ ಕಾಣಿಸಲಿಲ್ಲ . ಆದರೆ ಯಾರೊ ಹಾಸಿಗೆ ಮೇಲೆ ನಿಂತುಕೊಂಡಿದ್ದಾರೆ.....? ನಿಂತುಕೊಂಡಿರುವವರನ್ನು ಕೆಳಗಿನಿಂದ ಮೇಲಕ್ಕೆ ನೋಡುತ್ತಾರೆ....? ಅವಳ ಕತ್ತು ಮತ್ತು ಫ್ಯಾನಿನ ನಡುವೆ ಹಗ್ಗ ಬಿಗಿದುಕೊಂಡಿದೆ. ಮುದುಕಪ್ಪನಿಗೆ ತಾನು ಏನು ನೋಡುತ್ತಿದ್ದೇನೆ ಎನ್ನುವುದನ್ನು ಗ್ರಹಿಸಿಕೊಳ್ಳಲು ಕೆಲವು ಕ್ಷಣಗಳು ಹಿಡಿದವು. ಮುಖದ ಬಣ್ಣ ಬದಲಾಗಿ ಮೈಯೆಲ್ಲಾ ಒಮ್ಮೆಲೆ ತಣ್ಣಗಾದಂತಾಯಿತು. ಅಲ್ಲಿಂದ ಹೇಗೆ ಇಳಿದರೊ ಅವರಿಗೆ ಗೊತ್ತಾಗಲಿಲ್ಲ. ಇಳಿಯುತ್ತಿದ್ದಂತೆ.....

''ಆ ಹುಡುಗಿ ನೇಣು ಹಾಕಿಕೊಂಡು ಬಿಟ್ಟಿದ್ದಾಳೆ.... ಸುಬ್ರಮಣ್ಯಂ.... ರಾಮರಾವ್ ಎಲ್ಲರೂ ಬನ್ನಿ .... ಎಲ್ಲರೂ ಬನ್ನಿ '' ಎಂದು ಕೂಗಿಕೊಂಡರು. ಬೆಳಗ್ಗೆ ಇನ್ನೂ ನಿದ್ದೆಯ ಮಂಪರಿನಲ್ಲಿದ್ದ ಜನ ವಿಷಯ ಕೇಳಿ ದಂಗಾಗಿ ಹೋದರು. ಬಂದವರಲ್ಲಿ ಕೆಲವರು ಆಶ್ಚರ್ಯ ವ್ಯಕ್ತಪಡಿಸುತ್ತ ಪತ್ತೆದಾರಿಯ ಶೈಲಿಯಲ್ಲಿ ಮಾತನಾಡಿಕೊಳ್ಳುತ್ತಿದ್ದಾರೆ. ಇನ್ನೂ ಕೆಲವರು ನಮ್ಮ ಬೀದಿಯಲ್ಲಿ ಈಗಾಗಿಬಿಡ್ತಲ್ಲ....? ಎಂದು ಕೈ ಕೈ ಹಿಸಿಕಿಕೊಳ್ಳುತ್ತಿದ್ದರು. ಬಾಗಿಲನ್ನು ಒಡೆದು ಮನೆಯ ಒಳಗೆ ಹೋಗಬೇಕೊ....? ಇಲ್ಲ ಪೊಲೀಸರು ಬರುವವರೆಗೆ ಕಾಯಬೇಕೊ ಗೊಂದಲಗೊಂಡಿದ್ದರು. ಅಲ್ಲಿಂದ ಕೇವಲ ಎರಡು ಕಿಲೋ ಮೀಟರುಗಳ ದೂರದಲ್ಲಿದ್ದ ಪೊಲೀಸ್ ಠಾಣೆಗೆ ಯಾರೊ ಆಗಲೇ ಫೋನ್ ಮಾಡಿದ್ದರಿಂದ ಪೊಲೀಸ್ ಜೀಪ್ ಜೋರಾಗಿ ಶಬ್ಧಮಾಡುತ್ತಾ ಬಂದು ಮನೆ ಮುಂದೆ ನಿಂತುಕೊಂಡಿತು.

"ಯಾವ ಮನೇರಿ....?" ಸಬ್‌ಇನ್‌ಸ್ಪೆಕ್ಟರ್ ಜೀಪಿನಿಂದ ಇಳಿಯುತ್ತಿದ್ದಂತೆ ಕೇಳಿದರು.

"ಇದೆ ಸಾರ್ ಈ ಮನೆ " ಒಬ್ಬ ತೋರಿಸಿದ. "ಎಲ್ಲಾ ದೂರ ಹೋಗಿ" ಎಂದು ಎಲ್ಲರನ್ನು ದೂರ ಸರಿಸುತ್ತ ಮನೆಯ ಹತ್ತಿರಕ್ಕೆ ಬಂದ ಸಬ್ ಇನ್‌ಸ್ಪೆಕ್ಟರ್ "ಮೊದಲು ನೋಡಿದ್ದು ಯಾರು....?" ಪ್ರಶ್ನಿಸಿದರು. ಮುದುಕಪ್ಪ ಹತ್ತಿರಕ್ಕೆ ಬಂದು ಅಡಿಗೆ ಮಾಡುವವಳು ಬಾಗಿಲು ತಟ್ಟಿದ ವಿಷಯದಿಂದ ಹಿಡಿದು ಎಲ್ಲವನ್ನು ವಿವರವಾಗಿ ಹೇಳಿದರು. ಸಬ್‌ಇನ್‌ಸ್ಪೆಕ್ಟರ್ ಪೇದೆಯ ಸಮೇತ ಪಕ್ಕದ ಮನೆಯ ಮೇಲಕ್ಕೆ ಹತ್ತಿ ಹೋಗಿ ಕಿಟಕಿ ಗ್ಲಾಸಿನಲ್ಲಿ ಇಣಕಿನೋಡಿ ಇಳಿದು ಬಂದರು.

"ಈ ಮನೆ ಓನರ್ ಯಾರ್ರಿ....?" ಎಸ್.ಐ. ಪ್ರಶ್ನೆಗೆ "ಸಾರ್ ಓನರ್ ಅಮೆರಿಕಾದಲ್ಲಿದ್ದಾರೆ. ಆಗಾಗ ಅವರ ಗೆಳೆಯರೊಬ್ಬರು ರಾಜಾಜಿನಗರದಿಂದ ಬಂದು ಮನೆ ನೋಡಿಕೊಂಡು ಹೋಗ್ತಾ ಇರ್ತಾರೆ. ಅವರ ಹೆಸರು ರಂಗಾರಾವ್ ಅಂತ. ಬೇಕಾದ್ರೆ ಫೋನ್ ನಂಬರ್ ಕೊಡ್ತೀನಿ" ಎಂದರು ಮುದುಕಪ್ಪ. "ದಯವಿಟ್ಟು ಮೊದಲು ನೀವೇ ಅವರಿಗೆ ಸ್ವಲ್ಪ ಫೋನ್ ಮಾಡಿ, ಬನ್ನಿ ಅಂತೇಳಿ" ಎಂದರು. ಮುದುಕಪ್ಪ ಫೋನ್ ಮಾಡಲು ತಮ್ಮ ಮನೆ ಒಳಕ್ಕೆ ಹೋದರು.

ಅಷ್ಟರಲ್ಲಿ ನಾಲ್ಕಾರು ಸಲ ವೈರ್‌ಲೆಸ್ ಫೋನ್‌ನಲ್ಲಿ ಮಾತನಾಡಿದ್ದ ಸಬ್‌ಇನ್‌ಸ್ಪೆಕ್ಟರ್ ಯಾರಿಗೂ ಕಾಯುತ್ತಿರುವಂತೆ ಚಡಪಡಿಸುತ್ತ ಮನೆಯನ್ನು ಒಂದೆರಡು ಸಲ ಸುತ್ತಿ ಸುತ್ತಿ ನೋಡಿದರು. ಈ ಕಾಂಪೌಂಡ್ ಒಳಕ್ಕೆ ಯಾರ್‍ಯಾರು ಬಂದಿದ್ದರು....? ಎಂಬ ಪ್ರಶ್ನೆಗೆ ಮೊದಲು ಅಡಿಗೆಯವಳು.... ಮುದುಕಪ್ಪ ಅನಂತರ ಹತ್ತಾರು ಜನ ಬಂದುಬಿಟ್ಟಿರುವುದಾಗಿ ತಿಳಿಯಿತು. "ಆಯಿತು ಕಾನ್‌ಸ್ಟೇಬಲ್ ಈ ಬಾಗಿಲನ್ನು ಹೊಡೆಯಿರಿ" ಸಬ್‌ಇನ್‌ಸ್ಪೆಕ್ಟರ್ ಆಜ್ಞೆ ಮಾಡಿದರು. ಪೊಲೀಸರು ಬರುವುದಕ್ಕಿಂತ ಮುಂಚೆಯೆ ಹಾರೆ, ಇನ್ನಿತರ ಸಾಮಾನುಗಳನ್ನು ಜನರು ಬಾಗಿಲು ಹೊಡೆಯಲು ತಂದಿದ್ದರಿಂದ ಅವುಗಳನ್ನೇ ತೆಗೆದುಕೊಂಡು ಇಬ್ಬರು ಬಾಗಿಲುಗಳನ್ನು ಹೊಡೆಯತೊಡಗಿದರು.

ಸುಮಾರು ಏಟುಗಳು ಬಿದ್ದಮೇಲೆ ಬಾಗಿಲು ತೆಗೆದುಕೊಂಡಿತು. ಅಷ್ಟರಲ್ಲಿ ಡಾಗ್ ಸ್ಕ್ವಾಡ್ ವಾಹನ ಬಂದಿತ್ತು. "ಕಾನ್‌ಸ್ಟೇಬಲ್ ಒಳಗಡೆಗೆ ಯಾರ್‍ನು ಬಿಡಬೇಡ " ಎಂದರು. ಡಾಗ್‌ಸ್ಕ್ವಾಡ್ ಮುಖ್ಯಸ್ಥ ನಾಯಿಗಳ ಸಮೇತ ವಾಹನದಿಂದ ಇಳಿದು ಬರುತ್ತಿದ್ದಂತೆ "ಓಕೆ ಮಿಸ್ಟರ್ ಪ್ರಕಾಶ್ ಮನೆ ಒಳಗಡೆಗೆ ಯಾರೂ ಹೋಗಿಲ್ಲ. ನೀವು ಮೊದಲು ನಿಮ್ಮ ಕೆಲಸ ಮುಗಿಸಿ" ಸಬ್‌ಇನ್‌ಸ್ಪೆಕ್ಟರ್ ಹೇಳಿದ್ದೆ "ಬೆಲ್ಟು ಕಟ್ಟಿದ್ದ

ಎರಡು ನಾಯಿಗಳನ್ನು ಹಿಡಿದುಕೊಂಡಿರುವ ಪೇದೆಗಳು ಕಾಂಪೌಂಡ್ ಮೂಲಕ ಮನೆ ಒಳಕ್ಕೆ ಬಿಟ್ಟರು. ಬಾರಿ ನಾಯಿಗಳು. ಅಲ್ಲಿದ್ದವರೆಲ್ಲ ನಾಯಿಗಳನ್ನು ನೋಡಿ ಮೊದಲಿಗೆ ಹೆದರಿಕೊಂಡರು.

ನಾಯಿಗಳು ಮೂಸುತ್ತ ಮೂಸುತ್ತಾ ಮನೆ ಒಳಗಡೆಗೆ ಹೋಗಿ ಮನೆಯಲ್ಲಿರುವ ಎಲ್ಲಾ ಸಾಮಾನುಗಳನ್ನು ಮುಸಿನೋಡಿದವು. ಅನಂತರ ನಿಧಾನವಾಗಿ ಮೆಟ್ಟಿಲೇರಿ ಸೀಲಿಂಗ್ ಫ್ಯಾನಿನಲ್ಲಿ ನೇತಾಡುತ್ತಿರುವ ಅನು ಹೆಣದ ಸುತ್ತಲೂ ನಾಲ್ಕಾರು ಸುತ್ತಾಕಿ ಮತ್ತೆ ಮತ್ತೆ ಮೂಸುತ್ತಾ ಮನೆ ಹೊರಕ್ಕೆ ಬಂದು ಕಾಂಪೌಂಡ್ ಒಳಗಿಂದ ಬೀದಿಗೆ ಬಂದು ಹೊರಟುಹೊದವು. ನಾಯಿಗಳ ಬೆಲ್ಟುಗಳನ್ನು ಹಿಡಿದುಕೊಂಡಿರುವ ಪೇದೆಗಳು ನಾಯಿಗಳ ಹಿಂದೆಯೆ ಹೊರಟರು.

ಈಗ ಸಬ್‌ಇನ್‌ಸ್ಪೆಕ್ಟರ್ ಜೊತೆಗೆ ಇಬ್ಬರು ಪೇದೆಗಳು ಮನೆಯ ಒಲಗಡೆಗೆ ನುಗ್ಗಿ ನೇರವಾಗಿ ಮೊದಲನೆ ಮಹಡಿಯಲ್ಲಿದ್ದ ಹೆಣದ ಹತ್ತಿರಕ್ಕೆ ಹೋಗಿ ನಿಂತುಕೊಂಡು ನೋಡತೊಡಗಿದರು. ಪೇದೆಯೊಬ್ಬ ಹೆಣದ ಮೈಯನ್ನು ಮುಟ್ಟಿನೋಡಿ, ಅನಂತರ ಮುಖದ ಮುಂದೆ ಕೈ ಇಟ್ಟು ನೋಡಿದ. ಉಸಿರು ಯಾವಾಗಲೊ ನಿಂತುಹೋಗಿ ಮೈ ತಣ್ಣಗಾಗಿಹೋಗಿತ್ತು. ಇಬ್ಬರು ಪೇದೆಗಳು ಸುತ್ತಲಿನ ದೃಶ್ಯವನ್ನು ನೋಡುತ್ತ ಯಾತವತ್ತಾಗಿ ಬರೆದುಕೊಳ್ಳುತ್ತಿದ್ದರು. ಮಧ್ಯ ಮಧ್ಯ ಸಬ್‌ಇನ್‌ಸ್ಪೆಕ್ಟರ್ ಪೊಲೀಸ್ ಭಾಷೆಯಲ್ಲಿ ಏನೊ ಹೇಳುತ್ತಿದ್ದರು. ಎಲ್ಲವನ್ನು ಬರೆದುಕೊಳ್ಳುತ್ತ ಮನೆಯಲ್ಲಿ ಎಲ್ಲವನ್ನು ಸೂಕ್ಷ್ಮವಾಗಿ ನಿಧಾನವಾಗಿ ನೋಡುತ್ತಿದ್ದರು.

ಹಂತಕರು ಏನಾದರು ಸುಳಿವು ಬಿಟ್ಟು ಹೋಗಿದ್ದಾರೆಯೆ....? ಎನ್ನುವುದನ್ನು ಹುಡುಕುತ್ತಿದ್ದಂತೆ ಬೆರಳು ತಜ್ಞರುಕೂಡ ತಮ್ಮ ಕೆಲಸದಲ್ಲಿ ತೊಡಗಿಕೊಂಡಿದ್ದರು. ಎಲ್ಲಾ ಮುಗಿದ ಮೇಲೆ ಛಾಯಾಚಿತ್ರಗಳನ್ನು ತೆಗೆಯಲು ವರದಿಗಾರರನ್ನು ಮನೆಯ ಒಳಗೆ ಬಿಟ್ಟರು. ಅಷ್ಟರಲ್ಲಿ ಪೊಲೀಸ್ ಕಮೀಷನರ್ ಬಂದರು. ಸಬ್‌ಇನ್‌ಸ್ಪೆಕ್ಟರ್ ಕಮೀಷನರ್ ಅವರಿಗೆ ಎಲ್ಲವನ್ನು ವಿವರಿಸಿ ತೋರಿಸಿದರು. ಕೊನೆಯದಾಗಿ ಎಲ್ಲ ರೀತಿಯ ಮಾಹಿತಿಯನ್ನು ಸಂಗ್ರಹಿಸಿದ ಮೇಲೆ ಹೆಣವನ್ನು ಹಗ್ಗದಿಂದ ಬಿಚ್ಚಿ ಪೋಸ್ಟ್‌ಮಾರ್ಟಂಗೆಂದು ಕಳುಹಿಸಿಕೊಟ್ಟರು.

ಮನೆಯಿಂದ ಹೊರಕ್ಕೆ ಬಂದ ನಾಯಿಗಳು ಸುತ್ತಿ ಬಳಸಿ ರಸ್ತೆಗಳನ್ನು ಹಿಡಿದು ನೇರವಾಗಿ ಬೆಂಗಳೂರಿನ ಬಸ್ಸು ನಿಲ್ದಾಣಕ್ಕೆ ಹೋದವು. ಅನಂತರ ರೈಲ್ವೆ ನಿಲ್ದಾಣ ತಲುಪಿ ತಮ್ಮ ಅಸಹಾಯಕತೆಯನ್ನು ತೋಡಿಕೊಳ್ಳುವಂತೆ ರೈಲು ಬೋಗಿಗಳನ್ನೆಲ್ಲ ಮೂಸಿ ನೋಡುತ್ತ ನಿಂತುಕೊಂಡುಬಿಟ್ಟವು. ಬೆಂಗಳೂರಿನ ಕಾಂಕ್ರೆಟ್ ಕಾಡಿಗೆ ದೇಶದ

ಎಲ್ಲಾ ದಿಕ್ಕುಗಳಿಂದ, ರಾಜ್ಯದ ಮೂಲೆ ಮೂಲೆಗಳಿಂದಲೂ ದಿನನಿತ್ಯ ಲಕ್ಷಾಂತರ ಜನರು ಬಂದು ಹೋಗುತ್ತಾರೆ. ಪ್ರತಿಯೊಬ್ಬರ ಉಸಿರು, ಬೆವರುವಾಸನೆ, ಅವರು ಉಪಯೋಗಿಸುವ ಪರಫ್ಯೂಮ್ಸ್ ದಿನನಿತ್ಯದ ಓಡಾಟಗಳಿಂದ ಗಾಳಿಯಲ್ಲಿ ಕಲಸಿಹೋಗಿ ಕಲಸಮೇಲೊಗರು ವಾಸನೆಗಳಿಂದ ನಾಯಿಗಳು ಮಾತ್ರ ಏನು ಮಾಡಲು ಸಾಧ್ಯ.....? ಅಲ್ಲಿಗೆ ಡಾಗ್ ಸ್ಕ್ವಾಡ್ ಸಂಶೋಧನೆ ಕಾಲೆತ್ತಿಕೊಂಡಿತು.

ಹೆಣವನ್ನು ಆಸ್ಪತ್ರೆಗೆ ಕಳುಹಿಸಿಕೊಟ್ಟಮೇಲೆ ಮನೆಯಲ್ಲಿ ಸಂಶೋಧನೆಯನ್ನು ಮುಂದುವರಿಸಿದ ಪೊಲೀಸರು, ಹಂತಕರು ಬಿಟ್ಟುಹೋಗಿರುವ ಯಾವುದೇ ಸೂಚನೆಗಳನ್ನು ಸಂಗ್ರಹಿಸಲಾಗಲಿಲ್ಲ. ಆದರೆ ಮನೆಯಲ್ಲಿ ಯಾವುದೇ ವಸ್ತುಗಳು ಕಳ್ಳತನವಾಗದೇ ಇರುವುದು ಪೊಲೀಸರಿಗೆ ಸಾಕಷ್ಟು ಸಂದೇಹವನ್ನು ಹುಟ್ಟಿಸಿತ್ತು. ಮನೆ ಒಳಗಿಂದ ಬೀಗವಾಕಿಕೊಂಡಿದ್ದರಿಂದ ಮನೆ ಒಳಕ್ಕೆ ಯಾರೂ ಹೋಗಿರಲು ಸಾಧ್ಯವಿಲ್ಲ. ಹಾಗಾದರೆ ಆತ್ಮಹತ್ಯೆ ಮಾಡಿಕೊಂಡಿದ್ದರೆ ಏನಾದರು ಬರೆದಿಡ ಬೇಕಾಗಿತ್ತು? ಪೋಸ್ಟ್‌ಮಾರ್ಟಂನಿಂದ ಎಲ್ಲಾ ಗೊತ್ತಾಗಿಬಿಡುತ್ತದೆಂದು ಪೊಲೀಸರು ವೈದ್ಯರ ವರದಿಗಾಗಿ ಕಾಯತೊಡಗಿದರು.

ಪೊಲೀಸರು ಕಾಲೇಜಿನಲ್ಲಿ, ಸುತ್ತಮುತ್ತಲು ಮನೆಗಳಲ್ಲಿ ಕೃತಿಕಾ ರೂಪ ಮತ್ತು ಅನು ಸಂಬಂಧಿಗಳನ್ನು ಸಂಪರ್ಕಿಸಿ ವಿಷಯ ಸಂಗ್ರಹಿಸತೊಡಗಿದರು. ಆ ಮನೆಯನ್ನು ನೋಡಿಕೊಳ್ಳುತ್ತಿದ್ದ ರಂಗಾರಾವ್‌ನನ್ನು ವಿಚಾರಿಸಿದರು. ಆದರೆ ಯಾವುದೇ ಮೂಲಗಳಿಂದಲೂ ಹಂತಕರನ್ನು ಪಿನ್ ಪಾಯಿಂಟ್ ಮಾಡಿ ಸಂಶೋಧನೆಯನ್ನು ಮುಂದುವರಿಸಲಾಗಲಿಲ್ಲ. ವೈದ್ಯರ ಪೋಸ್ಟ್‌ಮಾರ್ಟಂ ವರದಿಯಂತೆ ಅನು ದೇಹಕ್ಕೆ ಎಲ್ಲೂ ಯಾವುದೇ ರೀತಿಯ ಗಾಯಗಳು ಆಗಿರಲಿಲ್ಲ. ಕತ್ತಿನ ಸುತ್ತಲು ಹಗ್ಗದಿಂದ ತರಚಿಕೊಂಡಿರುವ ಗುರುತುಗಳಿದ್ದರು ನಾಲಿಗೆ ಹೊರಕ್ಕೆ ಬಂದಿರಲಿಲ್ಲ, ಹಾಗಾಗಿ ನೇಣು ಹಾಕಿಕೊಂಡಿರುವ ಸಾಧ್ಯತೆಗಳು ಕಡಿಮೆ. ಯಾವುದೇ ರೀತಿಯ ವಿಷ , ಹಾಲ್ಕೊಹಾಲ್ ಸಹ ದೇಹಕ್ಕೆ ಸೇರಿಲ್ಲ.... ಎಂಬುದಾಗಿ ವರದಿಯಲ್ಲಿ ತಿಳಿಸಲಾಗಿತ್ತು. ಪೊಲೀಸರಿಗೆ ಉಳಿದುಕೊಂಡಿದ್ದ ಒಂದೇ ಒಂದು ಸಂದೇಹವೆಂದರೆ.....? ಹೆಣ ಮಂಚದ ಮೇಲೆ ನಿಂತಿದ್ದಿದ್ದುದ್ದು. ಹಗ್ಗ ನೈಲಾನ್ ಹಗ್ಗವಾಗಿರುವುದರಿಂದ ದೇಹದ ಬಾರಕ್ಕೆ ನಿಧಾನವಾಗಿ ಕೆಳಕ್ಕೆ ಬಂದಿರಬೇಕು....? ಇದು ಹತ್ಯೆಯೊ....? ಆತ್ಮಹತ್ಯೆಯೊ....? ಪೊಲೀಸರನ್ನು ಕಾಡತೊಡಗಿತು.

ಅವಳ ತಂದೆ ತಾಯಿ ಆಂಧ್ರಪ್ರದೇಶದಿಂದ ಓಡಿಬಂದು ಗೋಳಾಡುತ್ತಾ ಹೆಣವನ್ನು ತೆಗೆದುಕೊಂಡು ಊರಿಗೆ ಹೊರಟುಹೋದರು. ಅವರ ಹೇಳಿಕೆಯ ಪ್ರಕಾರ

ಅವರಿಗೆ ಅನು ಏಕೈಕ ಪುತ್ರಿಯಾಗಿದ್ದು ಸಾಕಷ್ಟು ಜಮೀನುದಾರರು. ಒಬ್ಬಳೆ ಹೆಣ್ಣುಮಗಳನ್ನು ವೈದ್ಯಕೀಯ ವಿಜ್ಞಾನ ಓದಿಸಲು ಬೆಂಗಳೂರಿಗೆ ಕಳುಹಿಸಿಕೊಟ್ಟಿದ್ದರು. ಬೆಂಗಳೂರಿನಲ್ಲಿ ಯಾವುದೇ ತೊಂದರೆ ಇರುವುದಿಲ್ಲ, ತಮ್ಮ ಮಗಳು ಸುರಕ್ಷಿತವಾಗಿ ಇರುತ್ತಾಳೆಂದು ಕಳುಹಿಸಿಕೊಟ್ಟಿದ್ದಾಗಿ ಹೇಳಿದರು. ನಿಮಗೆ ಯಾರಾದರು ಸಂದೇಹ ಬರುವಂತಹ ಜನರು ಹೊರಗಡೆ ಅಥವಾ ನಿಮ್ಮ ಸಂಬಂಧಿಗಳಲ್ಲಿ ಇದ್ದಾರೆಯೆ.....?'' ಎಂದು ಕೇಳಿದಾಗ ಯಾರಿದ್ದಾರೊ ಯಾರಿಲ್ಲವೊ.... ನಮ್ಮ ಮಗಳಂತು ಹಿಂದಕ್ಕೆ ಬರುವುದಿಲ್ಲವಲ್ಲ ಎಂದು ದುಃಖಿಸುತ್ತ ಗೋಳಾಡುತ್ತ ಹೊರಟುಹೋಗಿದ್ದರು.

ಮರುದಿನ ಪತ್ರಿಕೆಗಳಲ್ಲಿ ''ನಗರದಲ್ಲಿ ಮೆಡಿಕಲ್ ವಿದ್ಯಾರ್ಥಿನಿಯ ಹತ್ಯೆ'' ಎಂದು ಪ್ರಕಟವಾಗಿತ್ತು. ಪತ್ರಿಕೆಯವರು ಇದು ಹತ್ಯವೊ ಆತ್ಮಹತ್ಯವೊ ಎಂದು ಪೊಲೀಸರನ್ನು ಪ್ರಶ್ನಿಸಿದಾಗ ಎರಡಕ್ಕೂ ಚಾನ್ಸ್ ಇದೆ. ಇನ್‌ವೆಸ್ಟಿಗೇಷನ್ ನಡಿಯಿತಾಯಿದೆ, ಎಂದು ತಪ್ಪಿಸಿಕೊಂಡಿದ್ದರು. ಮನೆ ಒಳಕ್ಕೆ ಯಾರೂ ಹೋಗಿಲ್ಲದ ಸೂಚನೆಗಳು ಸದ್ಯಕ್ಕೆ ಕಾಣುತ್ತಿದ್ದು ಇದು ಆತ್ಮಹತ್ಯವೆ ಇರಬೇಕು ಎಂದುಕೊಂಡರು. ಆದರೆ ಅವಳು ಏನಾದರು ಬರೆದಿಡಬೇಕಿತ್ತಲ್ಲ....? ಐದು ಹತ್ಯಗಳಲ್ಲಿ ಒಂದು ಹತ್ಯ ನಿಗೂಢವಾಗಿಯೆ ಉಳಿದುಬಿಡುತ್ತದೆ. ಇದು ಪೊಲೀಸರ ಅನುಭವ. ಆದರೂ ಬೆಂಗಳೂರಿನ ಪೊಲೀಸರು ನಿಗೂಢಗಳನ್ನು ಭೇದಿಸುವುದರಲ್ಲಿ ನಿಸ್ಸೀಮರು.

***

ವಿಷಯ ಕೇಳಿದ ಕೃತಿಕಾ ಮತ್ತು ರೂಪಾಳ ಪೋಷಕರು ಬೆಂಗಳೂರಿಗೆ ಬಂದು ಇಬ್ಬರನ್ನು ಆ ಮನೆಯಿಂದ ಬಿಡಿಸಿ ಕಾಲೇಜ್ ಹಾಸ್ಟಲಿಗೆ ಒಗೆದುಬಿಟ್ಟರು. ಪೋಷಕರು ದೂರವಿದ್ದು ಹೆಣ್ಣು ಮಕ್ಕಳು ಪ್ರತ್ಯೇಕವಾಗಿ ಮನೆಗಳಲ್ಲಿ ವಾಸಿಸುವುದು ಬೆಂಗಳೂರಿನಲ್ಲಿ ಸುರಕ್ಷಿತವಲ್ಲ ಎಂದು ತಿಳಿದುಕೊಂಡ ಪೋಷಕರು ಅವರಿಗೆ ನೀಡಿದ್ದ ವಿಶೇಷ ಸವಲತ್ತುಗ್ಗಳನ್ನೆಲ್ಲ ಮುಟ್ಟುಗೋಲಾಕಿಕೊಂಡು ಎಲ್ಲಾ ಹೆಣ್ಣುಮಕ್ಕಳಂತೆ ಹಾಸ್ಟೆಲಿನಲ್ಲಿ ಇರುವಂತೆ ಆಜ್ಞೆ ಮಾಡಿದರು. ಕಾಲೇಜು, ಹಾಸ್ಟಲು ಎರಡನ್ನು ಬಿಟ್ಟು ಬೇರೆಯಾವುದೇ ಚಟುವಟಿಕೆಗಳು ಇರಬಾರದು. ಯಾವುದಕ್ಕೂ ಒಳ್ಳೆಯದೆಂದು ಒಂದು ಮೊಬೈಲ್ ಫೋನ್ ಮಾತ್ರ ಕೊಟ್ಟು ತಿಂಗಳಿಗೆ ಎಷ್ಟು ಹಣ ಬೇಕೊ ಅಷ್ಟು ಮಾತ್ರ ಕಳುಹಿಸುವುದಾಗಿ ತೀರ್ಮಾನಿಸಿದರು.

ಅನು ಸಾವು ಕಾಲೇಜಿಗೆ ದೊಡ್ಡ ಶಾಕ್ ಆಗಿ ಪರಿಣಮಿಸಿತ್ತು. ಅಮರನಾಥ ಮತ್ತು ಸವ್ಯ ಗಾಬರಿಯಾಗಿಬಿಟ್ಟರು. ವಿಷಯ ಹರ್ಷನಿಗೂ ತಿಳಿಯಿತು. ಪೊಲೀಸರು ಕಾಲೇಜಿಗೆ ಬಂದು ಪ್ರಿನ್ಸಿಪಾಲ್, ಪ್ರೊಫೆಸರ್ಸ್, ಕಾಲೇಜ್ ಸಿಬ್ಬಂಧಿ ಮತ್ತು ಅನು ತರಗತಿಯ ವಿದ್ಯಾರ್ಥಿಗಳನ್ನು ಪ್ರಶ್ನಿಸಿ ಹೋಗಿದ್ದರು. ರಿಕಿ ರೊನಾಲ್ಡ್ ಮತ್ತು ಅವನ

ಗ್ಯಾಂಗ್ ಏನಾದರು ಮಾಡಿರಬಹುದೆ.....? ಎನ್ನುವ ಸಂದೇಹ ಹರ್ಷ ಮತ್ತು ಅವನ ಗೆಳೆಯರಿಗೆ ಬಂದರು ಇರಲಾರದು ಎಂದುಕೊಂಡು ಸುಮ್ಮನಾದರು.

ಅನು ಸಾವು ಬೆಂಗಳೂರು ಪೊಲೀಸರಿಗೆ ನಿದ್ದೆ ಕೆಡಿಸಿತ್ತು. ಬೆಂಗಳೂರಿನಲ್ಲಿ ಹತ್ಯೆ, ಆತ್ಮಹತ್ಯೆ , ಕೊಲೆ, ದರೋಡೆ, ಸುಲಿಗೆ, ಅಪಘಾತ ಹೀಗೆ ಎಲ್ಲವೂ ದಿನನಿತ್ಯದ ರಂಪಾಟವಾಗಿದ್ದು , ಎಲ್ಲವನ್ನು ನಗರದ ಬದುಕು ನುಂಗಿ ನೀರು ಕುಡಿದುಬಿಡುತ್ತಿತ್ತು. ಆದರೆ ಪೊಲೀಸರು, ಗೂಂಡಾಗಳು ಮತ್ತು ರಾಜಕಾರಣಗಳ ನಡುವಿನ ಸಂಬಂಧಗಳು ಮತ್ತು ಪೊಲೀಸರ ಚಾಣಾಕ್ಷತನಗಳಿಂದ ಯಾವುದೊ ಒಂದು ಮೂಲದಿಂದ ದಿಢೀರನೆ ಹಂತಕರ ಜಾಡು ತೆರೆದುಕೊಂಡುಬಿಡುತ್ತಿತ್ತು. ಬೆಂಗಳೂರಿನ ಪೊಲೀಸ್ ವಿಭಾಗದಲ್ಲಿ ಸಾಕಷ್ಟು ಚಾಣಾಕ್ಷ ಪೊಲೀಸ್ ಅಧಿಕಾರಿಗಳು ಕೆಲಸ ಮಾಡುತ್ತಿದ್ದು ಹಲವು ವಿಶಿಷ್ಟ ನಿಗೂಢ ಕೇಸುಗಳಲ್ಲಿ ಅದನ್ನು ನಿರೂಪಿಸಿದ್ದಾರೆ.

ಅದು ಅಂದಿನ ಚಾರ್ಲ್ಸ್ ಶೋಭರಾಜ್ ಕೇಸಾಗಬಹುದು... ರಾಜೀವ್ ಗಾಂಧಿ ಯನ್ನು ಹತ್ಯೆ ಮಾಡಿ ಸಿಕ್ಕಿಕೊಂಡ ಶಿವರಸನ್ ಕೇಸಾಗಬಹುದು... ಮುಂಬಯಿ ಅಥವಾ ಬೆಂಗಳೂರಿನ ಹತ್ತು ಹಲವಾರು ಅಂಡರ್‌ವರ್ಲ್ಡ್, ಮಾಫಿಯಾ, ಸುಫಾರಿ ನೀಡುವ ಗ್ಯಾಂಗ್‌ಗಳಾಗಿರಬಹುದು, ಕತ್ತು ಸೀಳಿ ಕೊಲೆ ಮಾಡುವ ದಂಡು ಪಾಳ್ಯದ ಗ್ಯಾಂಗ್‌ಗಳಾಗಿರಬಹುದು. ಹೀಗೆ ಒಂದಲ್ಲ ಒಂದು ಕೇಸಿನಲ್ಲಿ ಬೆಂಗಳೂರಿನ ಪೊಲೀಸರು ತಮ್ಮ ಚಾಣಾಕ್ಷತೆಯನ್ನು ಮೆರೆದಿದ್ದಾರೆ.

ಮೊನ್ನೆ ಮೊನ್ನೆಯವರೆಗೆ ಜೊತೆಯಲ್ಲಿದ್ದ ಅನು ಇಂದು ನಮ್ಮ ನಡುವೆ ಇಲ್ಲ ಎನ್ನುವುದನ್ನು ತಿಳಿದುಕೊಂಡರೆ ಕೃತಿಕಾ ಮತ್ತು ರೂಪಾಳ ಎದೆಗಳು ನಡುಗಿ ಹೋಗುತ್ತವೆ. ಆ ರಾತ್ರಿ ಅನು ಒಬ್ಬಳೆ ಇದ್ದ ರಾತ್ರಿ ಏನು ನಡೆದಿರಬಹುದು....? ಅವಳಿಗೆ ಆತ್ಮಹತ್ಯೆ ಮಾಡಿಕೊಳ್ಳುವಂತಹ ವಿಪತ್ತಾದರು ಯಾವುದು....? ಮೊದಲು ಕಾಲೇಜಿಗೆ ಸೇರಿದಾಗ ಒಂದಷ್ಟು ಸೀನಿಯರ್ ವಿದ್ಯಾರ್ಥಿಗಳು ಅವಳನ್ನು ಎಲ್ಲರ ಮುಂದೆ ನೀಲ್‌ಡೌನ್ ಮಾಡಿದ್ದು, ಚುಡಾಯಿಸಿದ್ದನ್ನು ಬಿಟ್ಟರೆ ಮತ್ತೇನು ನಡೆದಿರಲಿಲ್ಲ. ಅವಳು ಯಾವಾಗಲು ಯಾವ ಅನೈತಿಕ ಸಂಬಂಧಗಳನ್ನು ಇಟ್ಟುಕೊಂಡಿರಲಿಲ್ಲ. ಮನೆ ಒಳಗೆ ಯಾರೂ ಬಂದಿಲ್ಲ ಎನ್ನುತ್ತದೆ ಪೊಲೀಸ್ ಶೋಧನೆ. ಹಾಗಾದರೆ ಇವಳ ಸಾವು ಹೇಗಾಯಿತು....? ಇದೆ ವಿಷಯವನ್ನು ಪೊಲೀಸರ ಮುಂದೆಯೂ ಕೃತಿಕಾ ಮತ್ತು ರೂಪ ತೋಡಿಕೊಂಡಿದ್ದಾರೆ.

ಇನ್ನು ಅವಳ ಮನೆಯ ಬಗ್ಗೆ, ಅವಳ ಸಂಬಂಧಿಗಳ ಬಗ್ಗೆ ಅವರಿಗೆ ತಿಳಿದಿರುವುದು ಅಷ್ಟಕ್ಕಷ್ಟೆ. ಕೃತಿಕಾ ಮತ್ತು ರೂಪಾಳ ತಲೆಗಳು ಚಿಟ್ಟು ಹಿಡಿದುಹೋಗಿರುವುದರ ಜೊತೆಗೆ

ಅವರ ಮನಸ್ಸು ಸಾಕಷ್ಟು ಅಘಾತಗೊಂಡಿತ್ತು. ಅನು ಸಾವಿನ ಬಗ್ಗೆ ಅವರಿಬ್ಬರು ಎಷ್ಟೇ ಪ್ರಯತ್ನಪಟ್ಟರು ಮರೆಯಲು ಆಗಲಿಲ್ಲ. ಯಾಕೊ, ಬೆಂಗಳೂರು ಅವರಿಗೆ ನಿಗೂಢವಾಗಿ ಕಾಣುತ್ತಿತ್ತು. ಸಾಯಂಕಾಲವಾಗಿದ್ದ ಹಾಸ್ಟೆಲು ಬಿಟ್ಟು ಹೊರಗಡೆ ಹೋಗಲು ಹೆದರುಕೊಂಡುಬಿಟ್ಟಿದ್ದರು. ಗೆಳೆಯರ ಜೊತೆಗೆ ಎಂದಿನಂತೆ ಬೆರೆಯಲು ಭೀತಿಗೊಂಡಿದ್ದರು. ಇನ್ನು ಮೇಲೆ ಹೊರಗಿನ ರಾಜ್ಯಗಳ ವಿದ್ಯಾರ್ಥಿಗಳ ಜೊತೆಗೆ ಯಾವುದೇ ಸಂಬಂಧಗಳನ್ನು ಇಟ್ಟುಕೊಳ್ಳುವುದು ಬೇಡವೆಂದು ತೀರ್ಮಾನಿಸಿದರು. ಎಲ್ಲರಿಗಿಂತ ಬೆಂಗಳೂರಿನ ಸ್ಥಳೀಯ ವಿದ್ಯಾರ್ಥಿ ವಿದ್ಯಾರ್ಥಿನಿಯರೆ ವಾಸಿ ಎಂದುಕೊಂಡರು.

ಹರ್ಷನ ಬೆಲ್ಟಿನಿಂದ ಏಟುಗಳನ್ನು ತಿಂದುಹೋಗಿದ್ದ ರಿಕಿ ರೊನಾಲ್ಡ್ ಆ ಕಾಲೇಜಿನ ಸುತ್ತಮುತ್ತಲು ಎಲ್ಲೂ ಕಾಣಿಸಿಕೊಳ್ಳಲಿಲ್ಲ. ಹರ್ಷ ಮುದುಕಪ್ಪನ ಮನೆ ಖಾಲಿ ಮಾಡಿಸಿದ ವಿಷಯದಲ್ಲಿ ಸಂದೇಹಪಟ್ಟಂತೆ ಪೊಲೀಸರು ಅವನನ್ನು ಸಂಧಿಸಲು ಬರಲಿಲ್ಲ. ಆದರೆ ಒಬ್ಬ ಪೇದೆ ಬಂದು ಹಲ್ಲುಗಿಂಜಿ ಹಣ ತೆಗೆದುಕೊಂಡು ಹೋಗಿದ್ದ. ಜೊತೆಗೆ ಹೋಗುವಾಗ ಹರ್ಷನನ್ನು ಗುಣಗಾನ ಮಾಡಿದ್ದ. ಅದಾದ ಕೆಲವೇ ದಿನಗಳಲ್ಲಿ ಪಕ್ಕದ ಬೀದಿಯಿಂದ ಇನ್ನೊಬ್ಬರು ಬಂದು ತನ್ನ ಮನೆಯಲ್ಲಿ ಬಾಡಿಗೆಗೆ ಇರುವವರು ಬಾಡಿಗೆ ಕೊಡದೆ ಮನೆ ಖಾಲಿಯೂ ಮಾಡದೆ, ಈ ಮನೆ ನನ್ನದೆ ಎಂದು ದಬಾಯಿಸಿ ಕಳುಹಿಸಿರುವುದಾಗಿ ಮತ್ತು ನೀನು ಯಾರನ್ನು ಕರೆದುಕೊಂಡು ಬರ್ತಿಯೋ ಬಾ.... ನೋಡೋಣ ಎನ್ನುತ್ತಾನೆ ಎಂದು ಹರ್ಷನಿಗೆ ತಿಳಿಸಿ ಮನೆ ಖಾಲಿ ಮಾಡಿಸಿಕೊಡುವಂತೆ ದುಂಬಾಲು ಬಿದ್ದಿದ್ದರು.

ಹರ್ಷ ಇದನ್ನೇ ಒಂದು ವ್ಯಾಪಾರ ಮಾಡಿಕೊಳ್ಳಬಹುದಲ್ಲ ಎಂದು ಯೋಚಿಸುತ್ತ ಅದೆ ರಾತ್ರಿ ಒಂದಿಬ್ಬರು ಬಂಟರನ್ನು ಕರೆದುಕೊಂಡೋಗಿ ಬಾಗಿಲುತಟ್ಟಿ ಮನೆ ಒಳಕ್ಕೆ ನುಗ್ಗಿ ನಿಂತುಕೊಂಡ. ಹೇಳುವುದನ್ನೆಲ್ಲ ಅವನ ಬಂಟರೆ ಹೇಳಿದರು. ಇಪ್ಪತ್ನಾಲ್ಕು ಗಂಟೆ ಟೈಂ ಕೊಟ್ಟಿರುವುದಾಗಿ ಅದೂ ಕೂಡ ಪತ್ನಿ ಮತ್ತು ಮಕ್ಕಳ ಮುಖನೋಡಿ ಕೊಟ್ಟಿರುವುದಾಗಿ ಹೇಳಿ ಮನೆ ಹೊರಕ್ಕೆ ಬಂದಿದ್ದರು. ಹರ್ಷ ಸಿನಿಮಾದಲ್ಲಿ ಬರುವ ಬಾರಿ ದೊಡ್ಡ ಖಳನಾಯಕನಂತೆ ತುಟಿಬಿಚ್ಚಲಿಲ್ಲ , ಸುಮ್ಮನೆ ನೋಡುತ್ತ ನಿಂತಿದ್ದ. ಮರುದಿನ ಬೆಳಗ್ಗೆಯೆ ಮನೆ ಮುಂದೆ ಮೆಟಾಡೋರ್ ಬಂದು ನಿಂತುಕೊಂಡಿತು. ಸಾಮಾನುಗಳನ್ನೆಲ್ಲ ತುಂಬಿಕೊಂಡು ಯಾರಿಗೂ ಹೇಳದೆ ಹೊರಟುಹೋದರು. ಸಾಯಂಕಾಲ ಮನೆಯ ಒಡೆಯ ಹಣದ ಸಮೇತ ಬಂದು ಹರ್ಷನನ್ನು ನೋಡಿಹೋಗಿದ್ದರು. ಮರುದಿನ ಪೊಲೀಸ್ ಪೇದೆ ಎಂದಿನಂತೆ ಮನೆಯ ಹತ್ತಿರಕ್ಕೆ ಬಂದು ಹಲ್ಲುಗಿಂಜಿದ.

ದಿನಗಳು ಉರುಳುತ್ತಿದ್ದಂತೆ ಸುತ್ತಮುತ್ತಲು ಬೀದಿಗಳಲ್ಲಿನ ಜನರೆಲ್ಲ ಯಾವುದೇ ಸಣ್ಣಪುಟ್ಟ ತೊಂದರೆಗಳಾದರು ಹರ್ಷನನ್ನು ನೋಡಲು ಬರತೊಡಗಿದರು. ಹರ್ಷ ಬಂದವರಿಗೆಲ್ಲ ಸಮಾಧಾನ ಮಾಡಿ ತನ್ನ ಕೈಯಲ್ಲಾದ ಸಹಾಯವನ್ನು ಮಾಡತೊಡಗಿದ. ವಿದ್ಯುತ್ ಕಛೇರಿ, ಕಾರ್ಪೊರೇಷನ್ ಕಛೇರಿ, ನೀರಿನ ವಿಭಾಗ ಹೀಗೆ ಆ ಬೀದಿಗಳಲ್ಲಿ ಏನೇ ತೊಂದರೆಯಾದರು ಸಂಬಂಧಪಟ್ಟವರಿಗೆ ತಿಳಿಸಿ, ಇಲ್ಲ ಅವರನ್ನು ಖುದ್ದಾಗಿ ಕರೆದುಕೊಂಡು ಬಂದು ಕೆಲಸಗಳನ್ನು ಮಾಡಿಸಿಕೊಡುತ್ತಿದ್ದ.

ಹರ್ಷನ ವಿಷಯ ತಿಳಿದ ರಾಜಕೀಯ ಪಕ್ಷಗಳು ನಮ್ಮ ಪಕ್ಷಕ್ಕೆ ಸದಸ್ಯರಾಗಿ, ನಮ್ಮ ಪಕ್ಷಕ್ಕೆ ಸದಸ್ಯರಾಗಿ ಎಂದು ಅವನ ಹಿಂದೆ ಬಿದ್ದಿದ್ದರು. ಹರ್ಷ ಮುಂದಾಲೋಚನೆ ಮಾಡಿ ದೇಶದ ಒಂದು ಮುಖ್ಯ ಪಕ್ಷದಲ್ಲಿ ತನ್ನ ಬಂಟರುಗಳ ಸಮೇತ ಒಂದು ದಿನ ಸದಸ್ಯನಾಗಿಬಿಟ್ಟು ಅದೇ ಬಡಾವಣೆಯಲ್ಲಿ ಕಾರ್ಪೊರೇಟರ್ , ಬೇರೆ ಪಕ್ಷದವನಾಗಿದ್ದರು, ಹರ್ಷನ ಬೆಳವಣಿಗೆ ಮತ್ತು ಪ್ರಖ್ಯಾತಿಯನ್ನು ನೋಡಿ ಹೆದುರಿಕೊಂಡು ಹರ್ಷ ಹೇಳಿದ್ದನ್ನೆಲ್ಲ ಮಾಡತೊಡಗಿದ.

ಈ ನಡುವೆ ಹರ್ಷ ಮನೆಯಲ್ಲಿ ತನ್ನ ತಂದೆ ಇಟ್ಟಿದ್ದ ದಾಖಲೆಗಳನ್ನೆಲ್ಲ ಒಂದು ದಿನ ಕುಳಿತುಕೊಂಡು ನೋಡುತ್ತಿದ್ದಾಗ ಆಟೋ ಮೇಲೆ ವಿಮೆ ಮಾಡಿರುವ ಪತ್ರ ದೊರಕಿತು. ಹರ್ಷ ಪತ್ರವನ್ನು ವಿಮೆ ಕಛೇರಿಗೆ ತಲುಪಿಸಿ, ಪೊಲೀಸ್ ಠಾಣೆಯಿಂದ ಬೇಕಾದ ವಿವರಗಳನ್ನು ಕೊಡಿಸಿದ. ಆಟೊ ವಿಮೆ ಮೂವತ್ತು ಸಾವಿರ ರೂಪಾಯಿಗಳು ದೊರಕಿತು. ಅದರ ಜೊತೆಗೆ ಇನ್ನಷ್ಟು ಹಣ ಸೇರಿಸಿ ಆಟೊ ಒಂದನ್ನು ಕೊಂಡುಕೊಂಡು ಬಂದ. ಆಟೊ ಓಡಿಸಲು ಒಬ್ಬ ಚಾಲಕನನ್ನು ಇಟ್ಟ. ಆಟೊ ಚಾಲಕ ಪ್ರತಿದಿನ ಸಾಯಂಕಾಲ ನೂರು ರೂಪಾಯಿಗಳನ್ನು ಕೊಟ್ಟು ಹೋಗುತ್ತಿದ್ದ.

ಹರ್ಷನಿಗೆ ವೈದ್ಯಕೀಯ ವಿಜ್ಞಾನವನ್ನು ಮುಂದುವರಿಸಿದರೆ ಹೇಗೆ ಎನ್ನುವ ಆಲೋಚನೆ ಬಂದರು ಬೇಡ ರಾಜಕೀಯದಲ್ಲಿ ಒಂದು ಕೈ ನೋಡೆ ಬಿಡೋಣ ಎಂದುಕೊಂಡು ನೆಲಮಟ್ಟದಿಂದ ಬೆಳೆಯುವ ವಿಧಾನಗಳ ಬಗ್ಗೆ ಯೋಚಿಸತೊಡಗಿದ.

* * *

ಮೊದಲನೆ ವರ್ಷದಲ್ಲಿ ಯಾವ ವಿಷಯಗಳು ಪೆಂಡಿಂಗ್ ಇಲ್ಲದ ಕಾರಣ ಕೃತಿಕಾ ಮತ್ತು ರೂಪ ಎರಡನೇ ವರ್ಷಕ್ಕೆ ಕಾಲಿಟ್ಟಿದ್ದರು. ಆದರೆ ಅನು ಕೃತಿಕಾ ಮತ್ತು ರೂಪಾಳನ್ನು ಬಿಟ್ಟು ಹಿಂದಿರುಗಲಾರದ ಲೋಕಕ್ಕೆ ಹೊರಟುಹೋಗಿದ್ದಳು. ಹರ್ಷ ತನ್ನ ತಂದೆಯ ಸಾವಿನಿಂದ ಕಾಲೇಜು ತೊರೆದು ಹೊಟ್ಟೆ ಹೊರೆಯಲು ಜನರ ನಡುವೆ ಪೈಪೋಟಿಗೆ ಇಳಿದಿದ್ದ. ಕಾಲೇಜಿನಲ್ಲಿ ಎರಡನೇ ವರ್ಷದ ಪಾಠಗಳು ಶುರುವಾಗಿದ್ದವು.

ಕೃತಿಕಾ ಮತ್ತು ರೂಪ ಹೊರಗಿನ ರಾಜ್ಯಗಳ ವಿದ್ಯಾರ್ಥಿಗಳಿಂದ ಆದಷ್ಟು ದೂರವಾಗಿರಲು ಪ್ರಯತ್ನಿಸುತ್ತಿದ್ದರು. ಪ್ರತಿದಿನವು ತರಗತಿಯಲ್ಲಿ ಎಲ್ಲಾ ವಿದ್ಯಾರ್ಥಿಗಳು ಹೆಚು ಕಡಿಮೆ ಅವರದೇ ಆದ ನಿಗಧಿತ ಬೆಂಚುಗಳಲ್ಲಿ ಕುಳಿತುಕೊಳ್ಳುತ್ತಿದ್ದರು.

ರೂಪ ಮತ್ತು ಕೃತಿಕಾಳ ಹಿಂದೆ ಅನು ಆತ್ಮೀಯ ಗೆಳತಿಯಂತೆ, ಕುಚೇಷ್ಟೆ ಮಾಡುವ ಪ್ರಿಯತಮನಂತೆ, ಧೈರ್ಯ ತುಂಬುವ ಒಬ್ಬ ಗಂಡು ಹುಡುಗನಂತೆ ಜೊತೆಗಿದ್ದಳು. ಆ ರಾತ್ರಿ ಅವಳನ್ನು ಒಂಟಿಯಾಗಿ ಬಿಟ್ಟು ಹೋಗದೆ ಇದ್ದಿದ್ದರೆ ಬದುಕಿರುತ್ತಿದ್ದಳೊ ಏನೊ....? ಅನುಳನ್ನು ನೆನೆದುಕೊಂಡರೆ ಸಾಕು ಅವರಿಬ್ಬರಿಗೂ ದುಃಖ ಉಮ್ಮಳಿಸಿ ಬರುತ್ತಿತ್ತು. ಅನು ಸತ್ತ ದಿನದಿಂದಲೂ ನಿಂತಲ್ಲಿ ನಿಲ್ಲಲಾರದೆ ಕುಳಿತಲ್ಲಿ ಕುಳಿತುಕೊಳ್ಳಲಾರದೆ, ಊಟ ಮಾಡಲಾಗದೆ, ನಿದ್ದೆ ಮಾಡಲಾಗದೆ, ಇಬ್ಬರು ಸುಮಾರು ದಿನಗಳು ಚಡಪಡಿಸುತ್ತಿದ್ದರು. ಊಟದ ತಟ್ಟೆ ಮುಂದೆ ಕುಳಿತುಕೊಂಡಾಗ ಅವರ ಕೈಯನ್ನು ಅನು ಹಿಡಿದುಕೊಳ್ಳುವಂತೆ ಭಾಸವಾಗುತ್ತಿತ್ತು. ಅವರು ಹಾಸ್ಟಲಿಗೆ ಬಂದ ಮೇಲೆ ಎಷ್ಟೋ ದಿನಗಳು ತಮ್ಮ ಅಂದ ಚಂದದ ಬಗ್ಗೆ ಯೋಚಿಸಿದ್ದಾಗಲಿ, ಕನ್ನಡಿ ಮುಂದೆ ನಿಂತುಕೊಂಡು ತಮ್ಮ ಅಂಗಾಂಗಗಳನ್ನು ನೋಡಿಕೊಳ್ಳುವುದಾಗಲಿ, ಚೆನ್ನಾಗಿ ಡ್ರಸ್ ಮಾಡಿಕೊಳ್ಳುವುದಾಗಲಿ ಮರೆತೇ ಹೋಗಿದ್ದರು.

ಸುಮಾರು ಎರಡು ಮೂರು ತಿಂಗಳುಗಳಾದ ಮೇಲೆ ನಿಧಾನವಾಗಿ ಮಾಮೂಲಿ ಸ್ಥಿತಿಗೆ ಹಿಂದಿರುಗುತ್ತಿದ್ದರು. ಯಾಕೊ ಏನೊ ಕೃತಿಕಾ ಆಗಾಗ ಅಮರನಾಥನ ಮುಖವನ್ನು ದಿಟ್ಟಿಸಿ ನೋಡುತ್ತಿದ್ದಳು. ಅಮರನಾಥ ಇವಳಿಗೆ ಏನೊ ಆಗಿರಬೇಕು...? ಇಲ್ಲವೆಂದರೆ ನನ್ನನ್ನು ಯಾಕೆ ನೋಡುತ್ತಾಳೆ....? ಎಂದುಕೊಳ್ಳುತ್ತಿದ್ದ. ಸವ್ಯ ಯಾರ ಕೈಯಿಗೂ ದೊರಕದೆ ಎಲ್ಲಾ ಹುಡುಗಿಯರ ನಡುವೆ ಸೇರಿಕೊಂಡು ಅವರ ಬ್ಯಾಗುಗಳಲ್ಲಿನ ವಸ್ತುಗಳನ್ನೆಲ್ಲ ಕೋಳಿಯಂತೆ ಕೆದಕಿ ಸಾಧ್ಯವಾದರೆ ಅವರ ಬೆನ್ನು, ಭುಜದ ಮೇಲೆ ಪ್ಯಾಟ್‌ಮಾಡಿ ಆಗಾಗ ಅಂಗಾಂಗಗಳನ್ನು ತಿಳಿಯದಂತೆ ಸವರಿ ಸಾರಿ ಎನ್ನುತ್ತಿದ್ದ. ಸುಮ್ಮನಿದ್ದರೆ ಕೈಗಳನ್ನೇ ಹಿಡಿದುಕೊಂಡುಬಿಡುತ್ತಿದ್ದ.

ವಿದ್ಯಾರ್ಥಿಗಳು, ವಿದ್ಯಾರ್ಥಿನಿಯರು ಎನ್ನುವ ಭೇದಭಾವವಿಲ್ಲದೆ ಎಲ್ಲರೂ ಅಂಗಡಿಗಳ ಮುಂದೆ ಭುಜಕ್ಕೆ ಭುಜಗಳನ್ನು ತೊಡೆಗಳಿಗೆ ತೊಡೆಗಳನ್ನು ಒತ್ತಿಕೊಂಡು ಉದ್ದವಾದ ಗ್ಲಾಸುಗಳಲ್ಲಿ ಚಹ ಕುಡಿಯುತ್ತ ಇನ್ನೊಂದು ಕೈಯಲ್ಲಿ ಸಿಗರೇಟ್ ಸೇದುತ್ತಾ ಲೋಕವನ್ನೇ ಮರೆತು ಆಕಾಶದಲ್ಲಿ ಓಲಾಡುತ್ತಿದ್ದರು. ವಿದ್ಯಾರ್ಥಿಗಳು, ವಿದ್ಯಾರ್ಥಿನಿಯರನ್ನು ಹಿಂದೆ ಕೂರಿಸಿಕೊಂಡು ಹಸನಾದ ರಸ್ತೆಗಳಲ್ಲಿ ಏರು ತಗ್ಗುಗಳು ಇರಬಾರದೆ ಎಂದು ಬೆನ್ನಿನಲ್ಲಿ ತಮ್ಮ ಹೃದಯಗಳನ್ನು ಇಟ್ಟುಕೊಂಡು ವಾಹನಗಳನ್ನು ಓಡಿಸುತ್ತಿದ್ದರು.

ಕೆಲವು ವಿದ್ಯಾರ್ಥಿನಿಯರು ಮಧ್ಯದಲ್ಲಿ ಬ್ಯಾಗುಗಳನ್ನು ಇಟ್ಟುಬಿಟ್ಟರೆ ಹುಡುಗರ ದೇಹದಲ್ಲಿ ಚಲನೆಯೆ ಇಲ್ಲದಂತಾಗಿ ಮರಗಟ್ಟಿ ಹೋಗಿ ಬಿಡುತ್ತಿತ್ತು. ಎಲ್ಲಾ ಚೇಷ್ಟೆಗಳನ್ನು ಮೈಗೂಡಿಸಿಕೊಂಡಿದ್ದ ಸವ್ಯ ಯಾವುದೇ ಹುಡುಗಿಯ ಬಾಯಿಂದಲೂ ಐ ಲವ್‌ಯು ಎಂದು ಹೇಳಿಸಿಕೊಳ್ಳಬಾರದೆಂದು ತೀರ್ಮಾನಿಸಿದ್ದ. ಒಂದೆರಡು ಕೇಸುಗಳಲ್ಲಿ ರಾಕಿ ಕಟ್ಟಿಸಿಕೊಂಡು ಬೈಯ್ಯ, ಅಣ್ಣ ಎಂದು ಕರೆಸಿಕೊಂಡಿದ್ದ ಸವ್ಯ ತನ್ನ ಜೀವನದಲ್ಲಿ ಅವು ಅತಿ ವಿಷಾದ ದಿನಗಳೆಂದು ದುಃಖಪಟ್ಟಿದ್ದ. ಅದಾದ ನಂತರ ರಾಖಿ ದಿನ ಕಾಲೇಜಿಗೆ ಚಕ್ಕರ್ ಹೊಡೆದು ಮನೆಯಲ್ಲೆ ಇದ್ದುಬಿಡುತ್ತಿದ್ದ.

ಚಿತ್ರವಿಚಿತ್ರವಾಗಿ ಡ್ರಸ್ ಮಾಡಿಕೊಂಡು, ವಿಧವಿಧವಾಗಿ ಕೂದಲನ್ನು ಕತ್ತರಿಸಿಕೊಂಡು ವಿದ್ಯಾರ್ಥಿಗಳು ಕಾಲೇಜಿಗೆ ಬರುತ್ತಿದ್ದರು. ಒಂದು ಗುಂಪಿನವರು ಇನ್ನೊಂದು ಗುಂಪಿನವರನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಿದ್ದರು. ಮುಖ್ಯವಾಗಿ ಜಗಳಗಳಾದಾಗ ಒಬ್ಬರನ್ನೊಬ್ಬರು ವಿಚಿತ್ರ ಹೆಸರುಗಳಿಂದ ಬೈಯ್ಯುತ್ತಿದ್ದರು ಊಸಾ.... ಮೂಸಾ .... ಬೋಡಾ ... ಮಿಂಡ್ರಿ .... ಒತ್ಲಾ .... ಪಂಡು...... ಕಿರಿಕ್.... ಮಬ್ಬು... ಛತ್ರಿ..... ಪಂಟು.... ತಗಡು......... ಡಬ್ಬ....ಹೀಗೆ ಇದೆಲ್ಲವನ್ನು ಪಿಯುಸಿಯಲ್ಲೆ ಮುಗಿಸಿಕೊಂಡು ಇಲ್ಲಿಯವರೆಗೂ ಬಂದಿರುವವರು ತೀರ ಕಡಿಮೆ. ಮೇಲಿನ ವಿಷಯಗಳಲ್ಲಿ ಡಿಗ್ರಿ, ಡಾಕ್ಟರೇಟ್ ಪಡೆದವರೆಲ್ಲ ಪಿಯುಸಿಯಲ್ಲೆ ಮಲಗಿಕೊಂಡುಬಿಟ್ಟಿದ್ದರು. ಎಲ್ಲವನ್ನು ಮೀರಿ ವೈದ್ಯಕೀಯ ಕಾಲೇಜುವರೆಗೆ ಬಂದವರೆಂದರೆ ಸವ್ಯ, ಹರ್ಷ, ಅಮರನಾಥ, ಇಂತಹವರು ಮಾತ್ರ. ಉಳಿದವರು ಭಯಂಕರ ಕುಡಿಮಿಗಳು. ಮತ್ತು ಓದಲೆಂದು ಹುಟ್ಟಿದ ಕುಟುಂಬಗಳಿಂದ ಬಂದವರು. ಇನ್ನುಳಿದವರು ದೇಣಿಗೆ ಕೊಟ್ಟು ಸೇರಿಕೊಂಡ ಭಯಂಕರ ಐಶ್ವರ್ಯವಂತರು.

ಹರಟೆ ಹೊಡೆಯುವುದರಲ್ಲಿ ತರಗತಿಗಳಲ್ಲಿ ಮೊದಲ ಸ್ಥಾನ ಪಡೆದವನೆಂದರೆ ಸವ್ಯ. ಕೃತಿಕಾ, ರೂಪ, ಅಮರನಾಥ ಇನ್ನಿತರರನ್ನು ಕೂರಿಸಿಕೊಂಡು ಆಗಾಗ ತನ್ನ ಪಿ.ಯು.ಸಿ.ಗೆಳೆಯರ ಕಥೆಗಳನ್ನು ಹೇಳುತ್ತಿದ್ದ. ‘‘ಒಮ್ಮೆ ಏನಾಯಿತೆಂದರೆ- ನಾನು ಪಿ.ಯು.ಸಿ. ಓದುತ್ತಿದ್ದಾಗ ನಮ್ಮ ಕ್ಲಾಸಿನಲ್ಲಿ ಹುಡುಗ ಹುಡುಗಿಯರ ನಡುವೆ ಬೆಳಗ್ಗೆ ಪ್ಯಾಚಿಂಗಾದರೆ ಸಾಯಂಕಾಲ ಬ್ರೇಕಿಂಗ್ ಆಗುತ್ತಿತ್ತು. ಯಾತಕ್ಕೆ ಕೋಪಿಸಿಕೊಳ್ಳುತ್ತಿದ್ದವೊ....? ಯಾತಕ್ಕೆ ಜಗಳವಾಡುತ್ತಿದ್ದವೊ....? ಒಂದೂ ಅರ್ಥವಾಗುತ್ತಿರಲಿಲ್ಲ.. ನಾಲ್ಕೈದು ಹುಡುಗರು ಹುಡುಗಿಯರು ಯಾವುದಾದರು ಸಿನಿಮಾಗೊ.... ಪಾರ್ಕಿಗೊ ಇಲ್ಲ ಪಿಕ್‌ನಿಕ್‌ಗೊ ಹಣ ಮೊಬಲೈಜ್ ಮಾಡಿ ಹೋಗುತ್ತಿದ್ದೆವು. ಒಂದೊಂದು ಹುಡುಗಿಗೆ ಒಬ್ಬೊಬ್ಬ ಹುಡುಗನನ್ನು ಜೋಡಿ ಮಾಡಿಕೊಳ್ಳುತ್ತಿದ್ದೆವು. ಪಾರ್ಕಾದರೆ ತುಂಬಾ ಖುಷಿ. ಕೈ ಕೈ ಹೆಣೆದುಕೊಂಡು, ಭುಜದ

ಮೇಲೆ ಕೈ ಹಾಕಿಕೊಂಡು ಕೆನ್ನೆ, ಮುಖ ಸವರುತ್ತ ಓಡಾಡುತ್ತಿದ್ದೆವು. ಸುತ್ತಲು ಯಾರೂ ಬರುತ್ತಾರೊ.... ಯಾರು ನೋಡಿಬಿಡುತ್ತಾರೊ ಒಂದೇ ಭಯ.

- ಒಂದು ದಿನ ಸಾಯಂಕಾಲ ಮಾತನಾಡಿಕೊಂಡಂತೆ ಕ್ಲಾಸಿಗೆ ಚಕ್ಕರ್ ಹೊಡೆದು ಐದು ಜೋಡಿಗಳು ಬನ್ನೇರುಘಟ್ಟಕ್ಕೆ ಹೋಗಬೇಕಾಗಿತ್ತು. ಐವರು ಹುಡುಗರು ನಾಲ್ಕು ಹುಡುಗಿಯರು ಬಂದರು. ಬೆಳಗ್ಗೆ ಹತ್ತು ಗಂಟೆಯಾದರು ಒಂದು ಹುಡುಗಿ ಬರಲೇ ಇಲ್ಲ. ನಮ್ಮ ಕ್ಲಾಸಿನ ಬೇರೆ ಹುಡುಗಿ ಒಬ್ಬಳು ಅದೇ ಹೊತ್ತಿಗೆ ಬಂದಳು. ಬಂದಿದ್ದ ಅವಳನ್ನು ಕನ್‌ವಿನ್ಸ್ ಮಾಡಿ ಆ ಹುಡುಗನಿಗೆ ಸೆಟ್ ಮಾಡಿ ಕರೆದುಕೊಂಡು ಹೊರಟೆವು. ಸಾಯಂಕಾಲದವರೆಗೂ ಸುತ್ತಾಡಿ ಎಂಜಾಯ್ ಮಾಡಿ ಜಾಲಿಯಾಗಿ ಮನೆಗೆ ಬಂದೆವು.

ಮರುದಿನ ಅಸಲಿ ಹುಡುಗಿಗೆ ವಿಷಯ ತಿಳಿದು ಕಾಲೇಜ್ ಕ್ಯಾಂಪಸ್‌ನಲ್ಲೆ ನಮ್ಮ ಎದುರಿಗೆ ಹುಡುಗನ ಬಟ್ಟೆಗಳನ್ನೆಲ್ಲ ಕಿತ್ತಾಕಿ, ನಾನು ನಿನ್ನನ್ನ ಬಿಡೊದಿಲ್ಲ. ಡಿಚ್ ಮಾಡ್ತೀನಿ ಎಂದರೆ, ಅವನು ನಾನು ನಿನ್ನನ್ನ ಬಿಡೊದಿಲ್ಲ ಕ್ರಷ್ ಮಾಡ್ತೀನಿ.... ಎಂದು ಜಗಳವಾಡಿ ಬ್ರೇಕಿಂಗ್ ಆಗಿಬಿಟ್ಟರು. ಅವನ ಜೊತೆಗೆ ಬಂದಿದ್ದ ಹುಡುಗಿಗೆ ವಿಷಯ ತಿಳಿದು ಒಂದು ವಾರ ಕಾಲೇಜಿನ ಕಡೆಗೆ ಮುಖ ಇಟ್ಟು ಮಲಗಲೇ ಇಲ್ಲ. ಪ್ರೇಯಿಸಿ ಜಗಳವಾಡಿ ಹೋದ ಮೇಲೆ ನಮ್ಮ ಹೀರೊ ಹುಡುಗಿಯ ಅರ್ಧ ಹೆಸರನ್ನು ಕೈಮೇಲೆ ಚಾಕುವಿನಲ್ಲಿ ಗ್ರಾನೈಟ್ ಕಲ್ಲಿನಲ್ಲಿ ಎನ್‌ಗ್ರೇವ್ ಮಾಡಿಕೊಂಡಂತೆ ಮಾಡಿಕೊಳ್ಳಲು ಹೋಗಿ ತಲೆ ಸುತ್ತಿ ಬಿದ್ದುಬಿಟ್ಟಿದ್ದ.

ಮನೆಯಲ್ಲಿ ಅವನ ತಂದೆಗೆ ವಿಷಯ ತಿಳಿದು ಇವನೇನೆ ತಮಿಳುನಾಡಿನಲ್ಲಿ ಕಾವಡಿ ಎತ್ತುವವನಂತೆ ಮೈಯೆಲ್ಲಾ ಕತ್ತಿಯಲ್ಲಿ ಕೊಯ್ದುಕೊಂಡಿದ್ದಾನೆ ಎಂದು ಕೂಗಾಡಿದರೆ, ಅವನ ತಾಯಿ ಯಾವಳು ಹೆಸರನ್ನು ಕೈಮೇಲೆ ಬರೆದುಕೊಂಡಿದ್ದಿಯೊ ಕಳ್ಳನನ್ನ ಮಗನೆ ಎಂದು ಬೈಯ್ದರಂತೆ. ಕೈಮೇಲೆ ಹುಡುಗಿಯ ಪೂರ್ಣ ಹೆಸರಿಲ್ಲದ ಕಾರಣ ಹುಡುಗನಿಗೆ ಮನೆಯಲ್ಲಿ ಆಯಿಲ್ ದಂಡನೆ ಏನೂ ಆಗಲಿಲ್ಲ. ಹುಡುಗಿ ಪಕ್ಕದ ಮನೆಯಲ್ಲೇ ಇದ್ದು, ಹುಡುಗಿಯ ಹೆಸರು ಮನೆಯಲ್ಲಿ ಎಲ್ಲರಿಗೂ ಗೊತ್ತಿತ್ತು. ಅರ್ಧ ಹೆಸರು ಮಾತ್ರ ಅವನ ಕೈಮೇಲಿದ್ದು ಅವನು ಬದುಕಿಕೊಂಡಿದ್ದ. ಇಲ್ಲದಿದ್ದರೆ ಆ ದಿನ ಎರಡು ಮನೆಗಳಲ್ಲಿ ಏನೇನು ಅನಾಹುತಗಳು ನಡೆಯುತ್ತಿದ್ದವೊ.....ಏನೊ....? ಅಂತು ಮರುದಿನ ಸಾಯಂಕಾಲದ ಒಳಗೆ ಹುಡುಗ ಹುಡುಗಿಯ ಮಧ್ಯ ಮತ್ತೆ ಪ್ಯಾಚಿಂಗ್ ಮಾಡಿದ್ದೆವು'' ಸವ್ಯ ರಸವತ್ತಾಗಿ ಹೇಳುತ್ತಿದ್ದ ಕಥೆಗಳನ್ನು ಕೇಳುತ್ತಿದ್ದ ಗೆಳೆಯರು ಬಿದ್ದು ಬಿದ್ದು ನಗುತ್ತಿದ್ದರು. ''ಬಾರಿ ಭಯಂಕರ ಕಣೊ ನಿನ್ನ ಫ್ರೆಂಡ್ಸ್''

ಎಂದಳು ಕೃತಿಕಾ. ''ನೀನು ಕಾಲೇಜ್‌ನಲ್ಲಿ ಒಂದು ಸೆಲ್ ತೆಗೆದುಬಿಡು'' ಎಂದ ಅಮರನಾಥ.

''ಏನು ಸೆಲ್ಲು....?'' ಸವ್ಯ ಪ್ರಶ್ನಿಸಿದ. ''ಅದೆ ಬ್ರೇಕಿಂಗ್ ಅಂಡ್ ಪ್ಯಾಚಿಂಗ್ ಸೆಲ್ಲು'' ಅಮರನಾಥನ ಮಾತಿಗೆ ಎಲ್ಲರೂ ನಕ್ಕರು.

ಈ ನಡುವೆ ಪಕ್ಕದಲ್ಲಿ ಕುಳಿತಿದ್ದ ಕೃತಿಕಾ ನಗುವಾಗ ಅಮರನಾಥನ ಮೇಲೆ ಎರಡು ಮೂರು ಸಲ ಬಿದ್ದಿದ್ದಳು. ಪಕ್ಕಕ್ಕೆ ನೋಡಿದ ಸವ್ಯ ''ಮಗ ಮಜಾ ತಗೊ'' ಕಣ್ಣುಗಳಲ್ಲೆ ಹೇಳಿದ. ಅಮರನಾಥ ಇದೇನು ಗ್ರಹಚಾರ ಮೈಮೇಲೇನೆ ಬೀಳ್ತಾಳಲ್ಲ ಎಂದು ಒಳಗೊಳಗೆ ಯೋಚಿಸತೊಡಗಿದ.

''ಇನ್ನೊಂದು ದಿನ ಏನಾಯಿತೆಂದರೆ.....? ಎಸ್.ಎಸ್.ಎಲ್.ಸಿ. ಪರೀಕ್ಷೆಗಳು. ವಿಜಯನಗರದಲ್ಲಿ ರಾತ್ರಿಯೆಲ್ಲಾ ನಮ್ಮ ಫ್ರೆಂಡ್ಸ್ ಮನೆಯಲ್ಲಿ ಓದ್ತಾ ಇದ್ದಿವಿ. ರಾತ್ರಿ ಒಂದು ಗಂಟೆ ಸಮಯ ನಾವು ಮೂವರು ಹೀರೋಗಳ ತರಹ ವಾಕಿಂಗ್ ಹೊರಟೆವು. ಎದುರಿಗೆ ಇಬ್ಬರು ವಾಚ್‌ಮೇನ್‌ಗಳು ತಲೆಗೆ ಮಫ್ಲರ್ ಸುತ್ತಿಕೊಂಡು ಹಿಂದುಗಡೆಗೆ ಕೈಕಟ್ಟಿಕೊಂಡು ಬರ್‍ತಾ ಇದ್ದಾರೆ. ಹತ್ತಿರಕ್ಕೆ ಬಂದು, -''ಏನ್ ಸಾರ್ ಎಲ್ಲಿಗೆ ಹೋಗ್ತಾ ಇದ್ದೀರಿ....? ನಮ್ಮನ್ನ ಕೇಳಿದರು. ನನ್ನ ಫ್ರೆಂಡ್ ಕುಮಾರ ರೀ ಹೋಗ್ರಿ ನಿಮಗ್ಯಾಕೆ....?'' ಜೋರಾಗಿ ಹೇಳಿದ. ಅವನು ಹೇಳಿದ್ದೆ ತಡ, ''ನಮಗ್ಯಾಕಾ....? ನಮ್ಮನ್ನ ಯಾರೂ ಅಂತ ತಿಳಿದುಕೊಂಡಿದ್ದೀರ....? ನನ್ನ ಮಕ್ಕಳಾ....? ಎಂದಿದ್ದೆ ಹಿಂದುಗಡೆ ಬಚ್ಚಿಟ್ಟುಕೊಂಡಿದ್ದ ಕೋಲಿನಿಂದ ಕುಮಾರನಿಗೆ ಒಂದು ಬಿಟ್ಟ . ಅವರು ವಾಚ್‌ಮೆನ್‌ಗಳಲ್ಲ , ಪೊಲೀಸರು. ಮೂವರು ಕೋಲ್ಟ್‌ಗಳಂತೆ ಓಟಕಿತ್ತೆವು. ಎಷ್ಟು ಜೋರಾಗಿ ಓಡಿದೆವೆಂದರೆ ನನ್ನ ಮುಂದೆ ಓಡಿದ ಕುಮಾರನ ಚಪ್ಪಲಿ ನನ್ನ ಕಿವಿ ಹತ್ತಿರದಿಂದ ಜುಯ್ ಅಂತ ಹಾರಿ ಹೋಯಿತು. ಓಡಿಹೋಗಿ ಮನೆಯ ಬಾಗಿಲು ಮುಚ್ಚಿಕೊಂಡುಬಿಟ್ಟೆವು. ಕುಮಾರನಿಗೆ ಬಿದ್ದ ಏಟಿನ ಗುರುತು ಇನ್ನು ಹಾಗೆ ಇದೆ. ಈ ಕುಮಾರನದು ಒಂದು ದೊಡ್ಡ ಕತೆ ಪಾಪ !'' ಎಂದ. ನಗುತ್ತಿದ್ದವರೆಲ್ಲ ಕುತೂಹಲದಿಂದ ನಗುವುದನ್ನು ನಿಲ್ಲಿಸಿ ''ಯಾಕೆ....? ಈಗ ಏನು ಮಾಡ್ತಾನೆ ?'' ಪ್ರಶ್ನಿಸಿದರು.

''ಈಗೇನು ಮಾಡ್ತಾನೆ....?ಬೀದಿ ದೀಪಗಳ ಕೆಳಗಡೆ ನಿಂತುಕೊಂಡು ಪ್ರೇಮ ಪತ್ರಗಳನ್ನು ಬರಿತಾ ಇರ್‍ತಾನೆ '' ಸವ್ಯನ ಮಾತಿಗೆ ಇನ್ನಷ್ಟು ಕೂತೂಹಲಿಗಳಾದ ಗೆಳೆಯರು ''ಯಾಕೆ.....? ಏನಾಯಿತು...?'' ಎಂದು ಮತ್ತೆ ಪ್ರಶ್ನಿಸಿದರು.

''ನಾಟ್ ಸೊ ಸೀರಿಯಸ್ ಆದ್ರೆ ಕಾಲೇಜ್ ಬಿಟ್ಟುಬಿಟ್ಟ, ಒಂದು ಹುಡ್ಗೀನ್

ಲವ್ ಮಾಡ್ತಾ ಇದ್ದನಂತೆ. ಆದ್ರೆ ಆ ಹುಡುಗಿ ಇವನನ್ನ ಲವ್ ಮಾಡಲಿಲ್ಲ ಒನ್‌ವೇ. ಟ್ರಾಫಿಕ್ ಜಾಮ್‌ಆಗಿ ಇವನು ಮಧ್ಯದಲ್ಲಿ ಸಿಕ್ಕಿಕೊಂಡುಬಿಟ್ಟ. ಇನ್ನೊಂದು ಹುಡ್ಗೀನ ಲವ್ ಮಾಡಿದ, ಅದು ಸೆಟ್‌ಆಗಲಿಲ್ಲ. ಹೀಗೆ ನಾಲ್ಕೈದು ಹುಡ್ಗೀರ್ನ ಲವ್ ಮಾಡಿದ, ಆದ್ರೆ ಅವನ್ನ ಯಾರೂ ಲವ್ ಮಾಡ್ಲಿಲ್ಲ. ಲವ್ ಮಾಡೊದೆ ನನ್ನ ಹಾಬಿ ಅಂತ ಓಡಾಡ್ತಿದ್ದ. ಒಂದೊಂದು ಸಲ ಬಹಳ ಡಿಫರೆಂಟಾಗಿ ಬಿಹೇವ್ ಮಾಡ್ತಾ ಇದ್ದ. ಅದಕ್ಕೆ ಹುಡುಗಿರೆಲ್ಲ ಅವನನ್ನ ನೋಡಿದರೆ ಹೆದರಿಕೊಳ್ತಾ ಇದ್ದು . ವಿಚಿತ್ರವಾಗಿ ಡ್ರಸ್‌ಮಾಡಿಕೊಂಡು ಬರೋನು. ಒಂದೊಂದು ಸಲ ಬಟ್ಟೆನೆಲ್ಲ ಸಿಗಲಾಕಿಕೊಂಡು ಬರೋನು. ಕಿವಿಗೆ ಉಂಗ್ರ, ಸೈಡ್‌ಲಾಕ್, ಪೂರ್ತಿ ತೆಗೆದುಬಿಡೊದು, ರ್‍ಯಾಂಪ್, ಗೋಟಿ ಬಿಡೊದು, ಸ್ಪೈಕ್ ಮಾಡಿಕೊಂಡು ಬರೊದು, ಮಷ್ರೂಂ ಕಟ್ ಮಾಡಿಕೊಂಡು ಬರೊದು, ಸಿಗರೇಟ್ ಕುಡಿಯೊದು, ಗುಟಕಾ ತಿನ್ನೊದು. ಕೊನೇಗೆ ಕಾಲೇಜ್ ಬಿಟ್ಟುಬಿಟ್ಟ. ಅವರ ತಂದೆ ತಾಯಿ ಎಷ್ಟೊ ಹೇಳಿ ನೋಡಿದರಂತೆ. ಆಗಾಗ ಕಾಲೇಜಿಗೂ ಬರ್‍ತಾ ಇದ್ದರು. ಆದರೂ ಏನೂ ಆಗಲಿಲ್ಲ. ಅವನನ್ನ ಚೇಂಜ್ ಮಾಡೊದಕ್ಕೇ ಯಾರಿಂದ್ಲೂನೂ ಆಗಲಿಲ್ಲ. ಈಗ ಅದೆ ಎಲ್ಲೆಂದರೆ ಅಲ್ಲಿ ನಿಂತುಕೊಂಡು ಪ್ರೇಮಪತ್ರಗಳನ್ನ ಬರಿತಾ ಇರ್‍ತಾನಂತೆ...." ಸವ್ಯ ಹೇಳುತ್ತಾ ಹೋಗುತ್ತಿದ್ದ.

ಕುಮಾರನ ಕಥೆ ಕೇಳಿ ಎಲ್ಲರ ಮುಖಗಳು ಬಿಳಿಚಿಕೊಂಡು ಬಿಟ್ಟವು.

"ಸವ್ಯ ನಿನಗೆ ಟೀ ಕೊಡಿಸ್ತೀನಿ ನಡಿ" ಎಂದಳು ಕೃತಿಕಾ. ನನಗೆ ಒಬ್ಬನಿಗೇನಾ? ಅಮರನಾಥನಿಗೆ ಕೋಡಿಸುವುದಿಲ್ಲವಾ....? ಸವ್ಯ ನಕ್ಕ. "ಎಲ್ಲರಿಗೂ ಕೊಡಿಸ್ತೀನಿ " ಎಂದಳು ಕೃತಿಕಾ.

"ನಾನು ಟೀ ಕಾಫಿ ಏನೂ ಕುಡಿಯೊದಿಲ್ಲ" ಅಮರನಾಥ ಹೇಳಿದ. "ಆಯಿತು ನಡಿಯೊ ಆಸ್ಟ್ರೇಲಿಯಾದಿಂದ ಒಂದು ಹೊಸಾ ಬೀರು ಬಂದಿದೆಯಂತೆ " ಸವ್ಯ ನಕ್ಕ. ಎಲ್ಲರೂ ಟೀ ಅಂಗಡಿಯಲ್ಲಿ ಪಕ್ಕ ಪಕ್ಕದಲ್ಲಿ ಕುಳಿತು ಚಹಾ ಕುಡಿಯುತ್ತಿದ್ದಾರೆ.

"ಹೌದು ! ಕೃತಿಕಾ, ರೂಪ ನೀವು ಎಂತಹ ಹುಡುಗರ್ನ ಮದುವೆ ಮಾಡ್ಕೋಬೇಕು ಅಂತಿದ್ದೀರಾ....? ಮನೆಯಲ್ಲಿ ಹೇಳಿದವರ್ನ ಮದುವೆ ಆಗ್ತೀರಾ....? ಇಲ್ಲ, ನೀವೇ ಲವ್‌ಮಾಡಿ ಮದುವೆ ಆಗ್ತೀರಾ....?" ಸವ್ಯ ಪ್ರಶ್ನಿಸಿದ.

"ಲೇ ನಿನಗೇನು ಕೆಲಸ ಇಲ್ಲವೇನೊ....? ಅಮರನಾಥ ಕೋಪವಾಗಿ ಕೇಳಿದ. ಸವ್ಯ ಅಮರನಾಥನನ್ನು ನೋಡಿ ನಕ್ಕ. ಕೃತಿಕಾ "ಹೇಗಾದರು ಸರಿ ಹುಡುಗ

ಒಳ್ಳೆಯವನಾಗಿರಬೇಕು. ಹಣವಂತರು ಬೇಡ.'' ಕೃತಿಕಾ ಹೇಳುತ್ತಿದ್ದಂತೆ ''ಯಾಕೆ ಎಲ್ಲರೂ ಹಣವಂತರ್ನ ಬಯಸಿದರೆ....? ನೀನು ಹಣವಂತರು ಬೇಡ ಅಂತೀಯಲ್ಲ....?''

''ಹಣವಂತರು ಇನ್ನೂ ಹೆಚ್ಚು ಹಣ ಬಯಸ್ತಾರೆ ವಿನಹ ಹುಡುಗಿಯರ್ನ ಬಯಸೊದಿಲ್ಲ'' ಎಂದಳು ಕೃತಿಕಾ. ಪರವಾಗಿಲ್ಲ ಕೃತಿಕಾ ನಿನ್ನನ್ನ ತುಂಬಾ ಮೆಟರಿಯಲಿಸ್ಟಿಕ್ ಅಂದುಕೊಂಡಿದ್ದೆ. ಆದ್ರೆ ನೀನು ಲಾಜಿಸ್ಟಿಕ್ಕಾಗಿ ಯೋಚಿಸ್ತೀಯ....'' ಎಂದ ಸವ್ಯ. ಅಷ್ಟರಲ್ಲಿ ಪಕ್ಕದಲ್ಲಿದ್ದ ಹುಡುಗಿ ಅಮರನಾಥನ ಮೇಲೆ ಆಯತಪ್ಪಿ ಬಿದ್ದುಬಿಟ್ಟಳು. ಅವನ ಕೈಯಲ್ಲಿದ್ದ ಚಹಾ ಕೃತಿಕಾಳ ಎದೆಯ ಮೇಲೆ ಚೆಲ್ಲಿಹೋಯಿತು.

''ಓ....ಗಾಡ್....'' ಎಂದು ಎದ್ದುನಿಂತ ಕೃತಿಕಾ ನವಿಲು ಕುಣಿದಂತೆ ಕುಣಿದಾಡಿದಳು. ತಳ್ಳಿದ ಹುಡುಗಿ ''ಐಯಾಮ್ ಸಾರಿ ವೆರಿ ಸಾರಿ'' ಎಂದು ಪರಿಪರಿಯಾಗಿ ಕೇಳಿಕೊಂಡಳು. ಅಮರನಾಥ ಏನೂ ಮಾತನಾಡಲಾಗದೆ ಕಣ್ಣು ಕಣ್ಣುಬಿಟ್ಟು ನೋಡತೊಡಗಿದ. ಕೃತಿಕಾ ಅಲ್ಲಿಂದ ಎದ್ದು ಹೋಗಿ ನೀರಿನಿಂದ ಬಟ್ಟೆಯನ್ನು ಒರೆಸಿಕೊಂಡಳು.

ಸವ್ಯ ''ಲೋ ಅಮರ್ ಹೋಗಿ ಒರೆಸೊ.... ಎಂತಹ ಚಾನ್ಸ್ ಕಳೆದುಕೊಳ್ತಾ ಇದ್ದಿಯೊ'' ಎಂದ. ಅಮರನಾಥ ಮತ್ತೆ ಪಿಳಿಪಿಳಿಯಾಗಿ ನೋಡತೊಡಗಿದ.

* * *

ಹರ್ಷ ತನ್ನ ಬಡಾವಣೆಯಲ್ಲಿ ಮಕ್ಕಳಿಂದ ಮುದುಕರು ಎಲ್ಲರನ್ನು ಪ್ರೀತಿಯಿಂದ ಮಾತನಾಡಿಸುತ್ತ ಅವರ ಕಷ್ಟ ಸುಖಗಳಿಗೆ ಸ್ಪಂದಿಸುತ್ತ ಒಂದು ಗುಂಪು ಹುಡುಗರನ್ನು ಕಟ್ಟಿಕೊಂಡು ಓಡಾಡುತ್ತಿದ್ದ. ಬಡಾವಣೆಯ ಸಣ್ಣ ಪುಟ್ಟ ಕೆಲಸಗಳನ್ನು ಹುಡುಗರ ಗುಂಪು ಎಲ್ಲಾ ಕಛೇರಿಗಳಿಗೆ ತಲುಪಿ, ಸಂಬಂಧಪಟ್ಟ ಅಧಿಕಾರಿಗಳನ್ನು ನೋಡಿ ತಾವೆ ಕೆಲಸಗಳನ್ನು ಮಾಡಿಕೊಂಡು ಬರುತ್ತಿದ್ದರು. ಅವರ ಕೈಯಲ್ಲಿ ಆಗಲಿಲ್ಲ ಎಂದರೆ ಹರ್ಷನೆ ಖುದ್ದಾಗಿ ಕಛೇರಿಗಳನ್ನು ತಲುಪಿ ಕೆಲಸಗಳನ್ನು ಮಾಡಿಕೊಂಡು ಬರುತ್ತಿದ್ದ.

ಹರ್ಷ ಈಗೀಗ ಯಾರಿಗೂ ತಿಳಿಯದಂತೆ ಒಬ್ಬನೇ ಪಕ್ಕದ ಬಡಾವಣೆಯ ಬಾರ್ ಅಂಡ್ ರೆಸ್ಟಾರೆಂಟ್ ಒಂದರಲ್ಲಿ ಏಕಾಂತವಾಗಿ ಕುಳಿತುಕೊಂಡು ಬೀರು ಕುಡಿಯುವುದನ್ನು ಕಲಿತುಕೊಂಡುಬಿಟ್ಟಿದ್ದ. ಅವನ ತಲೆಯಲ್ಲಿ ಏನೇನೊ ಯೋಚನೆಗಳೂ ಹಾದುಹೋಗುತ್ತವೆ. ಬೆಂಗಳೂರಿನಲ್ಲಿ ಹೆಮ್ಮರದಂತೆ ಬೆಳೆದುನಿಂತಿರುವ ಕಾಳಸಂತೆ ವ್ಯಾಪಾರ, ಗೂಂಡಾ-ರೌಡಿಗಳು, ರಾಜಕಾರಣಿಗಳ ಕಥೆಗಳು ಅವನ ತಲೆಯಲ್ಲಿ ಹಾದುಹೋಗುತ್ತವೆ. ಕೊಲೆ, ಸುಲಿಗೆ, ಮಾನಭಂಗಗಳನ್ನು

ರೋಚಕವಾಗಿ ಬರೆದು ವಿಜೃಂಭಿಸುವ ಹಲವು ಪತ್ರಿಕೆಗಳನ್ನು ಬಿಡದೆ ಓದುತ್ತಾನೆ. ಜೊತೆಗೆ ಇನ್ನಿತರ ಪತ್ರಿಕೆ, ಪುಸ್ತಕಗಳನ್ನು ಓದುತ್ತಾನೆ.

ರೌಡಿಯ ಪತ್ನಿ ಯಾವಾಗಲು ವಿಧವೆಯೆ....? ನನಗ್ಯಾಕೆ ಈ ರೀತಿಯ ಯೋಚನೆಗಳು ಬರುತ್ತಿವೆ....? ನಾನು ಮದುವೆ ಮಾಡಿಕೊಂಡರೆ ತಾನೆ....? ಹಣವಿದ್ದವರಿಗೆ ಪ್ರಪಂಚದಲ್ಲಿ ಅತಿ ಉತ್ಕೃಷ್ಟ ಸೌಕರ್ಯಗಳು ದೊರಕುತ್ತವೆ. ಎಲ್ಲವೂ ಅವರು ಹೇಳಿದಂತೆಯೆ, ಎಲ್ಲರೂ ಒಂದು ದಿನ ಸಾಯುತ್ತಾರೆ. ಇಷ್ಟು ಹಣ, ಸಂಪತನ್ನು ಯಾಕಾದರು ಗುಡ್ಡೆಯಾಕುತ್ತಾರೆ....? ತಮ್ಮ ಸಂತಾನ ದುಡಿಯದೆ ಯಾವಾಗಲು ಮಲಗಿರಲೆಂದೇ....? ನನ್ನ ಹಣೆಯಲ್ಲಿ ಏನು ಬರೆದಿದೆಯೊ.....? ಅವರವರ ಹಣೆಬರಹವನ್ನು ಅವರೆ ಬರೆದುಕೊಳ್ಳಬೇಕು ಎನ್ನುತ್ತಾರೆ ಬುದ್ಧಿವಂತರು. ಆದರೆ ಸಮಾಜವನ್ನು ದೋಚದೆ ಯಾರೂ ಹಣವಂತರಾಗಿರುವ ನಿರ್ದೇಶನಗಳು ಅವನ ತಲೆಗೆ ಹೊಳೆಯಲಿಲ್ಲ.

ಟಾಟಾ, ಬಿರ್ಲಾ ಹಣವಂತಾರಾಗಿದ್ದು ಹೇಗೆ...? ಕಾರ್ಮಿಕರಿಗೆ ಅವರ ದುಡಿತದ ಶ್ರಮಕ್ಕಿಂತ ಕಡಿಮೆ ಸಂಬಳಕೊಟ್ಟು ಹಣ ಗುಡ್ಡೆಯಾಕಿದ್ದು, ಇನ್ನೂ ರಾಜಕಾರಣಿಗಳು ಬರಿ ಕಮೀಷನ್ ಮತ್ತು ಲಂಚಗಳಿಂದಲೆ ಕೋಟಿ ಕೋಟಿ ರೂಪಾಯಿ ಹೊಡೆಯುತ್ತಾರೆ. ವ್ಯಾಪಾರಿಗಳು, ಅತ್ತ ಬೆಳೆ ತೆಗೆಯುವವರು ಇತ್ತ ಕೊಂಡು ತಿನ್ನುವವರ ಮಧ್ಯ ಕುಳಿತುಕೊಂಡು ಲಕ್ಷ ಲಕ್ಷ ಹೊಡೆಯುತ್ತಾರೆ. ಅಧಿಕಾರಿಗಳು ಅಷ್ಟೆ. ಇನ್ನು ನ್ಯಾಯವಾಗಿ ಸಂಪಾದನೆ ಮಾಡುವುದು ಹೇಗೆ....?

ಹರ್ಷನಿಗೆ ಕುಡಿತ ತಲೆಗೇರಿ ಏನೇನೊ ಯೋಚನೆಗಳು ಬರುತ್ತಿದ್ದವು. ಈ ಬೀರು ....ಬ್ರಾಂದಿ..... ವಿಸ್ಕಿಯಲ್ಲಿ ಇಷ್ಟಕ್ಕೂ ಏನಿರುತ್ತದೆ.....? ಮಿದುಳಿನ ನರಕೋಶಗಳನ್ನು ತಲುಪಿ ಮನುಷ್ಯರನ್ನು ನಾಟ್ಯವಾಡಿಸುತ್ತದೆ. ಹೊಸ ಹೊಸ ಯೋಚನೆಗಳೂ... ಉಪಾಯಗಳು.... ಮಾತುಗಳನ್ನು ಆಡಿಸುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ ಮನುಷ್ಯನನ್ನು ದಾರಿ ತಪ್ಪಿಸುತ್ತದೆ. ಹರ್ಷ ಒಂದು... ಎರಡು.... ಮೂರನೆ ಬೀರು ಬಾಟಲನ್ನು ಪ್ರಾರಂಭಿಸಿದ್ದಾನೆ. ಅದೇ ಸಮಯಕ್ಕೆ ಸರಿಯಾಗಿ ಯಾವುದೋ ಒಂದು ಗುಂಪು ಕತ್ತಿ ಲಾಂಗ್‌ಗಳನ್ನು ಜುಳಪಿಸುತ್ತ ಹಿಂದಿ ಸಿನಿಮಾಗಳಲ್ಲಿ ಖಳರ ಗುಂಪು ನುಗ್ಗಿದಂತೆ ದಬದಬನೆ ಹೋಟಲ್ ಒಳಕ್ಕೆ ನುಗ್ಗಿಬಂದಿತು.

ಅಲ್ಲಿದ್ದವರನ್ನೆಲ್ಲ ಸುತ್ತುವರಿದು "ಎಲ್ಲಿ ಆ ನನ್ನ ಮಗ ಮಿಂಚ....? ಇಲ್ಲಿಗೆ ಬಂದಿದ್ದಾನಾ....?" ಕೇಳಿದರು. ಅಲ್ಲಿ ಕುಳಿತಿದ್ದವರೆಲ್ಲ ಕತ್ತಿ ಲಾಂಗ್‌ಗಳನ್ನು ನೋಡಿ ತತ್ತರಿಸಿ ಹೋದರು, ಯಾರೂ ಮಾತನಾಡಲಿಲ್ಲ. ಎಲ್ಲರೂ ಉಸಿರಿಡಿದು ಕುಳಿತು

ಮಿಕಮಿಕ ನೋಡುವುದನ್ನು ಗಮಿಸಿದ ರೌಡಿಗುಂಪು ''ತತ್‌ತೆರಿಕೆ ನನ್ನ ಮಗ ತಪ್ಪಿಸಿಕೊಂಡು ಬಿಟ್ಟ....?'' ಎಂದು ಸುತ್ತಲು ಮತ್ತೊಮ್ಮೆ ನೋಡಿ ಬಂದಷ್ಟೇ ವೇಗವಾಗಿ ಹಿಂದಕ್ಕೆ ತಿರುಗಿಕೊಂಡು ಹೊರಟುಹೋದರು. ಹೋಗುವಾಗ ಕುರ್ಚಿ ಮೇಜುಗಳನ್ನೆಲ್ಲ ಒದೆಯುತ್ತಾ ತಳ್ಳುತ್ತಾ ಚಿಕನ್ ಮಟನ್ ತಿನ್ನುತ್ತಿದ್ದವರ ತಟ್ಟೆಗಳಲ್ಲಿ ಕೈ ಹಾಕಿ ಬಾಯಿಗೆ ಹಾಕಿಕೊಳ್ಳುತ್ತ ದಬದಬನೆ ಹೊರಟು ಹೋಗಿದ್ದರು. ಅಲ್ಲಿದ್ದವರೆಲ್ಲ ಬದುಕಿದೆವು ಬಡಪಾಯಿ ಎಂದು ಉಸಿರಾಡತೊಡಗಿದರು.

ಹರ್ಷ ಕುಳಿತಿದ್ದ ಮೇಜಿನ ಕೆಳಗಿಂದ ಎದ್ದುಬಂದ ರಫ್ ಅಂಡ್ ಟಫ್ಫಾದ ಯುವಕನೊಬ್ಬ ಹರ್ಷನ ಎದುರಿಗ ಕುಳಿತುಕೊಳ್ಳುತ್ತ ''ನನ್ನ ಮಕ್ಕಳು ಇವರೆಲ್ಲ ರೌಡಿಗಳು...? ನನಗೆ ಇವೊತ್ತು ಮೂಡಿಲ್ಲ. ಇಲ್ಲ ಅಂದರೆ ಎಲ್ಲರಿಗೂ ಒಂದೊಂದು ಟಾಕಾ ಹಾಕ್ತಾ ಇದ್ದೆ'' ಎಂದು ಚಾಕನ್ನು ಮಡಿಸಿ ಜೇಬಿಗೆ ಹಾಕಿಕೊಂಡ. ಮತ್ತೆ'' ಈ ಹೋಟಲಿನವರ ಮುಖ ನೋಡಿ ಸುಮ್ಮನಾದೆ. ಎಲ್ಲಾ ಹಾಳಾಗಿಬಿಡುತ್ತಲ್ಲ....?'' ಗಡ್ಡ ಕೆರೆದುಕೊಳ್ಳುತ್ತ ಹೇಳಿದ.

ಸಪ್ಲೇಯರ್ ಅವನ ಎದುರಿಗೆ ಒಂದೆರಡು ನಾನ್‌ವೆಜ್ ತಟ್ಟೆಗಳನ್ನು, ತುಂಬಿದ ಗ್ಲಾಸು, ಸೋಡಾ ಬಾಟಲನ್ನು ತಂದು ಮುಂದಿಟ್ಟು ''ಆಫೀಸಿಗೆ ಹೊಸದಾಗಿ ಸೇರಿಕೊಂಡಿದ್ದೀಯಾ.....? ಆತ ಕೇಳಿದ. ಹರ್ಷನಿಗೆ ಅರ್ಥವಾಗದೆ ಅವನ ಮುಖವನ್ನೇ ನೋಡಿದ. ನಿನ್ನನ್ನೆ ಫ್ರೆಂಡ್....'' ''ನನ್ನನ್ನ....?'' ''ಹೌದು'' ಇನ್ಯಾರಿದ್ದಾರೆ ಇಲ್ಲಿ ಎದುರಿಗೆ ನೀನೇ ಅಲ್ಲವೆ ಕುಳಿತಿರುವುದು...?''

''ಆಫೀಸು....'' ಹರ್ಷ ತೊದಲಿದ. ''ನಮ್ಮಂತವರಿಗೆ ಇದೆ ಆಫೀಸಲ್ಲವೆ....? ನೀನು ಹೊಸಬಾನಾ....?'' ಅವನು ನಕ್ಕ. ಹರ್ಷನಿಗೆ ಆಗಲೆ ತಲೆ ಸ್ವಲ್ಪ ಜುಮ್ಮನಾಗಿತ್ತು. ಆತ ''ಆಫೀಸಿನಲ್ಲಿ ಸಂಬಳಾ ಕೊಡ್ತಾರೆ. ಗಿಂಬಳಾನು ಸಿಗುತ್ತೆ....? ಇಲ್ಲಿ ಎಂದ. ಇಲ್ಲಿ.....?'' ಹರ್ಷ ಮತ್ತೆ ತೊದಲಿದ. ''ಇಲ್ಲಿ ಮಾಮೂಲಿ ಕೊಡ್ತಾರಲ್ಲ.... ಪಾಪ'' ಇಬ್ಬರು ನಕ್ಕರು. ''ನಿನ್ನನ್ನ ನೋಡಿದರೆ ನನ್ನ ಬ್ರದರ್ ತರ ಕಾಣಿಸ್ತೀಯಾ....? ಈ ವಯಸ್ಸಿಗೆ ಏನಪ್ಪ ನಿನಗೆ ತೊಂದರೆ....? ಬಾರ್‌ನಲ್ಲಿ ಕುಳಿತುಕೊಂಡು ಕುಡಿತಾ ಇದ್ದೀಯಾ....?'' ಯುವಕ ಪ್ರಶ್ನಿಸಿದ. ಹರ್ಷ ಅಮಲಿನಲ್ಲಿ ಏನೇನು ಹೇಳಿದನೊ ಅಂತೂ ಏನೇನೊ ಬಡಬಡಿಸಿದಂತೆ ಜ್ಞಾಪಕ.

''ನನ್ಹೆಸರು ಮಿಂಚ ಹೆಸರು ಕೇಳಿದ್ದೀಯಾ....? ನಿನಗೆ ಏನಾದರೂ ಸಹಾಯ ಬೇಕಾದರೆ ತೆಗೆದುಕೊ ನನ್ನ ವಿಸಿಟಿಂಗ್ ಕಾರ್ಡ್'' ಎಂದು ಜೇಬಿನಿಂದ ಒಂದು ಕಾರ್ಡ್ ತೆಗೆದುಕೊಟ್ಟ. ಹರ್ಷ ಅದನ್ನು ತೆಗೆದುಕೊಂಡು ಜೇಬಿಗೆ ಇಟ್ಟುಕೊಳ್ಳುತ್ತಿದ್ದಂತೆ ''ಲೊ ಯಾವನೊ ಅವನು....? ಇಲ್ಲಿ ಬಾ... ಇಂದಾ ತೆಗೆದುಕೊ... ಇಬ್ಬರದೂ

ಬಿಲ್ಲು. ಮಿಕ್ಕದ್ದು ನಿನಗೆ ಟಿಪ್ಸ್'' ಎಂದು ಸಪ್ಲೇಯರ್‌ಗೆ ಹಣಕೊಟ್ಟು ಹೊರಡಲು ಎದ್ದುನಿಂತ.

''ಬರ್‍ಲಾ ಹರ್ಷ'' ಮಿಂಚ ತೂರಾಡುತ್ತ ಹೊರಕ್ಕೆ ನಡೆದ. ಮಿಂಚ ಹೊರಕ್ಕೆ ಹೋದ ಕೆಲವು ಕ್ಷಣಗಳಲ್ಲಿ ಯಾವುದೊ ಗಾಡಿ ಸದ್ದುಮಾಡುತ್ತಾ ಹೊರಟುಹೋಯಿತು. ಮೊದಲ ಬಾರಿಗೆ ಹತ್ತಿರತ್ತಿರ ಮೂರು ಬೀರು ಬಾಟಲು ಕುಡಿದಿದ್ದ ಹರ್ಷನಿಗೆ ಜಂಟ್ಲಮನ್ ತರಹ ವಾಕ್ ಮಾಡಲಾರನೇನೊ ಎನ್ನುವ ಗುಮಾನಿ ಬಂದಿತು. ಕಿಕ್ ಇಳಿಯಲಿ ನೋಡೋಣ ಎಂದು ಅಲ್ಲೆ ಕುಳಿತುಕೊಂಡ. ತಲೆ ಗಿರ್‍ರನೆ ತಿರುಗುತ್ತಿರುವಂತೆ ತೋರಿತು. ಮತ್ತೆ ಯಾರೊ ದಭದಭನೆ ಒಳಕ್ಕೆ ನುಗ್ಗಿಬಂದರು. ಬಂದವರು ಲಾಂಗ್, ಕತ್ತಿಗಳನ್ನು ಗಾಳಿಯಲ್ಲಿ ಝಳುಪಿಸಿದರು.

''ಎಲ್ಲಿ ... ಎಲ್ಲಿ ಅವನು....? ಎಲ್ಲಿ ಆ ನನ್ನ ಮಗ ಮಿಂಚ....?'' ಎನ್ನುತ್ತಾ ಹರ್ಷನನ್ನು ಸುತ್ತುವರಿದರು. ''ಲೇ ನನ್ನ ಮಗನೆ ಎಲ್ಲೋದ ಮಿಂಚ....?'' ಹರ್ಷನನ್ನು ಒಬ್ಬ ಜೋರಾಗಿ ಕೇಳಿದ. ಯಾರೊ ಕನಸಿನಲ್ಲಿ ಮಾತನಾಡಿದಂತಾಗಿ, ''ಮಿಂಚುತ್ತಾ....? ಮಳೆ ಬಂದರೆ ಮಿಂಚು ಬರುತ್ತೆ'' ಎಂದ ಹರ್ಷ.

''ಲೇ ನಿನ್ನ.... ನನ್ನ ಮಗನೆ ಒಂದು ಡಿಚ್ಚಿ ಕೊಟ್ರೆ ನಕ್ಷತ್ರ ಕಾಣಿಸಿಬಿಡುತ್ತೆ. ಇಕ್ಕೊ ಈ ನನ್ನ ಮಗನಿಗೆ'' ಒಬ್ಬ ಕೂಗಿದ. ''ಕುಳಿತಿದ್ರೆ ಡಿಚ್ಚಿ ಹೊಡೆಯೊದು ಕಷ್ಟ ಗುರು'' ಎಂದ ಮತ್ತೊಬ್ಬ. ''ಲೇ ಸುವರ್ ನನ್ನ ಮಗನೆ ಡಿಚ್ಚಿ ಹೊಡೆಯೊ ಅಂದರೆ ಹೊಡೆದುಬಿಡಬೇಕು. ಅವನು ಕುಳಿತಿದ್ದಾನೊ ನಿಂತಿದ್ದಾನೊ? ಕಣ್ ಕೇಳ್ತಾನೆ. ಇವನಿಗಿಡ್ರೊ ಮೊದಲು'' ಗಬ್ಬರ್ ಶೈಲಿಯಲ್ಲಿ ಒಬ್ಬ ಹೇಳಿದ.

''ಲೇ ನಿನ್ನಜ್ಜಿ , ಜಲ್ದಿ ಹೇಳು. ಎಲ್ಲಿ ಆ ನನ್ನ ಮಗ ಮಿಂಚ....? ಟೇಬಲ್ ಕೆಳಗಡೆ ಬಚ್ಚಿಟ್ಟುಕೋಳ್ತೀಯಾ...? ಅವನ್ನ?'' ಅಷ್ಟರಲ್ಲಿ ಒಬ್ಬ ಹರ್ಷನ ಗಲ್ ಪಟ್ಟಿಯನ್ನು ಹಿಡಿದುಕೊಂಡು ಮೇಲಕ್ಕೆ ಎತ್ತಿದ. ಈ ನನ್ನ ಮಗ ಫುಲ್ ನಿಶಾದಲ್ಲಿದ್ದಾನೆ. ಇವನಿಗೆ ಹೀಗೇಳಿದರೆ ಆಗಲ್ಲ'' ಎಂದಿದ್ದೆ ಎರಡೂ ಕೆನ್ನೆಗೂ ನಾಲ್ಕಾರು ಸಲ ಬಾರಿಸಿದ . ಹರ್ಷನಿಗೆ ನಿಜವಾಗಿಯೂ ತಲೆಯಲ್ಲಿ ನಕ್ಷತ್ರಗಳು ಕಾಣಿಸುತ್ತಿದ್ದವು. ಕೆನ್ನೆಗಳು ಬರುಬುರನೆ ಪೂರಿಗಳಂತೆ ಊದಿಕೊಂಡುಬಿಟ್ಟವು.

''ನಡಿಯರೊ'' ಎಂದಿದ್ದೆ ಎಲ್ಲರೂ ಬಂದ ರೀತಿಯಲ್ಲೆ ಮತ್ತೆ ದಭದಭನೆ ಲಾಂಗು ಕತ್ತಿಗಳನ್ನು ಗಾಳಿಯಲ್ಲಿ ಝಳುಪಿಸುತ್ತ ಹೊರಟು ಹೋದರು. ಸುತ್ತಲಿದ್ದವರಿಗೆ ಏನು ನಡೆಯುತ್ತದೆ ಎನ್ನುವುದು ಗೊತ್ತಾಗಲಿಲ್ಲ.

✲ ✲ ✲

ಪೊಲೀಸ್ ಠಾಣೆಯಲ್ಲಿ ಸಬ್‌ಇನ್‌ಸ್ಪೆಕ್ಟರ್ ಕುಳಿತುಕೊಂಡಿದ್ದಾರೆ ಸುತ್ತಲು ನಾಲ್ಕಾರು ಪೇದೆಗಳು ನಿಂತುಕೊಂಡಿದ್ದಾರೆ. ''ಲೋ ನೀವು ಏನು ಮಾಡ್ತಿರೋ ಏನೋ. ನನಗೆ ಗೊತ್ತಿಲ್ಲ. ನನಗೆ ಕುತ್ತಿಗೇಗೆ ಬಂದಿದೆ. ಈ ಪತ್ರಿಕೆಯವರು ಸತ್ತೋದ ಕೇಸುಗಳನ್ನೆಲ್ಲ ಆಗಾಗ ಕೆದಕಿ, ಕೆದಕಿ ಏನೇನೊ ಬರೆದುಬಿಡ್ತಾರೆ. ನಮಗೆ ಗೊತ್ತಿಲ್ದೆ ಇರೊದೆಲ್ಲ ಅವರಿಗೆ ಗೊತ್ತಿರುತ್ತೆ. ನಾವು ಪೊಲೀಸರು ಅಂತ ಯಾಕ್ ಹೇಳಿಕೊಂಡು ತಿರುಗುಬೇಕು....? ಕಮೀಷನರ್ ಸಾಹೇಬರು ಆ ಅನು ಕೇಸ್ ಬಗ್ಗೆ ವಿವರಣೆ ಕೇಳಿದ್ದಾರಂತೆ. ಒಂದು ವಾರದಲ್ಲಿ ಆ ಕೇಸನ್ನ ಕಂಡಿಡಿಯಲಿಲ್ಲ ಅಂದರೆ ಯಾರ್‍ಯಾರಿಗೆ ಏನೇನು ಗ್ರಹಚಾರ ಕಾದಿದೆಯೊ ಗೊತ್ತಿಲ್ಲ. ಸರ್ಕಲ್ ಇನ್‌ಸ್ಪೆಕ್ಟರ್ ಫೋನ್ ಮಾಡಿದ್ದಾರೆ. ನಾಳೆ ಬೆಳಗ್ಗೆ ಸರ್ಕಲ್ ಇನ್‌ಸ್ಪೆಕ್ಟರ್ ಬರ್‍ತಾರಂತೆ. ನೀವಿಬ್ಬರು ಆ ಏರಿಯಾಗೋಗಿ ಒಂದಷ್ಟು ಡೆಟಾ ಕಲಕ್ಟ್ ಮಾಡಿಕೊಂಡು ಬನ್ನಿ'' ಎನ್ನುತ್ತಿದ್ದಂತೆ ಜೀಪೊಂದು ಬುರ್‍ರನೆ ಬಂದು ಠಾಣೆ ಮುಂದೆ ನಿಂತುಕೊಂಡಿತು.

ಹೊರಗಿದ್ದ ಸೆಂಟ್ರಿ ಟಿಪ್‌ಟಾಪಾಗಿ ಒಂದು ಸೆಲ್ಯೂಟ್ ಹೊಡೆಯುತ್ತಿದ್ದಂತೆ ಇನ್ನೊಬ್ಬ ಪೇದೆ ಒಳಕ್ಕೆ ದಾವಿಸಿ ''ಸಿ.ಐ. ಬಂದರು ಸಾರ್'' ಎಂದು ಮೆಸೇಜ್ ಕೊಟ್ಟ. ಎಸ್.ಐ. ಬಟ್ಟೆ ಸರಿಪಡಿಸಿಕೊಂಡು, ಕ್ಯಾಪ್ ಧರಿಸಿ ದಡಬಡನೆ ಎದ್ದುನಿಂತು ಒಂದು ಸೆಲ್ಯೂಟ್ ಹೊಡೆದು ಸಿ.ಐ. ಅವರನ್ನು ಬರಮಾಡಿಕೊಂಡರು. ಸಿ.ಐ.ಗೆ ಸ್ಥಳ ಮಾಡಿಕೊಟ್ಟ ಎಸ್.ಐ. ಪಕ್ಕದಲ್ಲಿ ನಿಂತುಕೊಂಡರು. ಸಿ.ಐ. ಪಕ್ಕಕ್ಕೆ ನೋಡಿದ್ದೆ ಪೇದೆಗಳು ದೂರ ಸರಿದರು. ನಾಳೆ ಬರ್‍ತೀನಿ ಅಂತ ಈಗ್ಲೆ ಬಂದುಬಿಟ್ಟಿದ್ದಾರಲ್ಲ....? ಎಲ್ಲೊ ಗುದ್ದುಕೊಂಡು ಬಂದಿರಬೇಕು. ಎಸ್.ಐ. ಒಳಗೊಳಗೆ ಹೇಳಿಕೊಂಡ.

''ನೋಡ್ರಿ ಆ ಅನು ಹುಡುಗಿ ಡೆಥ್ ಆಗಿದ್ದ ಮನೇನ ನಾನು ಈಗ್ಲೆ ನೋಡಬೇಕು'' ಸಿ.ಐ. ಹೇಳಿದ್ದೆ ''ಆಯಿತು ಸರ್'' ಎಂದರು ಎಸ್.ಐ., ಸಿ.ಐ. ಮತ್ತು ಎಸ್.ಐ. ಇಬ್ಬರು ಪೇದೆಗಳ ಜೊತೆಗೆ ಅನು ಡೆಥ್ ಆಗಿದ್ದ ಮನೆಯ ಕಡೆಗೆ ಜೀಪಿನಲ್ಲಿ ಹೊರಟರು. ಸ್ವಲ್ಪ ಹೊತ್ತಿನಲ್ಲೆ ಮನೆ ಮುಂದೆ ಜೀಪು ನಿಂತುಕೊಂಡಿತು. ಆ ಮನೆಗೆ ಇನ್ನೂ ಯಾರೂ ಬಾಡಿಗೆಗೆ ಬಂದಿರಲಿಲ್ಲ. ಪಕ್ಕದ ಮನೆಯವರನ್ನು ಕೇಳಿದಾಗ ಬೀಗದ ಕೈ ತಮ್ಮಲ್ಲೆ ಇರುವುದಾಗಿ ತಿಳಿಸಿ ಬಾಗಿಲು ತೆಗೆದರು. ಎಸ್.ಐ., ಸಿ.ಐ.ಯವರಿಗೆ ಎಲ್ಲವನ್ನು ವಿವರಿಸುತ್ತಾ ಬಂದು ಅವಳು ನೇಣು ಹಾಕಿಕೊಂಡು ಸ್ಥಳ, ಫ್ಯಾನ್ ಎಲ್ಲವನ್ನು ತೋರಿಸಿದರು. ಸಿ.ಐ. ಆಗಲೆ ಒಮ್ಮೆ ನೋಡಿದ್ದರು ಮತ್ತೊಮ್ಮೆ ಕುತೂಹಲವಾಗಿ ನೊಡುತ್ತಿದ್ದರು. ಅಲ್ಲಿಂದ ಹೊರಕ್ಕೆ ಹೋಗಿ ಮನೆಯ ಮೇಲಕ್ಕೆ ಹತ್ತಿ ಸುತ್ತಲು ನಿಂತು ನೋಡಿದರು.

ಸೂರ್ಯ ಪಶ್ಚಿಮ ದಿಕ್ಕಿಗೆ ಹೆಜ್ಜೆಗಳನ್ನು ಇಡುತ್ತಿದ್ದು, ಸಿ.ಐ. ಅವರು ಮನೆಯ ಪೂರ್ವ ಭಾಗದಲ್ಲಿ ನಿಂತು ಪಶ್ಚಿಮದ ಕಡೆಗೆ ನೋಡುತ್ತಿದ್ದರು. ಒಡೆದುಕೊಂಡ ಸೂರ್ಯನ ಸಾವಿರಾರು ಕಿರಣಗಳು ಪಳಪಳನೆ ನೆಲದ ಮೇಲೆ ಮಿಂಚುತ್ತಿದ್ದವು. ಸಿ.ಐ. ಕಣ್ಣುಗಳನ್ನು ಸಣ್ಣದಾಗಿ ಮಾಡಿಕೊಂಡು ಮತ್ತೆ ಮತ್ತೆ ನೋಡಿದರು. ಕಿರಣಗಳು ಹಾಗೆ ಹೊಳೆಯುತ್ತಿದ್ದವು. ಕಿರಣಗಳ ಹತ್ತಿರಕ್ಕೆ ಹೋಗಿ ಕುಳಿತುಕೊಂಡು ನಿಧಾನವಾಗಿ ನೋಡಿದರು. ಗ್ಲಾಸು ಹೊಡೆದಾಗ ಚೆಲ್ಲಿ ಹೋಗಿರುವ ಗ್ಲಾಸಿನ ಚೂರುಗಳು ಅಲ್ಲೆಲ್ಲ ಹರಡಿಕೊಂಡಿದ್ದವು.

''ಎಸ್.ಐ. ಇಲ್ಲಿ ಬನ್ನಿರಿ.... ಇದೇನು ನೋಡ್ರಿ'' ಸಿ.ಐ. ಹೇಳಿದರು. ಎಸ್.ಐ. ಗ್ಲಾಸ್ ಹೊಡೆದಿರುವುದು ಸರ್'' ಎಂದರು. '' ಅದೆ ಯಾತಕ್ಕೆ ಹೊಡೆದಿದೆ....?'' ''ಹೌದು ಸರ್'' ಎಂದಿದ್ದೆ ಇಬ್ಬರೂ ಕುತೂಹಲದಿಂದ ವೆಂಟಲೇಟರನ್ನು ನೋಡಿದರು. ವೆಂಟಲೇಟರ್ ಸುತ್ತಲು ಸಿಮೆಂಟ್ ಹಾಕಿರುವುದು ಕಾಣಿಸಿತು. ''ಮನೆ ಕಟ್ಟಿ ನಾಲ್ಕೈದು ವರ್ಷ ಆಗಿರಬೇಕು? ಇಲ್ಲಿ ಗ್ಲಾಸನ್ನು ಹೊಸದಾಗಿ ಕೂರಿಸಿದಂತಿದೆಯಲ್ಲ...?'' ಸಿ.ಐ. ಅನುಮಾನವಾಗಿ ಹೇಳಿದರು. ಅನಂತರ ಕೆಳಕ್ಕೆ ಇಳಿದು ಬಂದು ಪಕ್ಕದ ಮನೆಯವರನ್ನು ವಿಚಾರಿಸಿದಾಗ ''ನಮಗೆ ಗೊತ್ತಿಲ್ಲ. ಈ ಮನೆ ನೋಡಿಕೊಳ್ತಾರಲ್ಲ ರಂಗಾರಾವ್ ಅವರ್ನ ಕೇಳಬೇಕು'' ಎಂದರು. ರಂಗಾರಾವ್‌ನನ್ನು ಅರ್ಜಂಟಾಗಿ ಕರೆದುಕೊಂಡು ಬರುವಂತೆ ಸಿ.ಐ., ಎಸ್.ಐ.ಗೆ ಹೇಳಿದರು. ಎಸ್.ಐ ಪಕ್ಕದ ಮನೆಯಲ್ಲಿ ರಂಗಾರಾವ್ ಫೋನ್ ಸಂಖ್ಯೆ ತೆಗೆದುಕೊಂಡು ರಂಗಾರಾವ್ ಅವರನ್ನು ಅರ್ಜಂಟಾಗಿ ಬರುವಂತೆ ಕರೆದರು. ರಂಗಾರಾವ್ ಅರ್ಧಗಂಟೆಯಲ್ಲಿ ಅಲ್ಲಿಗೆ ಬಂದರು.

ಸಿ.ಐ. ನೇರವಾಗಿ ರಂಗಾರಾವ್‌ಗೆ ವೆಂಟಲೇಟರ್ ತೋರಿಸಿ ''ಇದನ್ನು ಯಾವಾಗ ರಿಪೇರಿ ಮಾಡಿದ್ದು...?'' ಕೇಳಿದರು. ''ನನಗೆ ಗೊತ್ತಿಲ್ಲ ಸರ್'' ರಂಗಾರಾವ್ ಹೇಳಿದರು. ''ಆದರೆ ಇದು ಮನೆಕಟ್ಟಿದಾಗ ಹಾಕಿದ್ದಂತು ಅಲ್ಲ, ಇತ್ತೀಚೆಗೆ ರಿಪೇರಿ ಮಾಡಿ ಹಾಕಿದ್ದಾರೆ?'' ಸಿ.ಐ. ಪ್ರಶ್ನಿಸಿದರು. ''ನನಗೆ ಗೊತ್ತಿಲ್ಲ ಸರ್...?'' ''ಅಂದರೆ ಇದನ್ನ ನೀವು ರಿಪೇರಿ ಮಾಡಿಲ್ಲ....'' ''ಇಲ್ಲ ಸರ್'' ''ನಿಮಗೆ ಗೊತ್ತಿಲ್ಲದೆ ಬೇರೆ ಯಾರಾದರೂ ರಿಪೇರಿ ಮಾಡಿರಬಹುದ....?'' ''ಸಾಧ್ಯ ಇಲ್ಲ ಸರ್.... ಯಾಕೆಂದರೆ ಈ ಮನೆಯವರು ಅಮೆರಿಕಾಗೆ ಹೋಗಿ ನಾಲ್ಕು ವರ್ಷ ಆಯಿತು. ಅವತ್ತಿನಿಂದ ಒಂದು ಕೀ ನನ್ಹತ್ತಿರ, ಇನ್ನೊಂದು ಕೀ ಆ ಹುಡುಗಿಯರ ಹತ್ತಿರ ಇತ್ತು. ಈಗ ಆ ಹುಡುಗಿಯರು ಖಾಲಿಮಾಡಿ ಹೋದಮೇಲೆ ಎರಡು ಕೀನು ನನ್ಹತ್ತಿರಾನೆ

ಇವೆ. ಈ ಮನೆಯವರಿಗೆ ಯಾರಾದರು ಬಂದರೆ ಮನೆ ತೋರಿಸಿ ಅಂತ ಒಂದು ವಾರದ ಹಿಂದೆ ಕೊಟ್ಟೆ'' ಎಂದರು ರಂಗಾರಾವ್.

''ಅಂದರೆ ಸುಮಾರು ನಾಲ್ಕು ವರ್ಷದಿಂದ ಏನು ರಿಪೇರಿ ಆಗಿಲ್ಲ....'' ''ಹೌದು ಸರ್ ನನಗೆ ಗೊತ್ತಾದಂಗೆ ಏನೂ ರಿಪೇರಿ ಆಗಿಲ್ಲ'' ರಂಗಾರಾವ್ ಹೇಳಿದರು. ''ಆಯಿತು, ನೀವು ಹೋಗಬಹುದು....? ನಮಗೆ ಏನಾದರು ವಿಷಯ ಬೇಕಾದರೆ ನಿಮ್ಮನ್ನ ಕೇಳ್ತೀವಿ'' ಸಿ.ಐ. ಹೇಳಿದರು....'' ಆಯಿತು ಸರ್. ಖಂಡಿತ ನನಗೆ ಗೊತ್ತಿದ್ದು ಹೇಳ್ತೀನಿ. ನಮಸ್ಕಾರ ಸರ್'' ರಂಗಾರಾವ್ ಹೊರಟು ಹೋದರು.

ಕೃತಿಕಾ ಮತ್ತು ರೂಪಾಳನ್ನು ಭೇಟಿಯಾದ ಪೊಲೀಸರು ವೆಂಟಲೇಟರಿಗೆ ಗ್ಲಾಸು ಬದಲಾಗಿರುವುದನ್ನು ಪ್ರಶ್ನಿಸಿದರು. ಅದನ್ನು ನಾವು ಗಮನಿಸಿಯೆ  ಇಲ್ಲ ಎಂದು ಉತ್ತರಿಸಿದರು. ಪೊಲೀಸರು ಒಬ್ಬ ಸಿವಿಲ್ ಎಂಜಿನಿಯರನ್ನು ಕರೆದುಕೊಂಡು ಬಂದು ಇದನ್ನು ಎಷ್ಟು ದಿನಗಳ ಹಿಂದೆ ಬದಲಾಯಿಸಲಾಗಿದೆ ಎಂದು ಪ್ರಶ್ನಿಸಿದರು. ಹೆಚ್ಚು ಕಡಿಮೆ ಎರಡು ತಿಂಗಳುಗಳ ಹಿಂದೆ ಗ್ಲಾಸ್ ಬದಲಾಯಿಸಿ ಸಿಮೆಂಟ್ ಹಾಕಿರುವುದಾಗಿ ಸಿವಿಲ್ ಇಂಜಿನಿಯರ್ ತಿಳಿಸಿದರು.

ಅನು ಸಾವು ಸಂಭವಿಸಿದ್ದು ಹೆಚ್ಚು ಕಡಿಮೆ ಅಷ್ಟೇ ದಿನಗಳ ಹಿಂದೆ ಎನ್ನುವುದು ಖಚಿತವಾಯಿತು. ಈಗ ಪೊಲೀಸರ ಮಿದುಳಿಗೆ ಒಂದು ಆಲೋಚನೆ ಹೋಳೆಯಿತು. ಇದು ಆತ್ಮಹತ್ಯೆ ಅಲ್ಲ ಕೊಲೆ. ಶವ ಪರೀಕ್ಷೆಯ ವರದಿಯಲ್ಲಿ ನೇಣುಹಾಕಿಕೊಂಡಿರಲು ಸಾಧ್ಯವಿಲ್ಲ ಏಕೆಂದರೆ ಎಪಿಗ್ಲಾಟಿಸ್ ಮುಚ್ಚಿಕೊಂಡಿರಲಿಲ್ಲ. ಎಪಿಗ್ಲಾಟಿಸ್ ಮುಚ್ಚಿಕೊಂಡಿದ್ದರೆ ನಾಲಿಗೆ ಹೊರಬರುಬೇಕಾಗಿತ್ತು. ಆದುದರಿಂದ ಉಸಿರುಕಟ್ಟಿ ಸಾಯಿಸಿ ನೇಣುಹಾಕಿರಲು ಸಾಧ್ಯವಿದೆ ಎಂದು ಶವ ಪರೀಕ್ಷೆಯ ವರದಿಯಲ್ಲಿ ತಿಳಿಸಲಾಗಿತ್ತು. ಈಗ ಶವ ಪರೀಕ್ಷೆಯ ವರದಿ ಮತ್ತು ಪೊಲೀಸರ ವೆಂಟಲೇಟರಿನ ಸಂಶೋಧನೆ ತಾಳೆಯಾಗುತ್ತಿತ್ತು. ಈಗ ಪೊಲೀಸ್ ಠಾಣೆಯಲ್ಲಿ ಕುಳಿತ ಪೊಲೀಸರು ಒಂದು ತಂಡವನ್ನು ರೂಪಿಸಿ ಅವರು ಮಾಡಬೇಕಾಗಿರುವ ಸೂಚನೆಗಳನ್ನು ನೀಡಿ ಫೀಲ್ಡ್‌ಗೆ ಕಳುಹಿಸಿಕೊಟ್ಟರು. ಆ ತಂಡ ಮೊದಲಿಗೆ ಅನು ತಂದೆ ತಾಯಿ ಇದ್ದ ಊರಿನ ಕಡೆಗೆ ಹೊರಟಿತು.

* * *

ನಾಲ್ಕು ದಿನಗಳ ಕಾಲ ಆಸ್ಪತ್ರೆಯಲ್ಲಿ ಪೂರಿಗಳಂತೆ ಬಾತುಕೊಂಡಿದ್ದ ಕೆನ್ನೆಗಳಿಗೆ ಚಿಕಿತ್ಸೆ ಪಡೆದ ಮೇಲೆ ಹರ್ಷನನ್ನು ಮಿಂಚ ಗಾಡಿಯಲ್ಲಿ ಕೂರಿಸಿಕೊಂಡು ಮನೆಗೆ ತಲುಪಿಸಿದ. ಇಬ್ಬರು ವಿಷಯ ಯಾರಿಗೂ ಗೊತ್ತಾಗದಂತೆ ನೋಡಿಕೊಂಡಿದ್ದರು.

ಆಸ್ಪತ್ರೆಯ ಖರ್ಚುಗಳನ್ನೆಲ್ಲ ಮಿಂಚನೆ ವಹಿಸಿಕೊಂಡಿದ್ದ. ಹರ್ಷ ತನ್ನ ಮನೆಯಲ್ಲಿ ಒಂದು ವಾರ ವಿಶ್ರಾಂತಿ ಪಡೆದುಕೊಂಡ ಮೇಲೆ ಮಿಂಚ ಒಂದು ದಿನ ಹರ್ಷನ ಮನೆಗೆ ಬಂದು, ಹರ್ಷನನ್ನು ತನ್ನ ವಾಹನದಲ್ಲಿ ಕೂರಿಸಿಕೊಂಡು ಹೊರಟ.

ವಾಹನ ನೇರವಾಗಿ ಒಂದು ಹೋಟಲ್ ಮುಂದೆ ನಿಂತುಕೊಂಡಿತು. ಮಿಂಚ ಮುಂದೆ ಹರ್ಷ ಹಿಂದೆ ವೇಗವಾಗಿ ಒಳಕ್ಕೆ ನಡೆದರು. ಎದುರಿಗೆ ನಾಲ್ಕಾರು ಕಟ್ಟಾಳುಗಳು ಟೇಬಲ್ ಮುಂದೆ ಕುಳಿತುಕೊಂಡಿದ್ದಾರೆ. ಅವರ ಮುಂದೆ ಬಾಟಲುಗಳು, ನಾನ್‌ವೆಜ್ ತಟ್ಟೆಗಳಿವೆ. ಮಿಂಚ ಹಿಂದಕ್ಕೆ ಸರಿದು, ''ನೋಡು ನಿನಗೆ ಹೊಡೆದಿದ್ದು ಆ ಬ್ಲಾಕ್ ಜಾಕೆಟ್‌ನವನು'' ಎಂದ, ಅಷ್ಟೆ. ಹರ್ಷ ಚಿರತೆಯಂತೆ ದಾವಿಸಿ ಬ್ಲಾಕ್ ಜಾಕೆಟ್‌ನವನನ್ನು ಕುರ್ಚಿಯಿಂದ ಮೇಲಕ್ಕೆತ್ತಿ ಕೆಳಕ್ಕೆ ಎಸೆದ. ಆಗಲೆ ಸ್ವಲ್ಪ ಏರಿಸಿಕೊಂಡಿದ್ದ ಬ್ಲಾಕ್ ಜಾಕೆಟ್‌ನವನು ಏನು ನಡೆಯುತ್ತಿದೆ ಎಂದುಕೊಳ್ಳುವಷ್ಟರಲ್ಲಿ ಅವನ ಕೆನ್ನೆಗಳ ಮೇಲೆ ನಾಲ್ಕಾರು ಪ್ರಹಾರಗಳು ಬೆಂಕಿಯಂತೆ ಸಿಡಿದಿದ್ದವು.

ಸುತ್ತಿಲಿದ್ದವರು ಹರ್ಷನ ಮೇಲೆ ಎರಗುವ ಚಿಹ್ನೆಗಳು ಕಾಣಿಸುತ್ತಿದ್ದಂತೆ ಕಾಲುಗಳನ್ನು ಸರಪಳಿಗಳನ್ನಾಗಿಸಿಕೊಂಡ ಮಿಂಚ ಅವರನ್ನು ದೂರದೂರಕ್ಕೆ ತಳ್ಳಿ ಗೋಡೆಯಂತೆ ಅಡ್ಡವಾಗಿ ನಿಂತುಕೊಂಡು, ಬೆಲ್ಟ್ ಬಿಚ್ಚಿ ಒಮ್ಮೆ ಗಾಳಿಯಲ್ಲಿ ಜುಳುಪಿಸಿದ. ಅಷ್ಟರಲ್ಲಿ ಹರ್ಷ ತನ್ನ ಕೆಲಸವನ್ನು ಮುಗಿಸಿಬಿಟ್ಟಿದ್ದ. ಬ್ಲಾಕ್ ಜಾಕೆಟ್‌ನವನ ಕೆನ್ನೆಗಳು ರಕ್ತ ಹೆಪ್ಪುಗಟ್ಟಿಕೊಂಡು ಬಿಟ್ಟಿದ್ದವು. ಒಸಡುಗಳಿಂದ ರಕ್ತ ಬಳಬಳನೆ ಕಾರಿಕೊಂಡಿತು.

''ನನ್ನ ಮಕ್ಕಳಾ.... ಇದು ಸ್ಯಾಂಪಲ್, ಇನ್ನೊಂದು ಸಲ ನಮ್ಮ ಏರಿಯಾದಲ್ಲಿ ಎಲ್ಲಾದರು ಕಾಣಿಸಿಕೊಂಡರೆ ಕೈಕಾಲುಗಳನ್ನು ತೆಗೆದುಬಿಡ್ತೀನಿ ಭದ್ರ'' ಮಿಂಚ ಎಚ್ಚರಿಕೆ ಕೊಡುತ್ತಿದ್ದಂತೆ, ಬಿದ್ದಿದ್ದವರೆಲ್ಲ ಎದ್ದು ಬಿದ್ದು ಹೋಟೆಲ್ ಹೊರಕ್ಕೆ ಓಡಿಹೋದರು. ಕೆಳಕ್ಕೆ ಬಿದ್ದಿದ್ದ ಬ್ಲಾಕ್ ಜಾಕೆಟ್‌ನವರು ಕೆನ್ನೆಗಳನ್ನು ಒಮ್ಮೆ ತಡವಿಕೊಂಡ ಅಷ್ಟೆ. ಕೆನ್ನೆಗಳು ಬೆಂಕಿಯಂತೆ ಭಗಭಗನೆ ಉರಿಯತೊಡಗಿದವು. ಮಿಂಚ ಮತ್ತು ಹರ್ಷ ಅಲ್ಲಿಂದ ಹೊರಟುಹೋದರು.

ಅಲ್ಲಿಂದ ಹೊರಟ ವಾಹನ ಒಂದು ದೊಡ್ಡ ಮನೆಯ ಕಾಂಪೌಂಡಿನ ಒಳಗೆ ನಿಂತುಕೊಂಡಿತು. ಗೂರ್ಖಾ ಬಾಗಿಲಲ್ಲೆ ಮಿಂಚನನ್ನು ನೋಡಿ ಒಂದು ಸೆಲ್ಯೂಟ್ ಹೊಡೆದು ಒಳಕ್ಕೆ ಬಿಟ್ಟ. ಕಾಂಪೌಂಡಿನಲ್ಲಿ ವಿಧವಿಧವಾದ ಬಣ್ಣಬಣ್ಣದ ಹೂವಿನ ಗಿಡಗಳು, ಹಲವು ರೀತಿಯ ಮರಗಳು ಬೆಳೆದು ನಿಂತಿದ್ದವು. ಹರ್ಷ ಭವ್ಯವಾದ ಕಾಂಪ್‌ಂಡನ್ನು ನೋಡಿ ಎಷ್ಟೊಂದು ದೊಡ್ಡಮನೆ ಎಂದುಕೊಳ್ಳುತ್ತಿದ್ದಂತೆ ಮಿಂಚ

ಹೆಂಚಿನ ವರಾಂಡ ಕೆಳಕ್ಕೆ ನಡೆದುಹೋಗಿ ಯಾವುದೊ ಯಂತ್ರದ ಮುಂದೆ ರೊಬೆಟ್ ನಿಂತುಕೊಂಡಂತೆ ನಿಂತುಕೊಂಡ. ಅವನ ಮುಂದೆ ಯಾರೂ ಇಲ್ಲದಿದ್ದರು ಯಾರ ಜೊತೆಯಲ್ಲೊ ಮಾತನಾಡುತ್ತಿದ್ದ. ಅನಂತರ ಹರ್ಷನನ್ನು ಕರೆದು ಅದೇ ಸ್ಥಳದಲ್ಲಿ ನಿಲ್ಲುವಂತೆ ತಿಳಿಸಿದ.

ಹರ್ಷನಿಗೆ ಏನೂ ಅರ್ಥವಾಗದೆ, ಮಿಂಚ ಹೇಳಿದಂತೆ ನಿಂತುಕೊಂಡ. ಯಾರೊ ಅವನನ್ನು ''ಏನು ನಿನ್ನೆಸರು....?'' ಪ್ರಶ್ನಿಸಿದರು. ಹರ್ಷ ತನ್ನ ಹೆಸರನ್ನು ಕಾಣದ ಮನುಷ್ಯನ ಧ್ವನಿಗೆ ಉತ್ತಿರಿಸಿದ. ಮೂರನೆ ಮಹಡಿಯ ಮೇಲೆ ಕುಳಿತುಕೊಂಡಿದ್ದ ಒಬ್ಬ ದೃಡಕಾಯ ವ್ಯಕ್ತಿ ಸ್ಕ್ರೀನ್‌ನಲ್ಲಿ ಹರ್ಷನನ್ನು ನೋಡುತ್ತ ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಕೇಳುತ್ತಿದ್ದ. ಜೊತೆಗೆ ಹರ್ಷನ ಮುಖ ಮತ್ತು ಅವನ ಬಾಡಿ ಗೆಚ್ಚರ್‌ನಿಂದ ಅವನ ವ್ಯಕ್ತಿತ್ವವನ್ನು ಆ ವ್ಯಕ್ತಿ ಅಳತೆ ಮಾಡುತ್ತಿದ್ದ.

ಅನಂತರ ''ಆಯಿತು'' ಎಂದಿತು ಧ್ವನಿ. ಹರ್ಷ ಪಕ್ಕಕ್ಕೆ ಸರಿದು ನಿಂತುಕೊಳ್ಳುತ್ತಿದ್ದಂತೆ ಕಾವಲುಗಾರ ಮಿಂಚನಿಗೆ ಕಣ್ಣುಗಳಲ್ಲೆ ಏನೊ ಸೂಚನೆ ನೀಡಿದ. ಮಿಂಚ ಹರ್ಷನನ್ನು ಕರೆದುಕೊಂಡು ಮಂದವಾದ ವಿದ್ಯುತ್ ಬೆಳಕಿನಲ್ಲಿ ಸುತ್ತಿ ಬಳಸಿ ಹತ್ತಿ ಇಳಿದು ಬಂಗಲೆ ಒಳಕ್ಕೆ ಕರೆದುಕೊಂಡು ನಡೆದ. ಲಖನೌದಲ್ಲಿರುವ ಬೂಲ್‌ಬುಲಯ್ಯ ಕೋಟೆಯ ಬಗ್ಗೆ ಕೇಳಿರುವ ಹರ್ಷ ಬಹುಶಃ ಬೂಲ್‌ಬುಲಯ್ಯ ಕೋಟೆ ಇದೆ ರೀತಿಯಾಗಿರಬಹುದು ಎಂದುಕೊಂಡ. ಅಂತಿಮವಾಗಿ ಇಬ್ಬರೂ ಮಂದ ಬೆಳಕಿರುವ ಹಾಲ್‌ಗೆ ಹೋಗುತ್ತಿದ್ದಂತೆ ಅಲ್ಲೊಬ್ಬ ಅವರನ್ನು ಸೋಫಾ ತೋರಿಸಿ ಕುಳಿತುಕೊಳ್ಳುವಂತೆ ತಿಳಿಸಿದ.

ಹರ್ಷ ತನ್ನ ಕಣ್ಣುಗಳಲ್ಲಿರುವ ರಾಡ್‌ಗಳನ್ನು ಅಗಲಿಸಿಕೊಂಡು ಸುತ್ತಲು ನೋಡುತ್ತಿದ್ದಂತೆ ಆಕೃತಿಗಳು ಒಂದೊಂದಾಗಿ ಕಣ್ಣುಗಳಿಗೆ ಗೊಚರಿಸ ತೊಡಗಿದವು. ಆ ರೀತಿಯ ಬಂಗಲೆ, ಬಂಗಲೆಯಲ್ಲಿರುವ ಕಾಲಕೃತಿಗಳನ್ನು ಅವನು ಎಂದೂ ನೋಡಿರಲಿಲ್ಲ. ಇದ್ದಕ್ಕಿದ್ದಾಗೆ ಎದುರಿಗೆ ಒಬ್ಬರು ಕಾಣಿಸಿಕೊಂಡರು. ಮಿಂಚ ದಿಢೀರನೆ ಎದ್ದುನಿಂತು ''ನಮಸ್ಕಾರ ಅಣ್ಣ'' ಎಂದ. ಪಕ್ಕದಲ್ಲಿರುವ ಹರ್ಷನು ಎದ್ದುನಿಂತುಕೊಂಡ. ಆ ವ್ಯಕ್ತಿ ''ಏನು ಮಿಂಚ ಚೆನ್ನಾಗಿದ್ದೀಯಾ....?'' ಎಂದಿದ್ದೆ ''ಎಲ್ಲಾ ನಿಮ್ಮ ಆರ್ಶೀವಾದ ಅಣ್ಣ'' ಎಂದ ಮಿಂಚ. ''ಏನು ವಿಶೇಷ....?'' ''ಆ ಗಣೇಶನ ಗುಂಪಿನವರದು ತುಂಬಾ ತಲೆ ನೋವಾಗಿಬಿಟ್ಟಿದೆ ಅಣ್ಣ. ನಾನ್ ಎಲ್ಲಿ ಹೋದರು ಹಿಂದೇನೆ ಬರ್ತ್ತಾರೆ. ಮೊನ್ನೆ ಹೋಟೆಲಿನಲ್ಲಿ ಕುಳಿತಿದ್ದರೆ ಬಂದುಬಿಟ್ಟಿದ್ದಾರೆ.

ನಾನು ಕೈಗೆ ಸಿಗಲಿಲ್ಲ ಅಂತ ಇವರಿಗೆ ಚೆನ್ನಾಗಿ ಹೊಡೆದುಬಿಟ್ಟಿದ್ದಾರೆ ಪಾಪ '' ಎನ್ನುತ್ತಿದ್ದಂತೆ,

''ವಿಷಯ ಗೊತ್ತಾಯಿತು. ನೀನು ಅವರ ಗ್ಯಾಂಗ್‌ನವನೊಬ್ಬನಿಗೆ ಕೈ ತೆಗೆದುಬಿಟ್ಟಿದ್ದೀಯಲ್ಲ ಅದಕ್ಕೆ ಅವರಿಗೆ ಕೋಪ. ಯಾವುದಕ್ಕೂ ಉಷಾರಾಗಿರು. ಮಿಸ್ಟರ್ ಹರ್ಷ ನಿನ್ನ ಬಗ್ಗೆ ಎಲ್ಲಾ ಗೊತ್ತಾಯಿತು'' ಎರಡೆಜ್ಜೆ ಮುಂದಕ್ಕೆ ಬಂದು ಹರ್ಷನ ಭುಜದ ಮೇಲೆ ಕೈ ಹಾಕಿ '' ಈ ಕಾಲದಲ್ಲಿ ಒಳ್ಳೆಯವರಾಗಿ ಇರಬೇಕು ಅಂದರೆ ಕಷ್ಟ ನೋಡು. ಆದರೆ ಒಂದು.... ಯಾವುದಾದರು ಮೋಟಿವೇಷನ್ ಇದ್ದರೆ ಅದನ್ನ ಸಾಧಿಸಲೇಬೇಕು. ಸಾಧನೆ ಮಾಡಬೇಕಾದರೆ ಯಾವ ತೊಂದರೆ ಬಂದರು ಯಾರ ಜೊತೇನೂ ಕಾಂಪ್ರಮೈಜ್ ಮಾಡ್ಕೋಬಾರದು, ಆಗ ಸಕ್ಸಸ್ ಆಗ್ತಾರೆ.

ಮಹಾಭಾರತದಲ್ಲಿ ಶ್ರೀಕೃಷ್ಣ ತಾನು ಏನು ಅಂದುಕೊಳ್ತಾನೊ ಅದನ್ನು ಉಪಾಯವಾಗಿ ಮಾಡಿಬಿಡ್ತಾನೆ. ಅದು ಬೇರೆಯವರ ಕಣ್ಣಲ್ಲಿ ತಪ್ಪಾದರು, ಅದೆ ಸರಿ ಅಂತ ಕನ್‌ವಿನ್ಸ್ ಮಾಡ್ತಾನೆ. ಅದೆ ಅಂತಿಮ ಅಂತಾನು ನಿರ್ಧಾರ ಮಾಡಿಬಿಡ್ತಾನೆ. ಆದರೆ ದುರ್ಯೋಧನ ತಾನು ಮಾಡಿದ್ದೆ ಸರಿ ಅಂದುಕೊಳ್ತಾನೆ. ಇಬ್ಬರು ಸರಿ, ಅದು ನಮ್ಮ ಮನಸ್ಸಿಗೆ ಒಪ್ಪಿಗೆಯಾಗಬೇಕು ಅಷ್ಟೆ. ಒಸೊ..... ಕೂಡ ನಾನು ಮಾಡಿದ್ದೆ ಸರಿ ಅಂತಾನೆ ಜೀವನ ನಡೆಸಿಬಿಟ್ಟು, ಅವನ ದಾರಿಯಲ್ಲಿ ಅವನೂ ಸರೀನೆ. ಅವನ್ನ ಜನ ಫಾಲೋ ಮಾಡಲಿಲ್ಲವ....? ನಿನಗೆ ಪೊಲಿಟಿಕ್ಸ್ ಇಂಟ್ರಸ್ಟ್ ಇದೆ ಅನಿಸುತ್ತೆ. ಪ್ರಪಂಚ ಬಗ್ಗುತ್ತೆ , ಆದರೆ ಬಗ್ಗಿಸುವವರು ಇರಬೇಕು'' ಅಷ್ಟೇಳಿದ ಮೇಲೆ ಮಿಂಚನ ಕಡೆಗೆ ನೋಡುತ್ತಾ ''ಏನು ಮಿಂಚ....'' ಎಂದರು. ಏನೂ ಇಲ್ಲ ಅಣ್ಣ ಹರ್ಷನ್ನ ನಿಮಗೆ ತೋರಿಸಬೇಕಾಗಿತ್ತು ಅಷ್ಟೆ '' ಎಂದ. ''ಆಯಿತು ಒಳ್ಳೇದು'' ಎನ್ನುತ್ತಿದ್ದಂತೆ ಒಬ್ಬನು ಮೊಬೈಲ್ ಫೋನ್ ತಂದುಕೊಟ್ಟ. ಮೊಬೈಲ್ ಫೋನ್ ಕೈಗೆ ತೆಗೆದುಕೊಂಡು ''ಓಕೆ ಹರ್ಷ... ಮಿಂಚ ನೀವು ಹೋಗಬಹುದು'' ಎಂದರು. ಹರ್ಷ ಮತ್ತು ಮಿಂಚ ಇಬ್ಬರೂ ವಂದನೆಗಳನ್ನು ಸಲ್ಲಿಸಿ ಅಲ್ಲಿಂದ ಹೊರಕ್ಕೆ ನಡೆದರು.

ಹೊರಕ್ಕೆ ಬಂದ ಮಿಂಚ ''ಇವರು ಒಂದು ಮಾತು ಹೇಳಿದರೆ ಸಾಕು ಮುಖ್ಯಮಂತ್ರಿ, ಗೃಹಮಂತ್ರಿ ಯಾರೂ ಇಲ್ಲ ಅನ್ನಲ್ಲ'' ಎಂದ. ಬೆಂಗಳೂರಿನಲ್ಲಿ ಹೀಗೆಲ್ಲ ಇದೆಯಾ....? ಅಷ್ಟೊಂದು ಇನ್‌ಫ್ಲೂಯನ್ಸ್ ಇರೋರು ಯಾಕಾದರು ಈ ರೀತಿ ಕತ್ತಲಲ್ಲಿ ಜೀವನ ನಡೆಸುತ್ತಿದ್ದಾರೆ....? ಪ್ರಾಣಭಯವೆ....? ಗೂಂಡಾರಾಜ್ಯವೆಂದರೆ ಹಾಗೆಯೆ ಇರಬೇಕೇನೊ? ಸಮಯ ಸಿಕ್ಕಾಗ ಮೊದಲು ಯಾರು ಕೈ ಬೀಸುತ್ತಾರೊ ಅವರೆ ಗೆದ್ದಂತೆ. ಮತ್ತೆ ಅವನದು ಅಷ್ಟು ದಿನಗಳು, ಮತ್ತೆ ಇನ್ನೊಬ್ಬ ಮಗದೊಬ್ಬ,

ಅಬ್ಬಬ್ಬ ! ಬೆಂಗಳೂರಿನಲ್ಲಿ ಇನ್ನೂ ಏನೇನು ನಡೆಯುತ್ತಿರಬಹುದು....? ನಾನು ಆಯ್ಕೆಮಾಡಿಕೊಳ್ಳುತ್ತಿರುವ ಜೀವನ ಸರಿಯೇ....? ತಪ್ಪೇ....?

- ಶ್ರೀ ಕೃಷ್ಣ... ಮಹಾಭಾರತ..... ಓಸೊ.... ಏನೇನೊ ಮಾತನಾಡ್ತಾನಲ್ಲ....? ಎಲ್ಲಾ ಮಾರ್ಡನ್ ಯುಗ. ಮಿಂಚ ಒಂದುಕಡೆ ಮಾತನಾಡುತ್ತಿದ್ದರೆ, ಹರ್ಷ ಇನ್ನೊಂದು ಕಡೆ ಮೇಲಿನಂತೆ ಯೋಚಿಸುತ್ತಿದ್ದ. ಅಲ್ಲಿಂದ ಬಂದ ಮಿಂಚ ಮತ್ತು ಹರ್ಷ ಒಂದು ಹೋಟಲಿನಲ್ಲಿ ಕುಳಿತುಕೊಂಡು ಚೆನ್ನಾಗಿ ತಿಂದರು. ಅನಂತರ ಒಂದು ಪ್ರಖ್ಯಾತ ರಸ್ತೆಯ ಪಕ್ಕದಲ್ಲಿ ಕುಳಿತುಕೊಂಡು ಹೋಗುವ, ಬರುವ ಹೆಣ್ಣುಗಳನ್ನೆಲ್ಲ ನೋಡುತ್ತಾ.... ಬೆಂಗಳೂರಿನ ನಿಗೂಢಗಳ ಬಗ್ಗೆ ಮಾತನಾಡಿದರು. ಮಿಂಚ ತನ್ನ ಸುತ್ತಲು ಪ್ರಪಂಚದ ಹಲವಾರು ಅನುಭವಗಳನ್ನು ಹೇಳುತ್ತಿದ್ದಂತೆ ಹರ್ಷ ತಲ್ಲಣಿಸಿಹೋಗಿದ್ದ. ಹರ್ಷನಿಗೆ ನಿಗೂಢವಾದ ಸಂಗತಿ ಎಂದರೆ ತನಗೆ ಗೊತ್ತಿಲ್ಲದೆಯೆ ತಾನು ಇಂತಹ ಪ್ರಪಂಚಕ್ಕೆ ಪ್ರವೇಶ ಮಾಡಿದ್ದು.....? ನಾಲ್ಕಾರು ಜನರನ್ನು ತದಕುವ ಶಕ್ತಿ ನನಗೆ ಹೇಗೆ ಬಂದಿತು ಎನ್ನುವ ಆಶ್ಚರ್ಯ...! ಇದ್ಯಾವುದು ಬೇಡ. ತನ್ನ ಪಾಡಿಗೆ ತಾನು ಆಟೋ ಓಡಿಸಿಕೊಂಡು ಯಾಕಿರಬಾರದು....? ಬೆಂಗಳೂರಿನಲ್ಲಿ ಒಂದೆರಡು ಲಕ್ಷ ಆಟೋ ಚಾಲಕರಿರಬಹುದು. ಅದರಲ್ಲಿ ನೂರಕ್ಕೆ ತೊಂಭತ್ತು ಮಂದಿ ಜೀವನದಲ್ಲಿ ಏನೂ ಸಾಧಿಸಲಾರದೆ ಈ ಕೆಲಸಕ್ಕೆ ಬಂದವರೆ ಹೆಚ್ಚಾಗಿರಬೇಕು.

ಜೀವನದಲ್ಲಿ ಅಂತಿಮವಾಗಿ ಅವರು ಏನು ಸಾಧಿಸುವರು.....? ಜೀವನವೆಲ್ಲ ಆರಕ್ಕೇರದೆ ಮೂರಕ್ಕಿಳಿಯದೆ... ಮದುವೆ ಮಾಡಿಕೊಂಡು ಒಂದೆರಡು ಮಕ್ಕಳನ್ನು ಹುಟ್ಟಿಸಿ, ಅತ್ತ ಹೆಂಡತಿಯನ್ನ ಇತ್ತ ಮಕ್ಕಳನ್ನು ನೋಡಿಕೊಳ್ಳಲಾಗದೆ ತಾನು ಏನೂ ಮಾಡಲಾರದೆ ಪ್ರತಿದಿನವು ಒಂದು ನರಕದಂತಹ ಜಿಗುಪ್ಸೆ ಜೀವನ ನಡೆಸಬಹುದು.

ಪ್ರಸ್ತುತ ಬೆಂಗಳೂರಿನಲ್ಲಿ ಮಜಾ ಉಡಾಯಿಸುತ್ತಿರುವವರೆಂದರೆ ಗುಜರಾತಿ, ಮಾರ್ವಾಡಿ, ಇನ್ನಿತರ ವ್ಯಾಪಾರಿಗಳು, ರಾಜಕಾರಣಿಗಳು, ಭ್ರಷ್ಠ ಅಧಿಕಾರಿಗಳು, ಇವರ ನಡುವೆ ಸಿಕ್ಕಿಕೊಂಡು ತತ್ತರಿಸಿ ಹೋಗಿತ್ತಿರವವರೆಂದರೆ ಬಡವರು. ರೈತರು, ಕೂಲಿಕಾರರು, ಕಾರ್ಮಿಕರು, ಮಧ್ಯಮ ವರ್ಗದವರು ಮತ್ತು ಕೆಳವರ್ಗದವರು. ಹೀಗೆ ಮಿಂಚ ಮತ್ತು ಹರ್ಷ ಸುಮಾರು ಹೊತ್ತು ಮಾತನಾಡಿದ ಮೇಲೆ ತಮ್ಮ ತಮ್ಮ ಮನೆಗಳ ಕಡೆಗೆ ಹೊರಟುಹೋದರು. ಹರ್ಷನಿಗೆ ಬೆಂಗಳೂರು ಬಾರಿ ನಿಗೂಢವಾಗಿ ಕಾಣಿಸುತ್ತಿತ್ತು.

ಹರ್ಷ ತನ್ನ ಮನೆಯ ಹತ್ತಿರಕ್ಕೆ ದಿನನಿತ್ಯ ಬರುವ ಜನರಿಗೆ ತನ್ನಿಂದ ಆಗುವ

ಸಹಾಯವನ್ನು ತನ್ನ ಗೆಳೆಯರ ಜೊತೆಗೆ ಮಾಡುತ್ತಿದ್ದ. ಹರ್ಷ ಮನೆಗೆ ಬೇಕಾದ ಸಾಮಾನುಗಳನ್ನು ತಂದಾಕುತ್ತ ತನ್ನ ಇಬ್ಬರು ತಂಗಿಯರನ್ನು ಓದಿಸುತ್ತಿದ್ದ. ಒಟ್ಟಿನಲ್ಲಿ ತಾಯಿ ಮತ್ತು ತಂಗಿಯರಿಗೆ ಯಾವುದೇ ತೊಂದರೆ ಬರದಂತೆ ನೋಡಿಕೊಳ್ಳುತ್ತಿದ್ದ . ತನ್ನ ತಂದೆ ಕಟ್ಟಿಸಿದ ಒಂದು ಸಣ್ಣ ಮನೆ ಇದ್ದುದರಿಂದ ಬೇರೇನೂ ತೊಂದರೆಗಳು ಇರಲಿಲ್ಲ. ಆದರೆ ಹರ್ಷ, ನಿಧಾನವಾಗಿ ತನಗೆ ಗೊತ್ತಿಲ್ಲದೆಯೆ ಯಾವುದೊ ಒಂದು ಲೋಕಕ್ಕೆ ನುಸಿಳಿಕೊಳ್ಳುತ್ತಿದ್ದ . ಜೊತೆ ಜೊತೆಗೆ ಆ ಬಡಾವಣೆಯಲ್ಲಿ ಒಬ್ಬ ಸೌಮ್ಯ ರಾಜಕಾರಣಿಯಾಗಿ ಬೆಳೆಯತೊಡಗಿದ.

* * *

ಪ್ರಪಂಚದಲ್ಲಿ ಅತಿವೇಗವಾಗಿ ದಾವಿಸುವುದು ಏನು ಎಂದು ಯಾರನ್ನಾದರು ಕೇಳಿದರೆ ಮನುಷ್ಯನ ಮನಸ್ಸು ಎನ್ನುತ್ತದೆ ಒಂದು ಉತ್ತರ. ಮನಸ್ಸಿಗೆ ಯಾವುದೊ ಒಂದು ಅರಿಯಲಾಗದ ಶಕ್ತಿ ಇರುವುದಾಗಿ ಅದು ಮನುಷ್ಯನಿಗೆ ಕಾಣದ ಆಗೋಚರ ಶಕ್ತಿ ಎನ್ನುತ್ತಾರೆ ಯೋಗಿಗಳು. ಒಬ್ಬ ಮನುಷ್ಯ ಸಾವಿರಾರು ಕಿಲೋ ಮಿಟರುಗಳು ದೂರದಲ್ಲಿದ್ದರು ತನ್ನ ಪ್ರಿಯವಾದ ವ್ಯಕ್ತಿಯೊಡನೆ ಸಮಾಲೋಚನೆ ನಡೆಸಬಲ್ಲ. ದೂರದರ್ಶನ..... ಫ್ಯಾಕ್ಸ್ ... ಫೋನ್ ವೈಜ್ಞಾನಿಕ ಬೆಳವಣಿಗೆಯ ಒಂದು ಮುಖವಾದರೆ, ಮನುಷ್ಯನ ಮನಸ್ಸು ಎಲ್ಲಕ್ಕಿಂತ ಆಶ್ಚರ್ಯ ಮತ್ತು ಮಹಾ ಅದ್ಭುತ. ಈ ಮನಸ್ಸು ತನ್ನ ಸುಪ್ತಸಾಗರದಲ್ಲಿ ಅಡಗಿಸಿಕೊಂಡಿರುವ ಅನೇಕ ಕಲ್ಪನೆಗಳನ್ನು ಇಂದಿನ ಆಧುನಿಕ ಯುಗದ ಸಾಧಕಗಳಾಗಿ ಮಾರ್ಪಡಿಸಿದೆ.

ಇಬ್ಬರು ಪ್ರೇಮಿಗಳು ಸಾವಿರಾರು ಕಿಲೋ ಮೀಟರುಗಳು ದೂರದಲ್ಲಿದ್ದರು. ಒಬ್ಬರನ್ನು ಕುರಿತು ಇನ್ನೊಬ್ಬರು ನಿಖರವಾಗಿ ತಿಳಿದುಕೊಳ್ಳಬಲ್ಲರು. ಅಷ್ಟೇ ಅಲ್ಲ ಯಾರೊ ಒಬ್ಬರಿಗೆ ಏನಾದರು ತೊಂದರೆಯಾದರೆ ಅಥವಾ ಮುಂದೆ ತೊಂದರೆ ಬರುವುದಿದ್ದರೆ ಮೊದಲೆ ಗ್ರಹಿಸಬಲ್ಲರು. ತಾಯಿ ಒಬ್ಬಳು ತನ್ನ ಒಡಲ ಸೃಷ್ಟಿಯಾದ ಮಗಳೊ..... ಮಗನೊ ಯಾವುದಾದರು ತೊಂದರೆಯಲ್ಲಿ ಸಿಲುಕಿಕೊಂಡಾಗ ತನ್ನ ಮಕ್ಕಳಿಗೆ ಏನೊ ಅಪಾಯ ಸಂಭವಿಸಿದೆ ಎಂದು ಸೂಕ್ಷ್ಮವಾಗಿ ಗ್ರಹಿಸಿಕೊಳ್ಳುತ್ತಾಳೆ. ಇಲ್ಲ ಮಲಗಿದ್ದಾಗ ಯಾವುದೊ ಕನಸು ಬಿದ್ದು ಎಚ್ಚರಗೊಂಡು ಇಂತಹುದೆ ತೊಂದರೆಯಾಗಿದೆ ಎಂದು ಹೇಳುತ್ತಾಳೆ.

ಪ್ರಿಯ, ಪ್ರಿಯತಮೆಯರ ಮನಸ್ಸುಗಳಂತು ಇನ್ನೂ ಆಳವಾಗಿ ಅನಾವರಣಗೊಳ್ಳುತ್ತವೆ. ಇತ್ತೀಚಿನ ಸಂಶೋಧನೆಗಳ ಪ್ರಕಾರ ಮನುಷ್ಯರು ಕನಸುಗಳನ್ನು ಕಾಣುವಾಗ ಕಣ್ಣು ರೆಪ್ಪೆಗಳ ಹಿಂದೆ ಕಣ್ಣು ಗುಡ್ಡೆಗಳು ಚಲಿಸುವುದನ್ನು

ವಿಜ್ಞಾನಿಗಳು ಗಮನಿಸಿದ್ದಾರೆ. ಗಾಢ ನಿದ್ದೆಯಲ್ಲಿದ್ದಾಗ ಅಥವಾ ಕನಸುಗಳನ್ನು ಕಾಣದೆ ಇರುವಾಗ ಕಣ್ಣುಗಳು ಚಲಿಸುವುದಿಲ್ಲ ಎಂದು ತಿಳಿದುಬರುತ್ತದೆ.

ಯಾರು ಯಾರನ್ನು ಯಾವಾಗ ಏತಕ್ಕೆ ಪ್ರೀತಿಸುತ್ತಾರೆ ಎನ್ನುವುದು ಕೂಡ ನಿಗೂಢವೆ. ಈಗ ಕೃತಿಕಾ ತನಗೆ ಗೊತ್ತಿಲ್ಲದೆಯ ಅಮರನಾಥನನ್ನು ಒಳಗೊಳಗೆ ಪ್ರೀತಿಸುತ್ತಿದ್ದಾಳೆ. ಅಮರನಾಥ ಹಳ್ಳಿಯ ಹಿನ್ನೆಲೆಯಿಂದ ಬಂದಿರುವವನು. ಅವನ ಚೇಷ್ಟೆಗಳು ಈಗಲೂ ದೊಗಡು ಬಗುಡಾಗಿ ಇರುವುದಲ್ಲದೆ ಪ್ರತಿಯೊಂದಕ್ಕೂ ತನ್ನದೇ ಆದ ವ್ಯಾಖ್ಯಾನವನ್ನು ಮರುಮಾತಿಲ್ಲದೆ ಹೇಳಿಬಿಡುತ್ತಾನೆ. ಜೊತೆಗೆ ಅವನ ಆ ಗಡಸು ಮುಖ, ಗಟ್ಟಿದೇಹ, ಯಾವ ಸಂದೇಹ ಸೂಕ್ಷ್ಮಗಳಿಲ್ಲದ ನಿರ್ವಿಕಾರವಾದ ಮಾತುಗಳು ಅವಳನ್ನು ದಂಗುಬಡಿಸಿವೆ. ಅವನ ಮಾತುಗಳು ಕೆಲವೊಮ್ಮೆ ತಮಾಷೆಯಾಗಿ ತೋರಿದರೂ ಆಳವಾಗಿ ಯೋಚಿಸಿ ಮಾತನಾಡುವಂತೆ ತೋರುತ್ತದೆ.

ಇದೆಲ್ಲವನ್ನು ಅವನು ಎಷ್ಟು ಸಲೀಸಾಗಿ ಹೇಳುತ್ತಾನೆಂದರೆ ನಂಬಲು ಅಸಾಧ್ಯ. ಅದು ಇಪ್ಪತ್ತೊಂದನೆಯ ಶತಮಾನದಲ್ಲಿ. ಎಲ್ಲಕ್ಕಿಂತ ಮುಖ್ಯವಾಗಿ ಮದುವೆಯಾದ ಮೇಲೆ ಗಂಡನು ತನ್ನ ಪತ್ನಿಯನ್ನು ಗಾಢವಾಗಿ ಪ್ರೀತಿಸುವಂತವನಿದ್ದರೆ ಎಷ್ಟು ಚೆನ್ನಾಗಿರುತ್ತದೆ....? ಗಂಡು ತನ್ನ ಜೀವನದಲ್ಲಿ ಬೇರೆ ಹೆಣ್ಣುಗಳ ಜೊತೆಗೆ ಸಂಪರ್ಕವೆ ಇಟ್ಟುಕೊಳ್ಳದೇ ಕೇವಲ ತನ್ನ ಪತ್ನಿಯ ಜೊತೆಗೆ ಮಾತ್ರ ಪ್ರೀತಿ, ಪ್ರೇಮ, ಕಾಮ, ಎಲ್ಲವನ್ನು ಹಂಚಿಕೊಳ್ಳುವಂತ ಗಂಡಿದ್ದರೆ ಎಷ್ಟು ಚೆನ್ನ. ಅವನು ಪ್ರತಿಕೊಂದಕ್ಕೂ ತನ್ನ ಪತ್ನಿಯನ್ನೇ ಅವಲಂಭಿಸಿರಬೇಕು. ಅಂತಹ ಗಂಡಸರು ಈಗ ದೊರಕುವುದು ಕಷ್ಟವೆ ಸರಿ. ಹೀಗೆ ಹಲವು ರೀತಿಯ ಯೋಚನೆಗಳು ಕೃತಿಕಾಳ ಮನಸ್ಸಿನಲ್ಲಿ ಏಳುತ್ತಿದ್ದವು. ಬಹುಶಃ ಅವಳು ಯೋಚಿಸುವ ಹಲವು ಗುಣಗಳನ್ನು ಅಮರನಾಥನಲ್ಲಿ ಕಂಡಿದ್ದ ಕೃತಿಕಾ ಈಗೀಗ ಅವನ ಬಗ್ಗೆಯೆ ಯೋಚಿಸುತ್ತಿದ್ದಳು.

ಒಂದು ದಿನ ಸವ್ಯ ಮತ್ತು ಅಮರನಾಥ ಪಕ್ಕಪಕ್ಕದಲ್ಲಿ ಕುಳಿತುಕೊಂಡು ಜೋಕ್ ಕಟ್ ಮಾಡುತ್ತಾ ಚಹಾ ಕುಡಿಯುತ್ತಿದ್ದರು. ಕೃತಿಕಾ ಹತ್ತಿರಕ್ಕೆ ಬಂದು ಅಮರನಾಥನ ಪಕ್ಕದಲ್ಲಿ ಕುಳಿತುಕೊಂಡಳು. ಚಹಾ ಕುಡಿಯುತ್ತಿದ್ದ ಅಮರನಾಥ ದಿಢೀರನೆ ಎದ್ದುನಿಂತುಕೊಂಡುಬಿಟ್ಟ, ಕೃತಿಕಾಗೆ ಮುಖದ ಮೇಲೆ ಹೊಡೆದಂತಾಗಿಬಿಟ್ಟಿತು. ಇವನು ಹೀಗೇಕೆ ಮಾಡಿದ....? ಎಷ್ಟೊ ಸಲ ಕ್ಯಾಂಪಸ್‌ನಲ್ಲಿ ಪಕ್ಕ ಪಕ್ಕ ಕುಳಿತುಕೊಂಡು ಮಾತನಾಡಿದ್ದಾನೆ. ಕಾಲೇಜಿನಲ್ಲಂತು ಹಿಂದೆ ಅಥವಾ ಮುಂದಿನ ಬೆಂಚುಗಳಲ್ಲಿ ಕುಳಿತುಕೊಳ್ಳುತ್ತಾನೆ. ಆದರೆ ಈ ದಿನ ಹೀಗೇಕೆ ಮಾಡಿದ....? ಕೃತಿಕಾ ತಡೆಯಲಾರದೆ ಕೇಳಿಯೆಬಿಟ್ಟಳು.

"ಎಲ್ಲಂದರೆ ಅಲ್ಲಿ ಕುಳಿತುಕೊಂಡುಬಿಟ್ಟರೆ ಹೇಗೆ....? ಇದು ರಸ್ತೆ" ಎಂದ

ಅಮರನಾಥ. ಸ್ವಲ್ಪ ಸಮಾಧಾನಗೊಂಡ ಕೃತಿಕಾ ಇವನನ್ನು ಅರ್ಥಮಾಡಿಕೊಳ್ಳುವುದೇ ಕಷ್ಟ ಎಂದುಕೊಂಡಳು.

ಒಂದು ದಿನ ಯಾರೂ ಇಲ್ಲದ ಸಮಯ ನೋಡಿ ''ಅಮರ್ ನಾನು ಮದುವೆಮಾಡಿಕೊಂಡ್ರೆ ನಿನ್ನಂತವನನ್ನೇ ಮಾಡಿಕೊಳ್ತೀನಿ'' ಎಂದುಬಿಟ್ಟಳು. ''ನನ್ನಂತಹವನಾ....? ನಾನೊಬ್ಬನೆ ಇರೊದು ಅಮರನಾಥ ಇಬ್ಬರು ಸಿಗೊದಿಲ್ಲ. ಮೊದಲು ನೀನು ಡ್ರಸ್ ಸರಿಯಾಗಿ ಮಾಡಿಕೊಂಡು ಬರುವುದನ್ನು ಕಲಿ'' ಎಂದುಬಿಟ್ಟ. ಆ ದಿನ ಟೈಟ್ ಜೀನ್ಸ್ ಪ್ಯಾಂಟಿನ ಮೇಲೆ ದೊಗಳೆ ಟಾಪ್ ಹಾಕಿಕೊಂಡು ಬಂದಿದ್ದಳು. ಕೃತಿಕಾಗೆ ಒಮ್ಮೆಲೆ ಅಳುಬಂದುಬಿಟ್ಟಿತು. ಮೊದಲಿಗೆ ಇವನ್ಯಾರು ನನ್ನನ್ನ ಡ್ರಸ್ ಸರಿಯಾಗಿ ಹಾಕಿಕೊಂಡು ಬಾ ಅನ್ನುವುದಕ್ಕೆ ಎಂದುಕೊಂಡರು, ಅದರಲ್ಲೆ ಯಾವುದೊ ಪ್ರೀತಿಯ ಹೊಂಗಿರಣವನ್ನು ಕಂಡುಕೊಂಡಂತೆ ಅವಳ ತುಟಿಗಳು ಬಿರಿದವು.

ಕೃತಿಕಾ ಮರುದಿನ ಸೀರೆ ಹುಟ್ಟುಕೊಂಡು ಕಾಲೇಜಿಗೆ ಬಂದುಬಿಡುವುದೆ....? ಇಡೀ ತರಗತಿಯೆ ತಲ್ಲಣಿಸಿಯೋಯಿತು. ಎಲ್ಲರೂ ''ವಾವ್ !'' ಎನ್ನುತ್ತಾ ಬಾಯಿಗಳನ್ನು ತೆರೆದುಕೊಂಡು ತಮ್ಮ ಕಣ್ಣುಗಳನ್ನು ನಂಬಲಾಗದೆ ಹಾಗೆ ಇದ್ದುಬಿಟ್ಟರು. ಎಳೆ ದೇಹ ಸೊಂಟದ ಮೇಲೆ ಆಗತಾನೆ ಮಡಿಕೆಗಳು ಬೀಳುತ್ತಿವೆ. ನದಿ ತೊರೆಗಳು ಬೇರೆ, ''ಯು'' ಆಕಾರದ ಬ್ಲೌಸ್‌ನಲ್ಲಿ ಹನಿ ಬಣ್ಣದ ಬೆನ್ನು ಕಾಣಿಸುತ್ತಿದೆ. ಹಿಂದೆ ಉದ್ದವಾದ ಜಡೆ. ಕೊರಳಲ್ಲಿ ಸಣ್ಣದಾದ ಚಿನ್ನದ ಸರ. ಅಮರನಾಥನು ಎಲ್ಲರಂತೆ ಒಂದೆರಡು ಕ್ಷಣಗಳು ಅವಳ ಕಡೆಗೆ ನೋಡುತ್ತ ಇದ್ದುಬಿಟ್ಟ.

ಕೃತಿಕಾ ವೈಯಾರವಾಗಿ ನಡೆದುಬಂದು ಅಮರನಾಥನ ಮುಂದಿನ ಬೆಂಚಿನಲ್ಲಿ ರೂಪ ಮತ್ತು ಕಮಲಾದಾಸ್ ಪಕ್ಕದಲ್ಲಿ ಕುಳಿತುಕೊಂಡಳು. ಎಲ್ಲರೂ ಅವಳನ್ನು ನೋಡುತ್ತಿರುವುದರಿಂದ ಅವಳಿಗೆ ಒಂದು ಕಡೆ ಖುಷಿಯಾದರೆ ಇನ್ನೊಂದು ಕಡೆ ನಾಚಿಕೆಯಾಗುತ್ತಿತ್ತು. ಕೃತಿಕಾ ಸೀರೆ ಹುಟ್ಟುಕೊಂಡರೆ ಇಷ್ಟು ಸೊಗಸಾಗಿ ಕಾಣಿಸುತ್ತಾಳೆಯೆ....? ಅಮರನಾಥನಿಗೆ ಆಶ್ಚರ್ಯವಾಯಿತು. ಆದರೆ ಅವನ ತಲೆಯ ಎಡಗೋಳುನಲ್ಲಿದ್ದ ಮಿದುಳಿಗೆ ಅವಳು ಈ ದಿನ ಸೀರೆ ಯಾಕೆ ಕಟ್ಟಿಕೊಂಡು ಬಂದಿದ್ದಾಳೆ ಎನ್ನುವುದು ಮಾತ್ರ ಹೊಳೆಯಲಿಲ್ಲ. ಕೃತಿಕಾ ಮಾತ್ರ ನಾನು ಈ ದಿನ ಸೀರೆ ಕಟ್ಟಿಕೊಂಡು ಬಂದಿರುವ ವಿಷಯ ಅಮರನಾಥನಿಗೆ ಅರ್ಥವಾಗಿರಲೇಬೇಕು ಎಂದುಕೊಂಡು ಆಗಾಗ ಅವನ ಕಡೆಗೆ ವಾರೆ ನೊಟ ಬೀರುತ್ತಿದ್ದಳು.

ಈ ನಡುವೆ ತರಗತಿಯಲ್ಲಿ ಎಲ್ಲರೂ ಆ ಮೂಲೆ ಈ ಮೂಲೆ ಎಲ್ಲಾ

ಕಡೆಯಿಂದಲೂ "ಏನು ವಿಶೇಷ....? ಹುಡುಗಾ ಬಂದಿದ್ದನಾ ನೋಡುವುದಕ್ಕೆ ....? ಬರ್ತ್‌ಡೇನ....? ಬ್ಯೂಟಿಫುಲ್...ಗಾರ್ಗಿಯಸ್... ಫೆಂಟಾಸ್ಟಿಕ್.... ಪೆಬುಲಸ್...." ಹೀಗೆ ಏನೇನೊ ಹೇಳುತ್ತಾ ಕಣ್ಣುಗಳನ್ನು ಮಿಟಕಿಸುತ್ತಿದ್ದರು. ಎಲ್ಲರನ್ನು ನೋಡುವ ನೆಪದಲ್ಲಿ ಕೃತಿಕಾ ಹಿಂದಿನ ಬೆಂಚಿನ ಕಡೆಗೆ ನೊಡುತ್ತಲೆ ಉತ್ತರಿಸುತ್ತಿದ್ದಳು. ಅಮರನಾಥ ಈ ಊರಿಗೆ ಈ ದಾರಿ ಎನ್ನಲಿಲ್ಲ . ತನ್ನ ಪಾಡಿಗೆ ತಾನು ಸವ್ಯನ ಜೊತೆಗೆ ಹರಟೆ ಹೊಡೆಯುತ್ತಿದ್ದಾನೆ. ಸವ್ಯ ಮತ್ತು ಅಮರನಾಥ ಯಾವಾಗಲೂ ಏನು ಮಾತನಾಡುತ್ತಾರೆ ಎನ್ನುವ ಪ್ರಶ್ನೆ ಅವಳನ್ನು ಯಾವಾಗಲು ಕಾಡುತ್ತಿತ್ತು.

ಅವಳಿಂದ ತಡೆದುಕೊಳ್ಳಲಾಗಲಿಲ್ಲ. ಹಿಂದಕ್ಕೆ ತಿರುಗಿ "ಹೌವ್ ಈಸ್ ಮೈ ಡ್ರಸ್....?" ಕೃತಿಕಾ, ಅಮರನಾಥನನ್ನು ಕೇಳಿಯೆಬಿಟ್ಟಳು. ಯಾವುದೊ ಲೋಕದಿಂದ ಹೊರಕ್ಕೆಬಂದವನಂತೆ "ಡ್ರಸ್ಸಾ...ಯಾವುದು...?" ಅಮರನಾಥ ಅರ್ಥವಾಗದೆ ಪ್ರಶ್ನಿಸಿದ.

"ಛೀ " ಎಂದು ತಲೆ ತಗ್ಗಿಸಿಕೊಂಡ ಕೃತಿಕಾ ಇವನು ಯಾವ ಸೀಮೆಯವನು....? ಎಂದು ಗೊಣಗಿಕೊಂಡಳು. ಅಮರನಾಥ, ಸವ್ಯನ ಮುಖ ನೋಡಿ ತುಟಿಗಳನ್ನು ಹೊರಕ್ಕೆ ತಳ್ಳಿದ. "ತಗಡು ಅಂದರೆ ನೀನೆ ಕಣೊ. ಭದ್ರಾವತಿ ತಗಡು. ಹೌವ್ ಈಸ್ ಮೈ ಡ್ರಸ್ ಅಂದರೆ....? ಯಾವ ಡ್ರಸ್ಸು ಅಂತಿಯಲ್ಲೊ ಮಾರಾಯ...? ಸುಮ್ಮನೆ ವಾವ್ ಅಂದಿದ್ದರೆ ನಿನ್ನ ಗಂಟು ಏನು ಹೋಗ್ತಾ ಇತ್ತು....?" ಸವ್ಯನ ಮಾತಿನಿಂದ ಜ್ಞಾನೋಧಯವಾದ ಅಮರನಾಥ ಕಣ್ಣುಗಳನ್ನು ಸಣ್ಣಗೆ ಮಾಡಿಕೊಂಡು ಈಗ ಹೇಳಿ ಪ್ರಯೋಜನವಿಲ್ಲ ಎಂದುಕೊಂಡು ಸುಮ್ಮನಾದ.

ಅಷ್ಟರಲ್ಲಿ ಪ್ರೊಫೆಸರು ಒಳಕ್ಕೆ ಬಂದು ಅಟೆಂಡೆನ್ಸ್ ತೆಗೆದುಕೊಂಡು ಪಾಠ ಪ್ರಾರಂಭಿಸಿದರು. ಕೃತಿಕಾ ಗಾಳಿ ಕಳೆದುಕೊಂಡ ಬೆಲೂನಿನಂತೆ ಹೊಸ ಉಡುಪು ಧರಿಸಿ ಹೊತ್ತುತಂದಿದ್ದ ಉಲ್ಲಾಸವನ್ನೆಲ್ಲ ಕಳೆದುಕೊಂಡು ಪ್ರೊಫೆಸರ್ ಹೇಳುವ ಪಾಠವನ್ನು ಕೇಳತೊಡಗಿದಳು. "ಒಬ್ಬ ಮನುಷ್ಯನ ದೇಹದಲ್ಲಿ ಹದಿಮೂರು ಬಿಲಿಯ ನರಕೋಶಗಳು ಇರುತ್ತವೆ. ಅದರಲ್ಲೂ ಮಿದುಳಿನಲ್ಲಿ ಹತ್ತು ಬಿಲಿಯ ಕೋಶಗಳಿದ್ದರೆ, ದೇಹದಲ್ಲಿ ಉಳಿದ ಮೂರು ಬಿಲಿಯ ಕೋಶಗಳಿರುತ್ತವೆ. ಒಂದು ತೊಟ್ಟು ರಕ್ತದಲ್ಲಿ ಐವತ್ತು ಲಕ್ಷ ಕೆಂಪುರಕ್ತಕಣಗಳಿರುತ್ತವೆ. ಒಬ್ಬ ಸಾಧಾರಣ ಮನುಷ್ಯನ ತೂಕ 68 ಕೆ.ಜಿ.ಗಳಿದ್ದರೆ ಅವನ ದೇಹದಲ್ಲಿ 44.23 ಕೆ.ಜಿ. ಆಮ್ಲಜನಕ, 12.25 ಕೆ.ಜಿ ಕಾರ್ಬನ್, 6.8 ಕೆ.ಜಿ. ಹೈಡ್ರೊಜನ್, 2.04 ಕೆ.ಜಿ. ಸಸಾರಜನಕ, 1.09 ಕೆ.ಜಿ. ಕ್ಯಾಲ್ಸಿಯಂ, 680 ಗ್ರಾಂ ಪಾಸ್ಫರಸ್, 204 ಗ್ರಾಂ ಸೋಡಿಯಂ, 204 ಗ್ರಾಂ

ಕ್ಲೋರೈನ್, 170.1 ಗ್ರಾಂ ಸಲ್ಫರ್, 348 ಗ್ರಾಂ ಮೆಗ್ನೀಶಿಯಂ 2.78 ಗ್ರಾಂ ಕಬ್ಬಿಣ, 337.5 ಗ್ರಾಂ ಉಳಿದ ಧಾತುಗಳಿರುತ್ತವೆ. ಅವೆಂದರೆ ಮ್ಯಾಂಗನೀಸ್, ತಾಮ್ರ, ಐಯೊಡಿನ್, ಸತು, ಕೊಬಾಲ್ಟ್ ಮತ್ತು ಫ್ಲೋರೀನ್.

ಕಾರ್ಬನ್ ಮತ್ತು ಹೈಡ್ರೋಜನ್ ಸೇರಿ ಕಾರ್ಬೋಹೈಡ್ರೇಟ್ಸ್ ಸಕ್ಕರೆ ಮತ್ತು ಕೊಬ್ಬನ್ನು ಉತ್ಪತ್ತಿ ಮಾಡಿದರೆ, ಹೈಡ್ರೋಜನ್, ನೈಟ್ರೋಜನ್, ಕ್ಯಾಲ್ಸಿಯಂ ಮತ್ತು ಆಮ್ಲಜನಕ, ಪ್ರೊಟೀನ್ಸ್ ಉತ್ಪತ್ತಿಸುತ್ತದೆ. ಕ್ಯಾಲ್ಸಿಯಂ ಮತ್ತು ಪಾಸ್ಫರಸ್ ಎಲುಬುಗಳು ಕಟ್ಟಿಯಾಗುವುದಕ್ಕೆ ಸಹಾಯವಾಗುತ್ತವೆ. ಕಬ್ಬಿಣದಿಂದ ಕೆಂಪು ಕೋಶಗಳು, ಸೋಡಿಯಂ ಮತ್ತು ಕ್ಲೋರೈಡ್‌ನಿಂದ ಉಪ್ಪು ಎಲ್ಲವೂ ಸೇರಿ ದೇಹದ ಸಮತೋಲನೆಯನ್ನು ಕಾಪಾಡುತ್ತವೆ. ಈ ಎಲ್ಲಾ ಧಾತುಗಳು ಮಣ್ಣಿನಲ್ಲಿ ದೊರಕುತ್ತವೆ. ಗಿಡ ಮರ ಪಕ್ಷಿ ಪ್ರಾಣಿಗಳೆಲ್ಲ ಇದೆ ಅಂಶಗಳನ್ನು ಹೊಂದಿವೆ. ಆದರೆ ಅದಕ್ಕೆ ಯಾವುದೊ ಒಂದು ಮುಹೂರ್ತದಲ್ಲಿ ಪ್ರಾಣ ಬರುತ್ತದೆ.'' ಹೀಗೆ ಆ ಪ್ರೊಫೆಸರು ಪಾಠ ಹೇಳುವುದನ್ನು ಎಲ್ಲರೂ ಗಮನವಿಟ್ಟು ಕೇಳುತ್ತಿದ್ದರು.

ತರಗತಿಯ ಬೆಲ್ಲು ಬಾರಿಸಿದ್ದೆ ಪ್ರೊಫೆಸರ್ ಪಾಠ ನಿಲ್ಲಿಸಿ ಹೊರ ನಡೆದರು. ದಿಢೀರನೆ ತರಗತಿಯ ಒಳಕ್ಕೆ ಬಂದ ಅದೇ ತರಗತಿಯ ಹರೀಶ್ ಸ್ವೀಟ್ ಬಾಕ್ಸ್ ತೆಗೆದು ''ಕಮಾನ್ ಫ್ರೆಂಡ್ಸ್ ಹ್ಯಾವ್ ಸ್ವೀಟ್ಸ್'' ಎಂದು ಎಲ್ಲರಿಗೂ ಸಿಹಿ ಹಂಚತೊಡಗಿದ. ''ಏನೊ ಸ್ವೀಟ್ಸ್ ಕೊಡ್ತಾ ಇದ್ದೀಯಾ....? ಯಾರಾದರು ಹುಡುಗೀನ ಕಟ್ಟಿಕೊಂಡಿಯೇನೊ....?'' ಸವ್ಯ ಮೃದುವಾಗಿ ಕೇಳಿದ. ''ಹುಡುಗೀನ ಕಟ್ಟಿದಕ್ಕೆ ಸ್ವೀಟ್ ಕೊಡಬೇಕಾದರೆ ದಿನಾಗಲು ಸ್ವೀಟ್ ಕೊಡಬೇಕಾಗುತ್ತೆ'' ಹರೀಶ ಕಣ್ಣೊಡೆಯುತ್ತ ಅಷ್ಟೆ ಸಲೀಸಾಗಿ ಹೇಳಿದ.

''ಆಕೇಷನ್ ಹೇಳಿದರೇನೆ ಸ್ವೀಟ್ ತೆಗೆದುಕೊಳ್ಳುವುದು'' ಎಂದು ಕೆಲವು ಹುಡುಗಿಯರು ಹಟ ಹಿಡಿದರು. ''ನನ್ನ ಹುಟ್ಟಿದ ಹಬ್ಬಕ್ಕೆ ನಮ್ಮ ಡ್ಯಾಡಿ ಒಂದು ಸಣ್ಣ ಗಿಫ್ಟ್'' ಕೊಡಿಸಿದರು. ಅದಕ್ಕೆ'' ಎಂದ. ''ಏನು ಗಿಫ್ಟ್...?''ಎಂಬ ಪ್ರಶ್ನೆಗೆ ಒಂದು ಟೊಯಾಟಾ ಕಾರು'' ಹರೀಶ್ ಬಹಳ ಮಾಮೂಲಿಯಾಗಿ ಹೇಳಿದ.

''ಏನೊ ಈ ನನ್ನ ಮಗ ಇಷ್ಟು ಸಲೀಸಾಗಿ ಒಂದು ಟಯೊಟಾ ಕಾರು ಅಂತಾನೆ....?'' ಸವ್ಯ, ಅಮರನಾಥನಿಗೆ ಹೇಳಿದ. ''ಏಯ್ ಹರೀಶ್ ಮಕ್ಕಳ ಕಾರೇನೊ....?'' ನಿತೀನ್ ಮಾತಿಗೆ ಎಲ್ಲರೂ ನಕ್ಕರು. ಅಷ್ಟರಲ್ಲಿ ಇನ್ನೊಬ್ಬ ಪ್ರೊಫೆಸರು ತರಗತಿಯ ಒಳಕ್ಕೆ ಬಂದು ಅಟೆಂಡೆನ್ಸ್ ಮುಗಿಸಿ ಪಾಠ ಹೇಳತೊಡಗಿದರು. ಬೆಳಗ್ಗೆಯಿಂದ ಪಾಠಗಳನ್ನು ಕೇಳಿ ಕೇಳಿ ಬಳಲಿಹೋಗಿದ್ದ ವಿದ್ಯಾರ್ಥಿಗಳು ಕೆಲವರು

ಆಗಲೆ ತರಗತಿಯಿಂದ ತಪ್ಪಿಸಕೊಂಡು ಹೊರಕ್ಕೆ ಹೋಗಿಬಿಟ್ಟಿದ್ದರು. ಅಂತು ತರಗತಿಗಳು ಮುಗಿದು ಎಲ್ಲರೂ ಹೊರಕ್ಕೆ ಬರತೊಡಗಿದರು.

* * *

ಸವ್ಯ, ಅಮರನಾಥ ಮತ್ತು ನಿತಿನ್ ಒಂದು ಹೋಟಲಿನ ಲಾನ್‌ನಲ್ಲಿ ಕುಳಿತುಕೊಂಡಿದ್ದಾರೆ. ಸವ್ಯ ಮತ್ತು ನಿತಿನ್ ಚಹಾ ಕುಡಿಯುತ್ತ ಸಿಗರೇಟ್ ಸೇದುತ್ತಿದ್ದರೆ ಅಮರನಾಥ ಚಹಾ ಮಾತ್ರ ಕುಡಿಯುತ್ತಿದ್ದಾನೆ. ಸವ್ಯ ಮತ್ತು ಅಮರನಾಥನಿಂದ ಹರ್ಷ ದೂರವಾದ ಮೇಲೆ ಅವನ ಸ್ಥಳವನ್ನು ನಿತಿನ್ ಪಡೆದುಕೊಂಡಿದ್ದಾನೆ.

''ಅಲ್ಲೊ ಸವ್ಯ ಈ ಹರೀಶ್‌ನ ಅಪ್ಪ ಅವನು ಹುಟ್ಟಿದ ಹಬ್ಬಕ್ಕೆ ಒಂದು ಟೊಯಾಟಾ ಕಾರು ಗಿಫ್ಟ್ ಕೊಟ್ಟನಂತೆ. ಅವನು ಬೆಂಗಳೂರಿನಲ್ಲಿ ತಿಂಗಳಿಗೆ ಒಂದಿಪ್ಪತ್ತು ಸಾವಿರ ಖರ್ಚು ಮಾಡ್ತಾನೆ. ಇನ್ನು ಇವನು ಯಾಕ್ ಓದಬೇಕು....?'' ಅಮರನಾಥ ಪ್ರಶ್ನಿಸಿದ. ''ಲೇ ಗುಳ್ಡು ಆಂಧ್ರದವನು ಅವನು. ಆಂಧ್ರ ಅಂದರೆ ಏನು ತಿಳಿದುಕೊಂಡಿದ್ದೀಯಾ....? ಒಬ್ಬ ಕ್ಲರ್ಕ್‌ಗೆ ಹತ್ತು ಲಕ್ಷ ವರದಕ್ಷಿಣೆ ಕೊಡ್ತಾರೆ. ಒಬ್ಬ ಗೆಜೆಟೆಡ್ ಆಫೀಸರಿಗೆ ಐವತ್ತು ಲಕ್ಷ ಇನ್ನು ಎಂಜಿನಿಯರು ಡಾಕ್ಟರಾದರೆ ಐವತ್ತು ಲಕ್ಷ ಕ್ಯಾಷ್ ಕೊಟ್ಟು , ಐವತ್ತು ಲಕ್ಷ ಪ್ರಾಪರ್ಟಿ ಕೊಡ್ತಾರೆ. ಇಲ್ಲ ಅಂದರೆ ಒಂದು ನರ್ಸಿಂಗ್ ಹೋಂ ಕಟ್ಟಿಸಿಕೊಡ್ತಾರೆ. ಅಮೆರಿಕಾಗೆ ಕಳುಹಿಸಿಕೊಡ್ತಾರೆ. ಅದಕ್ಕೆ ಅವರಿಗೆ ಒಂದು ಡಿಗ್ರಿ ಸರ್ಟಿಫಿಕೆಟ್ ಬೇಕು'' ಸವ್ಯ ವಿವರಿಸಿದ.

''ಇದೇನೊ ಹಣ... ಹಣ.... ಅಂತ ಹಿಂಗ್ ಸಾಯ್ತಾರೆ ಜನ....? ಹಣ ಇರುವವರಿಗೂ ಬೇಕು. ಹಣ ಇಲ್ದೆ ಇರುವವರಿಗೂ ಬೇಕು. ಒಂದು ಲಕ್ಷ ಇರುವವರಿಗೆ ಹತ್ತು ಲಕ್ಷಬೇಕು. ಒಂದು ಕೋಟಿ ಇರುವವರಿಗೆ ಹತ್ತುಕೋಟಿ ಬೇಕು. ತಮಾಷೆಯಂದ್ರೆ ಸರಕಾರದಲ್ಲಿ ಹಣ ಇಲ್ಲ. ಈಗ ಪ್ರಾಪರ್ಟಿ ಎಲ್ಲಾ ಪಬ್ಲಿಕ್ ಹತ್ತಿರ ಇದೆ. ಹಣ.... ಹಣ... ಅಂತ ಜನರಿಗೆಲ್ಲ ಡಯಾಬಿಟಿಸ್, ಬ್ಲಡ್ ಪ್ರಜರ್ ಏರ್ತಾ ಇದೆ.'' ನಿತಿನ್ ನಗುತ್ತಾ ಹೇಳಿದ.

''ಅರ್ಜಂಟೈನಾ ದೇಶದಲ್ಲಿ ಏನಾಗಿದೆ ಗೊತ್ತ.... ಐ.ಎಮ್.ಎಫ್., ವರ್ಲ್ಡ್ ಬ್ಯಾಂಕಿನಿಂದ ಸಾಲ ಮಾಡಿ ಮಾಡಿ ಕೊನೆಗೆ ಸರಕಾರ ಹಿಂದಿರಿಗಿಸಲಾರದೆ ಇಗೊಂದು ಕಾನೂನು ತಂದಿದೆ. ಯಾರೂ ಸಾವಿರ ರೂಪಾಯಿಗಳ ಮೇಲೆ ಬ್ಯಾಂಕ್‌ನಿಂದ ಹಣ ತೆಗೆದುಕೊಂಡು ಹೋಗಬಾರದಂತೆ. ಹೋದರೆ ಸರಕಾರದಿಂದ ಮೊದಲೆ ಅಪ್ಪಣೆ ಪಡೆಯಬೇಕಂತೆ. ಒಂದು ಸಾವಿರಕ್ಕಿಂತ ಮೇಲೆ ಹಣ ಕೈಯಲ್ಲಾಗಲಿ, ಮನೆಯಲ್ಲಾಗಲಿ ಇಟ್ಟುಕೊಳ್ಳಬಾರದಂತೆ. ಈ ಕಾನೂನು ನಮ್ಮ ದೇಶದಲ್ಲೂ ಬಹಳ ಬೇಗನೆ

ಬಂದುಬಿಡುತ್ತೆ. ಸವ್ಯ ಹೇಳುತ್ತಿದ್ದಂತೆ ''ಅದೇಗೆ....?'' ಅಮರನಾಥ ಪ್ರಶ್ನಿಸಿದ. ನಮ್ಮ ದೇಶ ಬೇರೆ ಬೇರೆ ದೇಶಗಳಿಗೆ, ಬ್ಯಾಂಕುಗಳಿಗೆ ಎಷ್ಟು ಸಾಲ ಕೊಡಬೇಕು ಗೊತ್ತ....? ನಾಳೆ ಹುಟ್ಟೋ ಮಗೂನು ಒಂದು ಸಾವಿರ ಡಾಲರ್ ಸಾಲ ಕೊಡಬೇಕು. ಬಡ್ಡಿ ಕೊಡುವುದಕ್ಕೆ ಸಾಲ ತೆಗೆದುಕೊಳ್ತಾ ಇದ್ದಾರೆ. ಅವರು ಸುಮ್ಮನೆ ಬಿಡ್ತಾರಾ....? ನಮ್ಮ ದೇಶದವರು ಸ್ವಿಸ್ ಬ್ಯಾಂಕು..... ಇನ್ನೂ ಬೇರೆ ಬೇರೆ ಕಡೆ ಇಟ್ಟಿರೊ ಬ್ಲಾಕ್ ಮನೀನ ವಶಪಡಿಸಿಕೊಂಡುಬಿಟ್ಟರೆ ಸಾಕು. ಒಂದೇ ದಿನದಲ್ಲಿ ನಮ್ಮ ದೇಶದ ಸಾಲಾನೆಲ್ಲ ತೀರಿಸಿಬಿಡಬಹುದು'' ಹೀಗೆ ಮಾತನಾಡುತ್ತಿದ್ದಂತೆ ಕೃತಿಕಾ, ರೂಪ ಮತ್ತು ಪೂಜಾ ಅಲ್ಲಿಗೆ ಬಂದು ಅವರ ಎದುರಿಗೆ ಸ್ವಲ್ಪ ದೂರದಲ್ಲಿ ಕುಳಿತುಕೊಂಡರು. ಅವರನ್ನು ಕುರಿತು, ಇವರು, ಇವರನ್ನು ಕುರಿತು ಅವರು ಮಾತನಾಡುತ್ತ ಸಮಯ ಕಳೆಯುತ್ತಿದ್ದರು.

''ಪಾಪ ಚಿಕ್ಸ್‌ಗೆ ಯಾರೂ ಸಿಕ್ಕಲಿಲ್ಲವೇನೊ'' ನಿತಿನ್ ಹೇಳಿದರೆ, ''ಇವರು ಮೂವಾರಿಗೂ ಡ್ರಸ್ ಸೆನ್ಸ್ ಇಲ್ಲ ಕಣೆ ''ಕೃತಿಕಾ ಹೇಳಿದಳು. ''ಕೃತಿಕಾ ಮೂಗು, ರೂಪಾ ಕೆನ್ನೆಗಳು, ಪೂಜಾ ತುಟಿಗಳು ಚೆನ್ನಾಗಿವೆ'' ಸವ್ಯ ಹೇಳಿದರೆ, ಆ ಕಡೆ ''ಈ ಅಮರನಾಥ ಅಬೋರಿಜಿನ್ನಾದರೆ, ಸವ್ಯ ಆಂಜನೆಯನ ಗುಡಿ ಪೂಜಾರಿ ತರಹ ಇದ್ದಾನೆ, ಇನ್ನು ನಿತಿನ್ ಹಾಲು ವ್ಯಾಪಾರಿ'' ರೂಪ ವಿವರಣೆಗೆ ಮೂವರು ನಕ್ಕರು.

''ಏನೊ ನಗ್ತಾ ಇದ್ದಾರೆ ?'' ಮೂವರು ಒಮ್ಮೆಲೆ ಫ್ಲಾಟ್ ಆದಂತೆ ಅವರ ಕಡೆಗೆ ನೋಡಿದರು. ''ಮೂರು ಐಟಂಗಳು ಚೆನ್ನಾಗಿವೆ.'' ನಿತಿನ್ ಹೇಳಿದ. ''ಅನು ಸತ್ತೋದ ಮೇಲೆ ಎಲ್ಲಾ ಡಲ್ ಆಗಿಬಿಟ್ಟರು. ಅದಕ್ಕೆ ಮುಂಚೆ ಏನು ಆಡ್ತಾ ಇದ್ದರು ಇವರು....? ಅವರ ಅಪ್ಪ ಅಮ್ಮ ಬಂದು, ಟುವ್ಹಿಲರ್ , ಟಿ.ವಿ., ಫ್ರಿಜ್ಡ್ ಎಲ್ಲಾ ಕಿತ್ತುಕೊಂಡು ಹಾಸ್ಟಲಿಗೆ ಬಿಸಾಕಿ ಹೊರಟೋದರಂತೆ '' ಅಮರನಾಥ ಹೇಳಿದ.

''ಅಲ್ಲೊ ಲೆಡೀಸ್‌ನ ಬೆಟರ್ ಆಫ್ ಅಂತ ಯಾಕ್ ಕರಿತಾರೆ....?'' ನಿತಿಸ್ ಪ್ರಶ್ನಿಸಿದ. ''ಸಮ್‌ತಿಂಗ್ ಸ್ಪೆಷಲ್. ಲೆಡೀಸ್ ಹಾರ್ಮೋನ್ಸ್...... ಕ್ರೋಮೊಸೋಮ್ಸ್ ಸ್ಮೂತ್ ಅನಿಸುತ್ತೆ'' ಸವ್ಯ ಹೇಳಿದ. ''ನೀನು ಏನೇ ಹೇಳು ಈ ಹುಡುಗರು, ಹುಡುಗಿಯರಿಗಿಂತ ರಫ್ ಅಂಡ್ ಟಫ್‌ಮಸ್ಕಲೈನ್ ಆಗಿರ್‍ತಾರೆ. ಪ್ರಕೃತಿಯೆ ನಮಗೆ ದ್ರೋಹ ಮಾಡಿಬಿಟ್ಟಿದೆ ಕಣೆ '' ಕೃತಿಕಾ ಹೇಳಿದಳು.

''ಅದೆಲ್ಲಾ ಸುಳ್ಳು , ಬುಡಕಟ್ಟು ಜನರಲ್ಲೂ ಈಗ್ಲೂನು ಹೆಂಗಸೆ ಮನೆ ಯಜಮಾನಿ. ಗಂಡಸರ್‍ನ ತೆಪ್ಪಗೆ ಬಿದ್ದಿರು ಅಂದರೆ ಬಿದ್ದಿರ್‍ತಾರಂತೆ. ರಫ್ ಅಂಡ್ ಟಫ್ ಮಸ್ಕಲೈನು ಪ್ರಶ್ನೇನೆ ಬರೊದಿಲ್ಲ'' ರೂಪ ವಿವಿರಣೆ.

''ರಾಮ್‌ಮನೋಹರ ಲೋಹಿಯಾ ಏನು ಹೇಳಿದ್ದಾರೆ ಗೊತ್ತ....? ಬ್ರಿಟಿಷ್

ರಾಣಿ ಬಿಳಿ ಚರ್ಮ ಆಗಿದ್ದರಿಂದ ಎಲ್ಲರೂ ಹೊಗಳಿದ್ದರು. ಬೈ ಚಾನ್ಸ್ ಯಾರಾದರು ನೀಗ್ರೊ ಲೇಡಿ ರಾಣಿಯಾಗಿದ್ದರೆ ಕಪ್ಪು ಬಣ್ಣಾನೆ ಬಹಳ ಶ್ರೇಷ್ಠ ಅಂತ ಹೊಗಳ್ತಾ ಇದ್ದರು ಅಂದಿದಾರೆ'' ನಿತಿನ್ ಹೇಳಿದ.

''ಇವನು ಏನೇನೊ ತಿಳಿದುಕೊಂಡಿದ್ದಾನೆ. ಎಲ್ಲೊ ಓದಿದೆ ಇದೆಲ್ಲ...?'' ಅಮರನಾಥ ಆಶ್ಚರ್ಯ ವ್ಯಕ್ತಪಡಿಸಿದ. ''ನಿಮ್ಮ ತರಹ ನಾನೇನು ಹೆಡ್ಡಾನಾ.....? ಬ್ರಿಲಿಯಂಟ್ ಕಣೊ ನಾನು'' ನಿತಿನ್ ತನಗೆ ತಾನೇ ಸರ್ಟಿಫಿಕೇಟ್ ಕೊಟ್ಟುಕೊಂಡ.

''ಇವರು ಮೂವರ್‍ನ್ನು ಯಾವಾಗಲಾದರು ಸರಿಯಾಗಿ ಪ್ಲರ್ಟ್ ಮಾಡಬೇಕು ಕಣೆ'' ಕೃತಿಕಾ ಹೇಳುತ್ತಿದ್ದಂತೆ ಪೂಜಾ ಸೀಟಿ ಹಾಕಿ ಸುಮ್ಮನಾದಳು. ಸೀಟಿ ಕೇಳಿದ ಮೂವರು ಸುತ್ತಲು ತಿರುಗಿ ನೋಡಿದರು. ''ಲೊ ಇವರೇನೊ ಸೀಟಿ ಹಾಕಿದ್ದು.'' ಸವ್ಯ ನೆಲಕ್ಕೆ ನೋಡುತ್ತಾ ಹೇಳಿದ.

''ಬಾಯ್ಸ್‌ಗಿಂತ ಕಡಿಮೆಯಿಲ್ಲ ಅನ್ನೊ ಅಹಂ ಯಾಕೆ ಈ ಹುಡುಗಿಯರಿಗೆ....?'' ನಿತಿನ್ ಪ್ರಶ್ನೆ. ''ಲೋ ನೀನು ಒಂದೊಂದು ಸಲ ಬುದ್ಧಿವಂತನ ತರಹ ಮಾತನಾಡ್ತೀಯ....? ಒಂದೊಂದು ಸಲ ಒಳ್ಳೆ ಪೆಕರ್‌ನ ತರಹ ಮಾತನಾಡ್ತೀಯೊ...? ಅದೊಂದು ಮನೋರೋಗ ಕಣೊ'' ಸವ್ಯ ಹೇಳಿದ. ''ಅವರು ಪ್ಯಾಂಟ್ ಶರ್ಟ್ ಹಾಕ್ಕೊಂಡುಬಿಟ್ರೆ ಬಾಯ್ಸ್ ಆಗಿಬಿಡ್ತಾರಾ....?'' ನಿತಿನ್ ಪ್ರಶ್ನೆ. ''ಲೊ ಇಬ್ಬರೂ ಸೇರಿ ನನ್ನ ಬ್ರೈನ್‌ಗ್ಯಾಕೊ ಕೈ ಹಾಕ್ತೀರಾ....? ಅಮರನಾಥ ತಲೆ ಚಚ್ಚಿಕೊಂಡ.

ಅಷ್ಟರಲ್ಲಿ ಕೃತಿಕಾ ಗುಂಪಿನ ಮೂವರು ಆರು ಚಾಕೊಬಾರ್‌ಗಳನ್ನು ಹಿಡಿದುಕೊಂಡು ಅಮರನಾಥ ಮತ್ತು ಅವನ ಗೆಳೆಯರ ಎದುರಿಗೆ ನಿಂತುಕೊಂಡಿದ್ದರು. ಅರೆ ಇವರು ಯಾವಾಗ ಎದ್ದೋಗಿ ಚಾಕೊಬಾರ್ ತಂದರು....? ಮೂವರು ಅವರನ್ನೇ ನೋಡುತ್ತಿದ್ದಂತೆ ''ತೆಗೆದುಕೊಳ್ಳಿ'' ಎಂದರು. ಮೂವರು, ಮೂವರಿಗೆ ಚಾಕೊಬಾರ್ ಕೊಟ್ಟರು. ಏನೊ ಮಾಮ್ಲ ಇದೆ. ಮೂವರು ಒಬ್ಬರನ್ನೊಬ್ಬರು ನೋಡಿಕೊಂಡು ಚಾಕೊಬಾರ್‌ನ ಕೈಗಳಿಗೆ ತೆಗೆದುಕೊಂಡರು.

''ಹರೀಶ್ ನಿಮ್ಮನ್ನ ಪಾರ್ಟಿಗೆ ಕರೆದಿದ್ದಾನ....? ಕೃತಿಕಾ ಕೇಳಿದಳು. ''ಯಾವ ಹರೀಶ್...? ಟೊಯೊಟಾ ಹರೀಶಾನಾ....?'' ಸವ್ಯ ಪ್ರಶ್ನಿಸಿದ. ಎಲ್ಲರೂ ನಗುತ್ತಿದ್ದಂತೆ ಪೂಜಾ ಹೌದೆಂದಳು. ''ನಾವು ಅವನು ಕರೆದರು ಹೋಗೊದಿಲ್ಲ. ನಿಮ್ಮನ್ನ ಕರೆದಿದ್ದಾನಾ....? ಅಮರನಾಥ ಕೇಳಿದ. ''ನಾವು ಅವನು ಕರೆದರು ಹೋಗೊದಿಲ್ಲ'' ಕೃತಿಕಾ ಉತ್ತರಿಸಿದಳು. ''ಮತ್ತೆ ನಿಮಗೇಗೆ ಗೊತ್ತಾಯಿತು...?

ಅವನು ಪಾರ್ಟಿ ಮಾಡ್ತಾನೆ ಅಂತ ?'' ನಿತಿನ್ ಮಾತಿಗೆ ಮೂವರು ಒಬ್ಬರನ್ನೊಬ್ಬರು ನೋಡಿಕೊಂಡು "ನಮಗೆ ಅಷ್ಟು ಗೊತ್ತಾಗೊದಿಲ್ಲವೆ....?'' ಅಂದರು.

"ಏನು ಹೆಗಲ ಮೇಲೆ ಯಾವಾಗಲೂ ಆಂಟೆನಾ ಇಟ್ಟುಕೊಂಡು ಓಡಾಡ್ತಾ ಇರ್ತಿರಾ....? ಸವ್ಯನಕ್ಕ. "ಆ ಕುಡುಕನಸ್ನೆಕ್ಕಳ ಸಹವಾಸ ಮನಗ್ಯಾಕೆ ಬಿಡ್ರೊ'' ಅಮರನಾಥ ಹೇಳಿದ. ಅಷ್ಟರಲ್ಲಿ ಬೆಲ್ಲು ಹೊಡೆದು ಎಲ್ಲರು ಎದ್ದುನಿಂದರು.

✻ ✻ ✻

ಮರುದಿನ ಬೆಳಗ್ಗೆ ವೈದ್ಯಕೀಯ ಕಾಲೇಜನ್ನು ಮುಚ್ಚಿ ರಜೆ ಘೋಷಿಸಲಾಗಿತ್ತು. ವಿದ್ಯಾರ್ಥಿಗಳು, ವಿದ್ಯಾರ್ಥಿನಿಯರು ಅಲ್ಲಲ್ಲಿ ಗುಂಪು ಗುಂಪಾಗಿ ನಿಂತುಕೊಂಡು ಮಾತನಾಡಿಕೊಳ್ಳುತ್ತಿದ್ದರು. ಕೆಲವು ವಿದ್ಯಾರ್ಥಿಗಳು ವಿಷಯ ತಿಳಿದು ಆಗಲೆ ಅನಾಹುತ ನಡೆದಿರುವ ಮನೆಕಡೆಗೆ ಧಾವಿಸಿದ್ದರು.

ಸತ್ತೊದ ಹುಡುಗನ ಮನೆಯವರಿಗೆ ವಿಷಯ ತಿಳಿದು ಅವರು ಎದೆ ಎದೆ ಬಡಿದುಕೊಂಡು ಅವರಿದ್ದ ಊರಿನಿಂದ ಬೆಂಗಳೂರಿಗೆ ದಾವಿಸಿ ಬರುತ್ತಿದ್ದರು. ನಡೆದದ್ದು ಇಷ್ಟೆ. ಹರೀಶ್‌ನ ತಂದೆ ತನ್ನ ಪ್ರೀತಿಯ ಮಗ ಬೆಂಗಳೂರಿನ ಮೆಡಿಕಲ್ ಕಾಲೇಜಿನಲ್ಲಿ ಕಡಿದು ಕಟ್ಟೆ ಹಾಕುತ್ತಿದ್ದಾನೆಂದು, ತಮ್ಮ ಐಶ್ವರ್ಯವನ್ನು ತನ್ನ ಮಗನಲ್ಲದೆ ಬೇರೆ ಯಾರು ಅನುಭವಿಸಬೇಕೆಂದು ಮಗನ ಹುಟ್ಟಿದ ಹಬ್ಬಕ್ಕೆ ಒಂದು ಟೊಯಾಟಾ ಕಾರು ಕೊಡುಗೆ ನೀಡಿದ್ದರು. ಇನ್ನು ಕೈ ಖರ್ಚಿಗಂತು ಕೇಳುವಂತಿರಲಿಲ್ಲ. ಬ್ಲಾಂಕ್ ಚೆಕ್ಕುಗಳು ಬಂದು ಬೀಳುತ್ತಿದ್ದವು. ಹರೀಶ್ ತನ್ನ ಗೆಳೆಯರನ್ನು ಕಾರಿನಲ್ಲಿ ಕೂರಿಸಿಕೊಂಡು ಬೆಂಗಳೂರಿನ ರಸ್ತೆಗಳಲ್ಲಿ ಓಡಿಸಿ ಸಾಯಂಕಾಲ ಮನೆ ಮುಂದೆ ನಿಲ್ಲಿಸಿದ. ರಾತ್ರಿ ತನ್ನ ಆಪ್ತ ಗೆಳೆಯರನ್ನೆಲ್ಲ ಅಹ್ವಾನಿಸಿ ಒಂದು ಭರ್ಜರಿ ಗುಂಡು ಮತ್ತು ತುಂಡು ಪಾರ್ಟಿಯನ್ನು ಏರ್ಪಡಿಸಿದ್ದ.

ಅವನ ಗುಂಪಿನಲ್ಲಿದ್ದರೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಪ್ರವೀಣರೆ. ಎಲೆಯಾಟ, ಕಂಪ್ಯೂಟರ್ ಜೂಜು, ಕುದುರೆ ಜೂಜು, ಕುಡಿತ ಮಾದಕ ವಸ್ತುಗಳ ಸೇವನೆ, ಜಾಲಿ ರೈಡಿಂಗ್, ಹುಡುಗಿಯರನ್ನು ವಾಚ್ ಮಾಡುವುದು , ಕತ್ತಲಲ್ಲಿ ಬ್ಲೂ ಸಿನಿಮಾ ನೋಡುವುದು ಇತ್ಯಾದಿ. ಹೀಗೆ ಎಲ್ಲ ತರಹದವರು ಇದ್ದರು. ಇವರೆಲ್ಲರು ಹಣವಂತರ ಕುಟುಂಬಗಳಿಂದ ಬಂದವರಾಗಿದ್ದರು. ಬೆಂಗಳೂರಿನಲ್ಲಿ ದೊರಕುತ್ತಿದ್ದ ಬೆಸ್ಟ್ ಆಫ್‌ದ ಬೆಸ್ಟ್‌ನ್ನು ಅವರು ಅನುಭವಿಸುತ್ತಿದ್ದರು.

ರಾತ್ರಿ ಒಂಭತ್ತು ಗಂಟೆಗೆ ಶುರುವಾದ ಪಾರ್ಟಿ ಬೆಳಗಿನಜಾವ ಎರಡು ಗಂಟೆಯಾದರು ನಡೆಯುತ್ತಲೆ ಇತ್ತು. ಸಿಗರೇಟುಗಳು ಎಷ್ಟು ಉರಿದು

ಹೋದವೊ.....? ಬೀರು, ಬ್ರಾಂದಿ, ವಿಸ್ಕಿ ಬಾಟಲುಗಳು ಎಷ್ಟು ಖಾಲಿಯಾದವೊ....? ಹಲ್ಕಾ ಮಾತುಗಳು ಎಷ್ಟು ವ್ಯಯವಾದವೊ ಯಾರಿಗೂ ತಿಳಿಯಲಿಲ್ಲ. ಕುಡಿದು ಜಾಸ್ತಿಯಾದವರು ಒಬ್ಬೊಬ್ಬರಾಗಿ ಸೊಟ್ಟಗೆ ನೆಟ್ಟಗೆ ಎದ್ದುಬಿದ್ದು ಅಲ್ಲಲ್ಲೆ ಉರುಳಿಕೊಂಡರು.

ಬೆಳಗ್ಗೆ ಬೆಂಗಳೂರೆಲ್ಲ ಎದ್ದು ಕುಳಿತುಕೊಂಡರು ಅವರ್‍ಯಾರೂ ಮಲಗಿದ್ದಲ್ಲಿಂದ ಮೇಲಕ್ಕೆ ಏಳಲಿಲ್ಲ. ಸೂರ್ಯ ಬೆಂಗಳೂರಿನ ಸಂದುಗೊಂದಿಗಳನ್ನೆಲ್ಲ ಸ್ಪರ್ಶಿಸಿದ ಎಷ್ಟೊ ಹೊತ್ತಿನ ಮೇಲೆ ಒಬ್ಬೊಬ್ಬರಾಗಿ ಮಂಪರು ಕಣ್ಣುಗಳನ್ನು ಬಿಡುತ್ತಾ ಡಿಜ್ಜಿನೆಸ್ ಅನುಭವಿಸುತ್ತ ಗೋಡೆಗಳ ಕಡೆಗೆ ನೋಡುತ್ತಾ ಎದ್ದು ಕುಳಿತುಕೊಂಡರು. ಏನೋ ಕಳೆದುಕೊಂಡಿರುವಂತೆ, ಉದಾಸೀನತೆ, ತಲೆಬಾರ, ಮೈಕೈಯೆಲ್ಲ ನೋವು, ಖಾಲಿಖಾಲಿಯಾದ ದೇಹ, ಎಲ್ಲರೂ ಎದ್ದು ಕುಳಿತುಕೊಂಡು, ನಿಂತುಕೊಂಡು ತಮ್ಮ ಇರುವಿಕೆಯನ್ನು ಖಾತರಿಪಡಿಸಿಕೊಳ್ಳುತ್ತಿದ್ದರು. ಹರೀಶ್ ಮಾತ್ರ ಇನ್ನೂ ಕದಲಾಡಲಿಲ್ಲ .

ಎಲ್ಲರಿಗೂ ಸಂದೇಹ ಬಂದು ಹರೀಶ್‌ನನ್ನು ಕದಲಾಡಿಸಿ ನೋಡಿದರು. ಹು...ಹು... ಹತ್ತಿರ ಕುಳಿತು ಕೈಹಿಡಿದು ನೋಡಿದರು. ತಣ್ಣಗಾಗಿದೆ. ಮುಖದ ಮುಂದೆ ಕೈ ಇಟ್ಟು ನೋಡುತ್ತಾರೆ ಉಸಿರು ನಿಂತುಹೋಗಿದೆ.

"ಲೊ ಏನೊ ಇವನು ಉಸಿರಾಡ್ತಾ ಇಲ್ಲ....?" "ಏನು .... ಉಸಿರಾಡ್ತಾಯಿಲ್ಲವ...? ಈಗ ಎಲ್ಲರೂ ಅವನನ್ನು ಉರುಳಾಡಿಸಿ ನೋಡಿದರು. ಹರೀಶ್ ಯಾವಾಗಲೊ ಇಹಲೋಕ ಸೇರಿಹೋಗಿದ್ದ. ಬೆಚ್ಚಿಬಿದ್ದ ಎಲ್ಲರಿಗೂ ಪ್ರಾಣವೆ ಹಾರಿಗೋಗಿತ್ತು. ಅಂತೂ ವಿಷಯ ಪೊಲೀಸರಿಗೆ ತಲುಪಿ ಪೊಲೀಸರು ಸತ್ತ ಹರೀಶ್‌ನನ್ನು ಪೋಸ್ಟ್ ಮಾರ್ಟಂ ಮಾಡಿದ ಮೇಲೆ ಅವರ ತಂದೆ ತಾಯಿಯರಿಗೆ ಒಪ್ಪಿಸಿದರು. ಅವನ ಜೊತೆಯಲ್ಲಿ ರಾತ್ರಿಯಲ್ಲಿ ಸ್ವರ್ಗ ಸುಖ ಅನುಭವಿಸಿದವರನ್ನು ಪೊಲೀಸ್ ಠಾಣೆಗೆ ಕರೆದುಕೊಂಡುಹೋಗಿ ವಿಚಾರಣೆ ನಡೆಸಿ ಹಿಂದಕ್ಕೆ ಕಳುಹಿಸಿದ್ದರು. ವೈದ್ಯರು ಪೋಸ್ಟ್‌ಮಾರ್ಟಂ ವರದಿಯಲ್ಲಿ ಹರೀಶ್ ಸಿಕ್ಕಾಪಟ್ಟೆ ಕುಡಿದಿದ್ದ ಕಾರಣದಿಂದ ಮಿದುಳಿನಲ್ಲಿ ರಕ್ತ ಸ್ರಾವವಾಗಿ ಸತ್ತಿದ್ದನೆಂದು ತಿಳಿಸಿದ್ದರಿಂದ ಅವನ ಗೆಳೆಯರೆಲ್ಲ ಬಚಾವಾಗಿದ್ದರು.

ಹರೀಶ್‌ನ ಸಾವಿನಿಂದ ಕಾಲೇಜಿಗೆ ರಜಾ ಘೋಷಿಸಲಾಗಿತ್ತು. ಅಮರನಾಥ ಮತ್ತು ಅವನ ಗೆಳೆಯರು ಮೊದಲಿಗೆ ವಿಷಯ ತಿಳಿದು ಸ್ವಲ್ಪ ಗಾಬರಿಯಾದರು. ಆನಂತರ ಎಲ್ಲದಕ್ಕೂ ಒಂದು ಲಿಮಿಟ್ ಇರುತ್ತೆ. ಲಿಮಿಟ್ ಇಲ್ಲ ಅಂದರೆ ಹೀಗೇನೆ

ಎಂದು ಮಾತನಾಡಿಕೊಂಡರು. ಕೃತಿಕಾ ಮತ್ತು ಅವಳ ಗೆಳತಿಯರು ಮಾತ್ರ ಹರೀಶ್‌ನ ಸಾವಿನ ವಿಷಯ ಕೇಳಿ ದಂಗಾಗಿಹೋಗಿದ್ದರು. ಹಣವಂತರ ಮಕ್ಕಳು ಹೀಗೆಲ್ಲ ಸಾಯ್ತಾರ್ತಾ ಅನ್ನೋ ಯೋಚನೆ ಬಂದಿತು. ಬಡವರಿಗಂತ ಹಣವಂತರಿಗೆ ಕೆಟ್ಟಗುಣಗಳು ಹೆಚ್ಚು ಎನ್ನುವ ಯೋಚನೆ ಕೃತಿಕಾ ತಲೆಯಲ್ಲಿ ತುಂಬಿಕೊಳ್ಳುತ್ತಿತ್ತು. ಯಾರು ಸತ್ತರೇನು....? ಬದುಕು ನಿರಂತರ. ಕಾಲೇಜು ಮತ್ತೆ ಪ್ರಾರಂಭವಾಯಿತು.

* * *

ಅಮರನಾಥನ ಮನೆಯಲ್ಲಿ ವಿಪರೀತ ತೊಂದರೆಗಳು ಶುರವಾಗಿದ್ದವು. ಅವನ ತಂದೆ ಒಬ್ಬರ ಸಂಪಾದನೆ ಮಾಡುವುದು ಮನೆಯಲ್ಲಿ ಏನೇನೂ ಸಾಕಾಗುತ್ತಿರಲಿಲ್ಲ. ಅವನ ತಂದೆ, ಊರಿನಲ್ಲಿದ್ದ ವಯಸ್ಸಾದ ತಂದೆ, ತಾಯಿ ಮತ್ತು ತಮ್ಮಂದಿರಿಗೆ ತಿಂಗಳು ತಿಂಗಳು ಹಣ ಕಳುಹಿಸಿಕೊಡಬೇಕಾಗಿತ್ತು. ಊರಿನಲ್ಲಿ ಮಳೆ ಇಲ್ಲದೆ ಯಾವಾಗಲು ಬೆಳೆ ಸರಿಯಾಗಿ ಬೆಳೆಯುತ್ತಿರಲಿಲ್ಲ

ಈ ನಡುವೆ ಅಮರನಾಥನಿಗೆ ವರ್ಷದ ಅಂತಿಮದಲ್ಲಿ ಐದಾರು ಸಾವಿರ ರೂಪಾಯಿಗಳು ಫೀಜು ಕಟ್ಟಬೇಕಾಗಿ ಬಂದಿತು. ಮನೆಯಲ್ಲಿದ್ದ ತೊಂದರೆಗಳಿಂದ ಅಮರನಾಥ ತನ್ನ ತಂದೆಯನ್ನು ಫೀಜು ಕೇಳದೆ ಹೋದ. ಅಮರನಾಥ ವೈದ್ಯಕೀಯಕ್ಕೆ ಸೇರಿದಾಗಿನಿಂದ ಪುಸ್ತಕ , ಫೀಜು, ಬಟ್ಟೆ ಡಿಸೆಕ್ಷನ್ ಬಾಕ್ಸು ಎಲುಬುಗಳು ಹೀಗೆ ಒಂದಲ್ಲ ಒಂದಕ್ಕೆ ಸಾವಿರಾರು ರೂಪಾಯಿಗಳು ಖರ್ಚಾಗಿತ್ತು. ಅವನ ತಂದೆ ಏನು ಕೇಳಿದರು ಹೇಗೊ ಸಾಲ ಮಾಡಿ ತಂದುಕೊಡುತ್ತಿದ್ದರು. ಮನೆಯಲ್ಲಿನ ತೊಂದರೆಗಳನ್ನು ನೋಡಿ ತಂದೆಯನ್ನು ಕೇಳಲು ಅವನಿಗೆ ಮನಸ್ಸು ಬರಲಿಲ್ಲ. ಈಗ ಏನು ಮಾಡುವುದು....? ಒಂದೆರಡು ದಿನಗಳಲ್ಲಿ ಫೀಜು ಕಟ್ಟಬೇಕು.

ಅಮರನಾಥ, ಸವ್ಯ ಮತ್ತು ನಿತಿನ್ ಕಾಲೇಜ್ ಹೊರಗಿನ ಒಂದು ಬೇಕರಿಯಲ್ಲಿ ಕುಳಿತು ಚಹಾ ಕುಡಿಯುತ್ತಿದ್ದಾರೆ. ಅಮರನಾಥ ಚಹಾ ಕುಡಿಯುತ್ತಿದ್ದರು ಅವನ ಮನಸ್ಸು ಒಂದು ಕಡೆ ನಿಲ್ಲುತ್ತಿಲ್ಲ . ನಾಳೆ ಬೆಳಗ್ಗೆ ಕಾಲೇಜಿನಲ್ಲಿ ಫೀಜು ಕಟ್ಟಬೇಕಲ್ಲ ಏನು ಮಾಡುವುದು....? ಸವ್ಯನನ್ನೊ ನಿತಿನ್‌ನನ್ನೊ ಕೇಳಲೆ....? ಅವರು ಮಾತ್ರ ಎಲ್ಲಿಂದ ತರುತ್ತಾರೆ....? ಹೀಗೆ ಒಳಗೊಳಗೆ ಯೋಚಿಸುತ್ತಿದ್ದಾನೆ.

"ಲೋ ಫೀಜು ಕಟ್ಟಬಿಟ್ಟಿಯೇನೊ....?" ಸವ್ಯ, ಅಮರನಾಥನನ್ನು ಕೇಳಿದ. "ಇಲ್ಲಕಣೊ, ಮನೆಯಲ್ಲಿ ತುಂಬಾ ತೊಂದರೆ ಆಗಿಬಿಟ್ಟದೆ ಮನೆಯಲ್ಲಿ ಕೇಳೊದಕ್ಕೆ ಮನಸ್ಸೆ ಬರ್‍ತಾ ಇಲ್ಲ " ಅಂದ. ಅಷ್ಟರಲ್ಲಿ ಹರ್ಷ ಒಂದು ಹೊಸ ಮೋಟಾರ್ ಬೈಕಿನಲ್ಲಿ ಬಂದು ಅವನ ಎದುರಿಗೆ ನಿಲ್ಲಿಸಿ "ಲೇ ನನ್ನ ಮಕ್ಕಳ ಎಲ್ಲೆಲ್ಲೊ ನಿಮ್ಮನ್ನ ಹುಡುಕುವುದು?" ಎಂದ.

ಮೂವರು ಎದ್ದು ಬಂದು ವಾಹನವನ್ನು ಸವರುತ್ತಾ ''ವಾವ್ ಚೆನ್ನಾಗಿದೆಯೊ ಗಾಡಿ '' ಸವ್ಯ ಹೇಳಿದ. ''ಇದು ಗಾಡಿನಾ...? ವಾಹನ '' ಎಂದ ಹರ್ಷ. ಎಲ್ಲರೂ ನಕ್ಕರು. ''ಎಷ್ಟು ಕೊಟ್ಟೆ...? ನಡಿ ಪಾರ್ಟಿಕೊಡು'' ನಿತಿನ್ ಹೇಳಿದ. ''ಪಾರ್ಟಿತಾನೆ ಕೊಡೋಣ. ಎಲ್ಲಾ ಹೇಗಿದ್ದೀರೊ....? ನಿಮ್ಮ ಗರ್ಲ್‌ಫ್ರೆಂಡ್ಸ್ ಎಲ್ಲಾ ಚೆನ್ನಾಗಿ ಎಂಜಾಯ್ ಮಾಡ್ತಾ ಇದ್ದಾರಾ....? ಯಾರೂ ಡ್ಯೂಯ್ ಉಳಿಸಿಕೊಳ್ಳಬೇಡ್ರೋ ಎಲ್ಲರೂ ಬೇಗನೆ ಡಾಕ್ಟರ್ಸ್‌ಗಲಾಗಿಬಿಡ್ರಿ'' ಹರ್ಷ ಬುದ್ಧಿವಾದ ಹೇಳುತ್ತಿದ್ದಂತೆ ''ಆಯಿತಣ್ಣ'' ಮೂವರು ಒಕ್ಕೊರಳಿನಿಂದ ಹೇಳಿದರು.

''ತರಗತಿಗಳು ಮುಗಿತಾ...? ಇನ್ನು ಇದಿಯಾ...?'' ಹರ್ಷನ ಪ್ರಶ್ನೆಗೆ ಮೊದಲೆ ''ತರಗತಿಗಳು ಇದ್ದರೆ ಏನಂತೆ ನಡಿಯೊ ಪಾರ್ಟಿ ಕೊಡಿಸು'' ಸವ್ಯ ಮತ್ತೆ ಹೇಳಿದ. ''ಲೊ ಪಾರ್ಟಿ ಗೀರ್ಟಿ ಏನೂ ಬೇಡ ಸುಮ್ಮನಿರ್‍ರೊ ಮೊನ್ನೆತಾನೆ ಆ ನನ್ಮಗ ಸತ್ತೋದ '' ಅಮರನಾಥ ಹೇಳಿದ. ''ಲೊ ಹೌದೆನ್ರೋ....? ಯಾರೊ ಅವನು...? ಕುಡಿದು ಸತ್ತೋದನಂತೆ ಪತ್ರಿಕೆಯಲ್ಲಿ ಓದಿದೆ. ''ನೋಡ್ರೋ ನಾನು ನಿಮಗೆ ತಿನ್ನೊದಕ್ಕೆ ಏನು ಬೇಕಾದ್ರು ಕೊಡಿಸ್ತೀನಿ. ಆದರೆ ಕುಡಿಯೊದಕ್ಕೆ ಏನೂ ಕೊಡಿಸುವುದಿಲ್ಲ. ನಡಿಯಿರಿ ಅಲ್ಲಿ ಬನಶಂಕರಿ ಹತ್ತಿರ ಒಂದು ಒಳ್ಳೆ ನಾನ್‌ವೆಜ್ ಹೋಟಲಿದೆ '' ಹರ್ಷ ಎಲ್ಲರನ್ನು ಕರೆದುಕೊಂಡು ಹೋಟಲ್ ಕಡೆಗೆ ನಡೆದ.

ಎಲ್ಲರೂ ಹೋಟಲಿನ ಒಳಗೆ ಕುಳಿತುಕೊಂಡಮೇಲೆ ''ನಿಮಗೆ ಏನೇನು ಬೇಕೊ ಚೆನ್ನಾಗಿ ತಿನ್ನಿ. ಓದೊ ಹುಡುಗರಿಗೆ ಏನೂ ಯೋಚನೆಗಳು ಇರಬಾರದು. ಯಾವಾಗಲು ಬುದ್ಧಿ ಆರೋಗ್ಯವಾಗಿರಬೇಕು'' ಹರ್ಷ ಹೇಳಿದ. ಅಮರನಾಥ ನಾಳೆ ಫೀಜು ಕಟ್ಟುವುದಕ್ಕೆ ಕೊನೆದಿನ ಏನು ಮಾಡುವುದು...? ಹರ್ಷನ್ನ ಕೇಳಿಬಿಡಲೆ ಎಂದುಕೊಳ್ಳುತ್ತಿದ್ದಂತೆ, ''ಹರ್ಷ ಒಂದು ಐದು ಸಾವಿರ ರೂಪಾಯಿ ಬೇಕೊ ನಮಗೆ '' ಸವ್ಯ ಹೇಳಿದ. ''ಯಾಕ್ರೋ ಹುಡುಗಿಯರನ್ನು ಕರೆದುಕೊಂಡು ಟ್ರಿಪ್ ಹೋಗಬೇಕೇನು..?'' ಹರ್ಷ ನಗುತ್ತಾ ಹೇಳಿದ. ಸವ್ಯ ಅಮರನಾಥನ ಕಡೆಗೆ ನೋಡುತ್ತ ''ಅಮರನಾಥ ಈ ಸ್ಟೇಜ್‌ದು ಫೀಜ್ ಇನ್ನು ಕಟ್ಟಿಲ್ಲ'' ಎಂದ. ''ಹೌದಾ! ಯಾವೊತ್ತು ಕೊನೆ ತಾರೀಖು....?'' ''ನಾಳೆ '' ''ಆಯಿತು ನಾಳೆ ಹತ್ತು ಗಂಟೆಗೆ ತಂದು ಕೊಡ್ತೀನಿ. ಇಲ್ಲ ಅಂದರೆ ಈಗ ನನ್ನ ಜೊತೆಗೆ ಬಂದರೂ ಕೊಡ್ತೀನಿ'' ಹರ್ಷ ಅಮರನಾಥನಿಗೆ ಹೇಳಿದ.

ಅಮರನಾಥ ಯಾವ ಪ್ರತಿಕ್ರಿಯೆಯೂ ತೋರದೆ ಹಾಗೆ ಕುಳಿತಿದ್ದ. ''ಯಾಕೊ ನಾನು ಕೊಟ್ಟರೆ ತೆಗೆದುಕೊಳ್ಳುವುದು ಹೇಗೆ ಅಂತಾನಾ....? ಆ ತರಹ ಯೋಚನೆ

ನಿನ್ನ ಮನಸ್ಸಿನಲ್ಲಿದ್ದರೆ ಹೇಳಿಬಿಡು, ಇಲ್ಲಿಂದ ಈಗಲೆ ಎದ್ದು ಹೊರಟುಹೋಗ್ತಿನಿ. ನಿನ್ನ ಫ್ರೆಂಡ್‌ಶೀಪ್ ಬೇಡ '' ಹರ್ಷ ಕೋಪಿಸಿಕೊಂಡು ಹೇಳಿದ.

''ನಿನಗೆ ವಾಪಸ್ ಕೊಡೋದು ಹೇಗೆ ಅಂತ ಯೋಚನೆ ಮಾಡ್ತಾ ಇದ್ದೀನಿ'' ಅಮರನಾಥ ಹೇಳಿದ. ''ಓ... ಹಾಗಾ.... ಇವನು ದೊಡ್ಡ ಸ್ವಾಭಿಮಾನಿ ಕಣ್ರೊ. ಅಲ್ವೊ ಒಬ್ಬರ್ನ ಒಬ್ಬರು ಸಾಯಿಸಿ ಹಣ ಸಂಪಾದನೆ ಮಾಡ್ತಾ ಇದ್ದರೆ, ನೀನು ಯಾವ ಕಾಲದವನೊ. ನೋಡೊ ನೀನು ನನ್ನಿಂದ ಉದಾರಿ ತೆಗೆದುಕೊಳ್ಳಬೇಡ. ಸಾಲ ಅಂತ ತೆಗೆದುಕೊಂಡು ನೀನು ಹಣ ಸಂಪಾದಿಸ್ತೀಯಲ್ಲ ಆಗ ಕೊಟ್ಟುಬಿಡು.'' ಹರ್ಷನ ಮಾತಿಗೆ ಅಮರನಾಥ ''ಆಯಿತು.'' ಎಂದು ತಲೆ ಆಡಿಸಿದ.

ಎಲ್ಲರೂ ಭರ್ಜರಿ ನಾನ್‌ವೆಜ್ ಭಕ್ಷ್ಯಗಳನ್ನು ತಿಂದು ಕಾಲೇಜು, ಹುಡುಗಿಯರು ಬೆಂಗಳೂರಿನ ವಿಷಯಗಳನ್ನೆಲ್ಲ ಮಾತನಾಡಿದರು. ಹರ್ಷನ ಅವತಾರಗಳನ್ನು ತಿಳಿದುಕೊಳ್ಳುವ ಸಲುವಾಗಿ ಮೂವರು ಪದೇ ಪದೇ ಪೀಡಿಸಿ ಏನು ಕೇಳಿದರು ಹರ್ಷನು ಮಾತ್ರ ನಕ್ಕ ಸುಮ್ಮನಾಗುತ್ತಿದ್ದ. ಜೊತೆಗೆ ಸಾರ್ವಜನಿಕ ಸ್ಥಳಗಳಲ್ಲಿ ಅದೆಲ್ಲ ಮಾತನಾಡಬಾರದು ಎಂದು ಕಿವಿ ಮಾತು ಹೇಳತೊಡಗಿದ.

''ನೀವು ವಿದ್ಯಾರ್ಥಿಗಳು, ನಾನಂತು ಕೆಸರಿನಲ್ಲಿ ಬಿದ್ದುಬಿಟ್ಟೆ . ಕಷ್ಟಾನೊ.... ಸುಖಾನೊ ಇದರಲ್ಲೆ ಹೊರಳಾಡಬೇಕು. ನಾನು ಈ ನಡುವೆ ಬುದ್ಧ , ಬಸವಣ್ಣ , ಮಹಾತ್ಮಗಾಂಧಿ, ಪೆರಿಯರ್ ರಾಮಸ್ವಾಮಿ, ಅಂಬೇಡ್ಕರ್, ರಾಮ ಮನೋಹರ ಲೋಹಿಯ, ನೆಹರು, ಇಂದಿರಾಗಾಂಧಿಯವರ ಬಗ್ಗೆ ಓದ್ತಾ ಇದ್ದೀನಿ ಕಣ್ರೊ'' ಎಂದಿದ್ದೆ ಎಲ್ಲರೂ ಹರ್ಷನನ್ನೇ ನೋಡುತ್ತಾ ದಂಗಾಗಿ ಹೋದರು.

''ಹೌದು ಅವನೆಲ್ಲಿ.... ರಿಕಿ ರೊನಾಲ್ಡ್....?'' ಹರ್ಷ ಇದ್ದಕ್ಕಿದ್ದಾಗೆ ಕೇಳಿದ. ''ಅವನಾ....? ಆ ಹೊತ್ತು ಬೆಲ್ಟ್‌ನಲ್ಲಿ ಏಟುಗಳು ತಿಂದು ಹೋದವನು ಇವೊತ್ತಿಗೂ ಕ್ಯಾಂಪಸ್‌ನಲ್ಲಿ ಕಾಣಿಸಲಿಲ್ಲ.'' ಸವ್ಯನ ಮಾತಿಗೆ ಎಲ್ಲರೂ ನಕ್ಕರು. ''ಕೃತಿಕಾ ಅಂಡ್ ಕಂಪನಿ ಹೇಗಿದ್ದಾರೆ....?'' ಅನು ಸತ್ತೋದ ಮೇಲೆ ತಣ್ಣಗಾಗಿಬಿಟ್ಟರು'' ನಿತಿನ್ ಹೇಳಿದ. ''ಕೃತಿಕಾ ನಮ್ಮ ಅಮರನಾಥನಿಗೆ ಡೌವ್ ಹೊಡಿತಾ ಇದ್ದಾಳೆ.....'' ಸವ್ಯ ಹೇಳಿದ. ''ಲೋ ತಗಡು ಸುಮ್ಮನೆ ತಿನ್ನೊ'' ಅಮರನಾಥ ಗದರಿದ. ನೀವು ಎಲ್ಲರೂ ಒಂದೊಂದು ಹುಡುಗೀನ ಡೌವ್ ಹೊಡೆಯಿರಿ. ಇಲ್ಲ ಅಂದರೆ ಕಾಲೇಜ್ ಓದಿದ್ದಕ್ಕೆ ಸಾರ್ಥಕ ಇರೊದಿಲ್ಲ '' ಹರ್ಷ ಹೇಳಿದ. ನಾನು ಡೌವ್ ಹೊಡಿತಾನೆ ಇರ್ತೀನಿ ಬಿಡು'' ಸವ್ಯ ಹೇಳಿದ. ಎಲ್ಲರೂ ನಾನ್‌ವೆಜ್ ಊಟಮಾಡಿ ಹೊರಗೆ ಬಂದು ರಸ್ತೆಯಲ್ಲಿ ನಿಂತುಕೊಂಡರು.

ಒಂದು ಅಂಬಾಸಿಡರ್ ಕಾರು ವೇಗವಾಗಿ ಬಂದು ಅವರ ಮುಂದೆ ನಿಂತುಕೊಂಡಿತು. ಕಾರಿನಿಂದ ಇಳಿದ ಮೂವರು ದಾಂಡಿಗರು ಕಾರು ಬಾಗಿಲುಗಳನ್ನು ಡಬಡಬನೆ ತೆಗೆದುಕೊಂಡು ಹೊರಕ್ಕೆ ಬಂದು ನಿಂತುಕೊಂಡರು. ಹರ್ಷನ ತಲೆಯ ಯಾವುದೊ ಮೂಲೆಯಲ್ಲಿ ಏನೊ ಕುಟುಕಿದಂತಾಯಿತು. ಅಮರನಾಥ ಸವ್ಯ ಮತ್ತು ನಿತಿನ್‌ನನ್ನು ದೂರಕ್ಕೆ ಸರಿಯುವಂತೆ ಹೇಳಿ ಅವರಿಂದ ನಾಲ್ಕು ಹೆಜ್ಜೆ ದೂರಕ್ಕೆ ಸರಿದು ಹರ್ಷ ನಿಂತುಕೊಂಡ.

ಕಾರಿನಿಂದ ಇಳಿದ ಮೂವರು ಆ ಕಡೆಗೆ ಈ ಕಡೆಗೆ ನೋಡಿದರು. ಬಹುಶಃ ಹರ್ಷನನ್ನು ಹೋಟಲಿನ ಒಳಗೆ ಸುತ್ತುವರಿಯಲು ಅವರು ಬಂದಿರಬೇಕು ಆದರೆ ಅಷ್ಟರಲ್ಲಿ ಹೊರಕ್ಕೆ ಬಂದುಬಿಟ್ಟದ್ದರಿಂದ ಅವರ ಪ್ಲಾನು ವಿಫಲವಾಯಿತು ಎನ್ನುವಂತೆ ದಿಕ್ಕು ದಿಕ್ಕನೆ ನೋಡಿದರು.  ಈಗ ಯೋಚಿಸಲು ಯಾರಿಗೂ ಸಮಯವಿರಲಿಲ್ಲ. ಒಂದು ಅವರು ಹರ್ಷನ ಮೇಲೆ ಎರಗಬೇಕು...? ಇನ್ನ ನಮಗೂ ಹರ್ಷನಿಗೂ ಯಾವ ಸಂಬಂಧವು ಇಲ್ಲ ಎನ್ನುವಂತೆ ಅಲ್ಲಿಂದ ಹೋಗಿಬಿಡಬೇಕು. ಅವರು ಇವರನ್ನು , ಇವರು ಅವರನ್ನು ಸ್ವಲ್ಪ ಹೊತ್ತು ನೋಡತೊಡಗಿದರು.

ಅದೇ ವೇಳೆಗೆ ಹೋಟಲಿನ ಒಳಗಿಂದ ಇಬ್ಬರು ಹೊರಕ್ಕೆ ಬಂದಿದ್ದೆ ತಡ ಕಾರಿನ ಒಳಗಿದ್ದವನೊಬ್ಬ "ಏಯ್ ಅಲ್ಲಿ ನೋಡ್ರೊ....?" ಎಂದಿದ್ದೆ ಮೂವರು ಹೋಟಲಿನ ಹೊರಕ್ಕೆ ಬಂದವರ ಮೇಲೆ ಎರಗಿಬಿಟ್ಟರು. ಅವರಿಬ್ಬರೂ ತಮ್ಮಲ್ಲಿದ್ದ ಶಕ್ತಿಯನ್ನೆಲ್ಲ ಮೈಗೂಢಿಸಿಕೊಂಡು ರಸ್ತೆಯೆಲ್ಲಾ ಓಡತೊಡಗಿದರು. ಕಾರು ಅವರ ಹಿಂದೆ ಎರ್‍ರಾಬಿರ್‍ರಿ ಓಡುತ್ತಿದೆ. ಹರ್ಷ ಅಲ್ಲೆ ಇದ್ದ ಫೋನ್ ಭೂತಿನ ಒಳಕ್ಕೆ ಹೋಗಿ ಸಂಖ್ಯೆ ನೂರಕ್ಕೆ ಫೋನ್‌ಮಾಡಿ ಪೊಲೀಸರಿಗೆ ವಿಷಯ ತಿಳಿಸಿದ. ಅಷ್ಟರಲ್ಲಿ ಕಾರು, ಆ ಆಗುಂತಕರು ಎಲ್ಲರೂ ಅಲ್ಲಿಂದ ಮಾಯವಾದರು. '

"ಏನೊ ಬರ್‍ತಾ ಬರ್‍ತಾ ಬೆಂಗಳೂರು ಈಗಾಗ್ತಾಯಿದೆ....? ಮಕ್ಕಳಾ ಭದ್ರ ಹೋಗಿ ಮನೆ ಸೇರಿಕೊಳ್ಳಿ ನಾಳೆ ಭೇಟಿ ಆಗ್ತೀನಿ" ಹರ್ಷ ತನ್ನ ಗಾಡಿ ಏರಿ ಹೊರಟುಹೋದ.

* * *

ಪೊಲೀಸ್ ಠಾಣೆಯಲ್ಲಿ ಸಿ.ಐ. ಮತ್ತು ಎಸ್.ಐ. ಇಬ್ಬರು ಅನು ಕೇಸಿನ ಬಗ್ಗೆ ಮಾತನಾಡುತ್ತಿದ್ದಾರೆ. ಅನು ಸಾವಿನ ನಂತರ ಮನೆಯ ಮೇಲೆ ವೆಂಟಲೇಟರ್‌ಗೆ ಹೊಸದಾಗಿ ಮುಚ್ಚಿದ್ದ ಗ್ಲಾಸನ್ನು ನೋಡಿದ ಪೊಲೀಸರಿಗೆ ಯಾವುದೊ ಮಾಹಿತಿ ದೊರಕಿದಂತಾಗಿ ಮನೆಯನ್ನು ನೋಡಿಕೊಳ್ಳುತ್ತಿದ್ದ ರಂಗಾರಾವ್‌ನನ್ನು ಮೊದಲು

ಕರೆದು ಕೇಳಿದಾಗ ನನಗೆ ಗೊತ್ತಿಲ್ಲ ಎಂದು ತಿಳಿಸಿದ್ದ. ಅನಂತರ ಮತ್ತೆ ಮತ್ತೆ ಕರೆದು ಬೆದರಿಕೆ ಹಾಕಿದಾಗ, ವೆಂಟಲೇಟರ್‌ಗೆ ಮುಚ್ಚಿದ ಗ್ಲಾಸನ್ನು ತಾನೆ ತಂದು ಮುಚ್ಚಿ ಸಿಮೆಂಟ್ ಹಾಕಿದ್ದಾಗಿ ನಾನು ಮೊದಲು ಭೀತಿಯಿಂದ ನಿಜ ಹೇಳಲಿಲ್ಲ ಎಂದು ಒಪ್ಪಿಕೊಂಡ.

ಪೊಲೀಸರು ರಂಗಾರಾವ್‌ನನ್ನು ಎರಡು ಮೂರು ದಿನಗಳು ಗ್ರಿಲ್ ಮಾಡಿದ ಮೇಲೆ ಆತ ನಿರ್ಧೋಷಿ ಎಂದು ತಿಳಿದು ಗ್ಲಾಸ್ಸನ್ನು ಮತ್ತು ಸಿಮೆಂಟ್ ತಂದಿದ್ದ ಅಂಗಡಿಗಳಿಂದ ಖಚಿತಪಡಿಸಿಕೊಂಡು ಕೇಸನ್ನು ಮುಂದುವರಿಸಿದರು. ಅವರಿಗೆ ದೊರಕಿದ್ದ ಎರಡು ಮಾಹಿತಗಳೆಂದರೆ, ಒಂದು ಅನು ಆತ್ಮಹತ್ಯೆ ಮಾಡಿಕೊಂಡಿಲ್ಲ, ಯಾರೊ ಉಸಿರುಗಟ್ಟಿ ಸಾಯಿಸಿರಬಹುದಾದ ಸಂದೇಹ, ಎರಡು ಅನು ಸಾವಿಗೆ ಮುಂಚೆ ವೆಂಟಲೇಟರ್ ಸರಿಯಾಗಿದ್ದು ಅವಳನ್ನು ಸಾಯಿಸಿ ಮನೆಯ ಒಳಗಿಂದ ಚಿಲಕ ಹಾಕಿಕೊಂಡು ವೆಂಟಲೇಟರ್ ಒಡೆದು ಅದರ ಮೂಲಕ ಹಾರಿ ಹೋಗಿರುವ ಸಂದೇಹ....?

ಪೋಸ್ಟ್‌ಮಾರ್ಟಂ ವರದಿಯಂತೆ ಅವಳ ದೇಹದ ಮೇಲೆ ಯಾವುದೇ ಗಾಯಗಳು ಮೂಡಿರಲಿಲ್ಲ , ಹಾಗೆ ಯಾವ ವಿಷಕಾರಕ ಔಷಧಿಗಳು ಅವಳ ದೇಹ ಸೇರಿರಲಿಲ್ಲ . ಅವಳ ಮನೆಯಲ್ಲಿ ಯಾವ ವಸ್ತುಗಳು ಕಳ್ಳತನವಾಗದೆ ಇರುವುದು ಅವರ ಸಂದೇಹವನ್ನು ಹೆಚ್ಚಿಸಿತು. ಅವಳು ತನ್ನ ಜೊತೆಗೆ ಯಾವುದೇ ಬೆಲೆಬಾಳುವ ವಸ್ತುಗಳನ್ನು ಮತ್ತು ಹಣವನ್ನು ಇಟ್ಟುಕೊಂಡಿರಲಿಲ್ಲ ಎಂದು ತಿಳಿಯಿತು. ಇವಳನ್ನು ಯಾರು ಕೊಲೆ ಮಾಡಿರಬಹುದು....? ಬೆಂಗಳೂರಿನ ಯಾವುದಾದರು ನಿಗೂಢ ಗ್ಯಾಂಗ್‌ನ ಕೈವಾಡ ವಿರಬಹುದೆ....? ಯಾವುದಾದರು ಮಾದಕ ಗುಂಪುಗಳಿಗೆ ಶಿಕಾರಿಯಾದಳೆ....? ಅವಳ ಸುತ್ತ ಮುತ್ತಲಿನ ಗೆಳೆಯರು, ಅವಳು ಓಡಾಡುತ್ತಿದ್ದ ಎಲ್ಲಾ ಸ್ಥಳಗಳ ಮೇಲೆ ಕಣ್ಣಿಟ್ಟು ಜಾಲಾಡಿದರು ಯಾವುದೇ ಪ್ರಗತಿ ಕಾಣಲಿಲ್ಲ. ಈಗ ಪೊಲೀಸರ ಕಣ್ಣು ಅವಳ ತಂದೆ ತಾಯಿ ಮತ್ತು ಅವಳ ಸುತ್ತಮುತ್ತಲಿನ ಸಂಬಂಧಿಗಳ ಸುತ್ತಲು ನೆಟ್ಟವು. ಒಬ್ಬಳೆ ಮಗಳು, ಸಾಕಷ್ಟು ಐಶ್ವರ್ಯವಂತರು. ಪೊಲೀಸರು ಮೊದ ಮೊದಲು ಅವಳ ತಂದೆ ತಾಯಿಯನ್ನು ಭೇಟಿಯಾದಾಗ ಅವರು ಯಾರ ಮೇಲೂ ಸಂದೇಹವಿಲ್ಲ ಎಂಬುದಾಗಿ ತಿಳಿಸಿದರು. ಬೆಂಗಳೂರಿನ ಪೊಲೀಸ್ ಅಧಿಕಾರಿಗಳು ಅವಳ ತಂದೆ ತಾಯಿ ಇದ್ದ ಊರಿಗೆ ಮೇಲಿನ ಸಂದೇಹಗಳನ್ನೆಲ್ಲ ಹೊತ್ತು ಮಪ್ತಿಯಲ್ಲಿ ಪ್ರಯಾಣ ಬೆಳೆಸಿದರು.

* * *

ಕೃತಿಕಾ ಮತ್ತು ರೂಪ ಹಾಸ್ಟೆಲಿನ ಒಂದು ಕೋಣೆಯಲ್ಲಿದ್ದರು. ಅವರ ಗೆಳತಿ ಕಮಲ್‌ದಾಸ್ ಸ್ವಂತ ಮನೆಯಿಂದ ಕಾಲೇಜಿಗೆ ಬಂದು ಹೋಗುತ್ತಿದ್ದರು. ಕೃತಿಕಾ ಮತ್ತು ರೂಪ ಈಗ ತಮ್ಮ ಲೋಕವನ್ನು ಹೆಚ್ಚಾಗಿ ಹಾಸ್ಟೆಲಿಗೆ ಸೀಮಿತಗೊಳಿಸಿಕೊಳ್ಳಬೇಕಾಯಿತು. ಬೆಂಗಳೂರಿಗೆ ಬಂದ ಮೊದಲ ವರ್ಷ ಸಾಕಷ್ಟು ಓಡಾಡಿ ಎಂಜಾಯ್ ಮಾಡಿದ್ದ ಅವರು ಅನು ಕೊಲೆಯಾದ ಮೇಲೆ ತತ್ತರಿಸಿಹೋಗಿದ್ದರು. ಅವರ ಪೋಷಕರು ಅವರಿಗೆ ನೀಡಿದ್ದ ಕಾರು, ಟಿ.ವಿ., ಮೊಬೈಲ್ ಫೋನುಗಳನ್ನು ಹಿಂದಕ್ಕೆ ಪಡೆದುಕೊಂಡು ಹಣವನ್ನು ಎಷ್ಟು ಬೇಕೊ ಅಷ್ಟು ಮಾತ್ರ ಕಳುಹಿಸಿ ಅವರ ಎಣೆಯಿಲ್ಲದ ಚಟುವಟಿಕೆಗಳಿಗೆ ನಿರ್ಬಂಧವಾಕಿದ್ದರು.

ಅವರಿಗೆ ಹಾಸ್ಟೆಲ್ ಜೀವನ ಯಾವ ರೀತಿಯಲ್ಲೂ ಇಷ್ಟವಾಗಲಿಲ್ಲ. ಸಾಯಂಕಾಲ ಕತ್ತಲಾಗಿದ್ದೆ ಹಾಸ್ಟೆಲ್ ಸೇರಿಕೊಳ್ಳಬೇಕಾಗಿತ್ತು. ಲೇಟಾದರೆ ವಾರ್ಡನ್‌ಗೆ ಉತ್ತರಿಸಬೇಕಾಗಿತ್ತು. ಹಾಸ್ಟೆಲ್ ಊಟ ಬೇರೆ ಅವರಿಗೆ ಹಿಡಿಸುತ್ತಿಲಿಲ್ಲ . ಬೆಂಗಳೂರು ಸುತ್ತುವ ಅವಕಾಶ ಅವರಿಗೆ ದೊರಕುತ್ತಿರಲಿಲ್ಲ. ಪೋಷಕರು ಕಡಿಮೆ ಹಣ ಕೊಡುತ್ತಿದ್ದರಿಂದ ಒಳ್ಳೆ ಹೋಟಲ್‌ಗಳಿಗೆ ಹೋಗಿ ಹುಡುಗರ ಜೊತೆಗೆ ಹರಟೆ ಹೊಡೆಯುವುದು ನಿಂತುಹೋಗಿತ್ತು.

ಆ ದಿನ ಬೆಳಗ್ಗೆ ರೂಪ ಎದ್ದಿದ್ದೆ ಮೊದಲು ಕನ್ನಡಿಯಲ್ಲಿ ಮುಖವನ್ನು ನೊಡಿಕೊಂಡು ಕೃತಿಕಾ ಮಲಗಿದ್ದ ಹಾಸಿಗೆ ಹತ್ತಿರಕ್ಕೆ ನಡೆದು ಮೃದುವಾಗಿ ಅವಳನ್ನು ತಟ್ಟಿ ಎಬ್ಬಿಸಿ ''ಹ್ಯಾಪಿ ಬರ್ತ್‌ಡೆ.... ಆಂಡ್ ಮೆನಿ ಮೆನಿ ರಿಟನ್ಸ್ ಆಫ್ ದ ಡೇ....'' ಎಂದು ಒಂದು ಗಿಫ್ಟ್ ಪ್ಯಾಕನ್ನು ಕೈಗೆ ನೀಡಿದಳು. ಕೃತಿಕಾ ಥ್ಯಾಂಕ್ಯೂ ಎಂದು ಅವಳ ಕೆನ್ನೆಯನ್ನು ಮೃದುವಾಗಿ ತಟ್ಟಿದಳು. ರೂಪ ಕೂಡ ಅದೇ ರೀತಿಯಾಗಿ ತಟ್ಟಿದಳು.

ಕೃತಿಕಾ ನಿಧಾನವಾಗಿ ಎದ್ದು ಬಾಥ್‌ರೂಮಿನ ಬಳಿಗೆ ಹೋಗಿ ಕನ್ನಡಿ ಮುಂದೆ ನಿಂತುಕೊಂಡಳು. ನೀಳವಾದ ಮೂಗು, ಇಂಗ್ಲೀಷ್ ಕಾದಂಬರಿಕಾರರು ಆಕ್ವಿಲೈನ್ ನೋಸ್ ಎನ್ನುವುದು ಇದೆ ರೀತಿಯ ಮೂಗನ್ನು. ಒಂದನ್ನೊಂದು ಅಪ್ಪಿಕೊಂಡಿರುವ ತುಟಿಗಳು. ಮೇಲಿನ ತುಟಿ ಬಿಲ್ಲಿನಂತಿದೆ. ಕೆಳಗಿನ ತುಟಿ ದಪ್ಪದಾಗಿ ತುಸು ಮುಂದಕ್ಕೆ ಚಾಚಿ ಕುಳಿತುಕೊಂಡಿದೆ. ತಿದ್ದಿದಂತಿರುವ ಕಣ್ಣುಬ್ಬುಗಳು, ಕೆಳಗೆ ಪಳಪಳನೆ ಹೊಳೆಯುವ ಕಣ್ಣುಗಳು, ಬೆಳಕಿಗೆ ಹೊಳೆಯುತ್ತಿರುವ ಕಪ್ಪು ಕೂದಲು, ಬಣ್ಣದ ಕಪೋಲಗಳು. ಸಣ್ಣದಾದ ಗಲ್ಲ , ಶುದ್ಧ ಜೇನು ಹನಿ ಬಣ್ಣದ ದೇಹ ''ವಾವ್ ನಾನು ಎಷ್ಟು ಚೆನ್ನಾಗಿದ್ದೀನಿ....? ಥ್ಯಾಂಕ್ಸ್ ಟು ಮೈ ಮಾಮ್ ಆಂಡ್ ಡ್ಯಾಡಿ'' ತನಗೆ ತಾನೇ ಅರಿವಿಲ್ಲದೆಯೆ ಆ ಮಾತುಗಳು ಅವಳ ಬಾಯಿಂದ ಹೊರಗೆ ಬಿದ್ದಿದ್ದವು.

ಅವಳದು ಕನಸುಗಳನ್ನು ಕಾಣುವ ವಯಸ್ಸಾಗಿದ್ದರಿಂದ ಅವಳಿಗೆ ಎಲ್ಲವು ಸೊಗಸಾಗಿ ಕಾಣುತ್ತಿದ್ದವು. ಮೈಮೇಲಿನ ತೆಳು ಉಡುಪು, ಅವಳು ಉಡುಪನ್ನು ಧರಿಸಿಯೆ ಇಲ್ಲವೇನೊ ಎನ್ನುವಷ್ಟು ಸಡಿಲವಾಗಿದ್ದು ದೇಹದ ಏರು ತಗ್ಗುಗಳು ಕನ್ನಡಿಯಲ್ಲಿ ಎದ್ದು ಕಾಣುತ್ತಿದ್ದವು. ಮೇಲಿನ ಉಡುಪನ್ನು ನಿಧಾನವಾಗಿ ತೆಗೆದು ಹ್ಯಾಂಗರಿಗೆ ಹಾಕಿ ನಗ್ನವಾಗಿ ಕನ್ನಡಿಯ ಎದುರಿಗೆ ನಿಂತುಕೊಂಡಳು. ಅನಂತರ ಕೆಳಗಿನ ಉಡುಪು ತೆಗೆದು ಹಾಕಿದಳು. ಈಗ ಬರಿ ಪ್ಯಾಂಟಿ. ತನ್ನ ಚೇಷ್ಟೆಗಳಿಗೆ ತಾನೆ ನಾಚಿಕೊಂಡು ಉಗುರು ಬೆಚ್ಚಗಿನ ನೀರನ್ನು ದೇಹದ ಮೇಲೆ ತೆಗೆದು ಸುರಿದುಕೊಂಡಳು. ನೀರು ಅವಳ ದೇಹವನ್ನು ಹಿತವಾಗಿ ಸ್ಪರ್ಶಿಸುತ್ತ ನೀರಿನ ಅಣು ಅಣುವು ಅವಳನ್ನು ತನ್ನ ಮಡಿಲಿಗೆ ಸೆಳೆದುಕೊಳ್ಳುತ್ತಿತ್ತು.

ಸ್ನಾನದಿಂದ ದೇಹಕ್ಕೆ ಯಾವುದೊ ಒಂದು ಅದ್ಭುತ ತೃಪ್ತಿ ದೊರಕುತ್ತದೆ. ಕೃತಿಕಾ ನೀರಿನ ಜೊತೆಗೆ ಆಟವಾಡುತ್ತಿದ್ದಂತೆ, "ಕೃತಿಕಾ ಏನೇ ನಾನು ಸ್ನಾನ ಮಾಡಬೇಕಾ.... ಬೇಡವಾ....?" ಬಾಗಿಲನ್ನು ಎರಡು ಸಲ ಕೈಯಿಂದ ಹೊಡೆದಳು. "ನಿನ್ನ ಕಾಟ ಶುರು ಆಗೊಯ್ತೇನೆ....? ಇರು ಬಂದುಬಿಡ್ತೀನಿ" ಎಂದಳು ಕೃತಿಕಾ. ಇಲ್ಲಿ ರೂಪ ಆಗಲೆ ಕನ್ನಡಿ ಮುಂದೆ ನಿಂತುಕೊಂಡು ತನ್ನನ್ನೇ ತಾನು ನೊಡಿಕೊಂಡು ಮೈಮರೆತುಹೋಗಿದ್ದಳು. ಕಾಲೇಜಿಗೆ ಸಮಯವಾಗುತ್ತಿದೆ ಎಂಬ ಆಲೋಚನೆ ಬಂದಮೇಲೆ ಬಾಗಿಲು ಬಡಿದಿದ್ದಳು. ತುಸು ಕುಳ್ಳಗಿದ್ದ ರೂಪ ನಕ್ಕಾಗ ಕೆನ್ನೆಗಳಲ್ಲಿ ಸಣ್ಣದಾದ ಕುಳಿಗಳು ಕಾಣಿಸಿಕೊಳ್ಳುತ್ತಿದ್ದವು. ಮುಖಕ್ಕೆ ಒಪ್ಪುವಂತಹ ಮೂಗು, ಹೊಳೆಯುವ ಕಣ್ಣುಗಳ ಜೊತೆಗೆ ಸುಂದರವಾದ ತುಟಿಗಳ ಮೇಲೆ ಯಾವಾಗಲು ನಗುವನ್ನು ಸಿಕ್ಕಿಸಿಕೊಂಡಿರುತ್ತಿದ್ದಳು.

ರೂಪ ಮತ್ತೊಮ್ಮೆ ಬಾಗಿಲು ಬಡಿದಳು. ಕೃತಿಕಾ ಮೈ ಮಲ್ಲಿಗೆ ಹೂವಿನಂತೆ ಅರಳಿಕೊಂಡಿತ್ತು. ಶುದ್ಧ ಹತ್ತಿಯ ಟವಲನ್ನು ದೇಹಕ್ಕೆ ಅರೆಕೊರೆ ಸುತ್ತಿಕೊಂಡು ಹೊರಗೆ ಬಂದಳು. ಅವಳ ಜೊತೆಗೆ ಶಾಂಪು ಮತ್ತು ಸಾಬೂನಿನ ವಾಸನೆಯು ಹೊರಗೆ ಬಂದಿತು. ಕೃತಿಕಾ ಹೊರಕ್ಕೆ ಬರುತ್ತಿದ್ದಂತೆ ರೂಪ ಒಳಕ್ಕೆ ನುಗ್ಗಿದಳು.

ಕೃತಿಕಾ ಈಗ ತಲೆ ಆರಿಸಿಕೊಂಡು ಜಡೆ ಹಾಕಿಕೊಳ್ಳುತ್ತ ಈ ದಿನ ಯಾವ ರೀತಿಯ ಉಡುಪು ಧರಿಸಬೇಕು ಎಂದು ಯೋಚಿಸತೊಡಗಿದಳು. ಈಗೀಗ ಅವಳು ಜೀನ್ಸ್ ಪ್ಯಾಂಟ್ ಮತ್ತು ಶರ್ಟ್ ಧರಿಸುವುದನ್ನು ಬಿಟ್ಟುಬಿಟ್ಟಿದ್ದಳು. ಕೃತಿಕಾ ಸೀರೆ ಮತ್ತು ಬ್ಲೌಸ್ ಧರಿಸಿ ಮುಖಕ್ಕೆ ತೆಳುವಾಗಿ ಪೌಡರ್ ಲೇಪಿಸಿ ಸಣ್ಣದಾದ ಬಿಂದಿಯನ್ನು ಹಣೆಗೆ ಮೆತ್ತಿಸಿಕೊಂಡು ರೆಡಿಯಾದಳು. ಅಷ್ಟರಲ್ಲಿ ರೂಪ ಕೂಡ ಸ್ನಾನ ಮಾಡಿಬಂದು ತಯಾರಾಗತೊಡಗಿದಳು.

"ಇವೊತ್ತು ತುಂಬಾ ಗಾರ್ಗಿಯಸ್ಸಾಗಿ ಕಾಣ್ತಾ ಇದ್ದೀಯಕಣೆ, ಏನಾದರು ಪ್ಲಾನ್ ಇದಿಯಾ ಹೇಗೆ....?" ರೂಪ, ಕೃತಿಕಾ ಸೊಂಟವನ್ನು ಚಿವುಟಿದಳು. ಅದೇ ಸ್ಥಳವನ್ನು ಯಾರಾದರು ಹುಡುಗರು ಚಿವುಟಬಾರದೆ....? ಎನ್ನುವ ಆಲೋಚನೆಯ ಹಿಂದೆಯೆ ಅನು ಜ್ಞಾಪಕಕ್ಕೆ ಬಂದುಬಿಟ್ಟಳು. ಅವಳು ಅವರಿಬ್ಬರ ಜೊತೆ ಇರುವಷ್ಟು ದಿನ ಗಂಡು ಹುಡುಗನಂತೆ ಕೃತಿಕಾ ಮತ್ತು ರೂಪಾಳ ಎದೆ ಸೊಂಟ ತುಟಿ ಕೆನ್ನೆ ಎಲ್ಲವನ್ನು ಸವರುತ್ತಾ ಚಿವುಟುತ್ತಿದ್ದಳು. ಕೆಲವೊಮ್ಮೆ ಗಂಡು ಹುಡುಗನಂತೆ ತಬ್ಬಿಕೊಂಡು ಸತಾಯಿಸುತ್ತಿದ್ದಳು.

"ಓ... ಪೂರ್ ಗರ್ಲ್ ನಮ್ಮನ್ನು ಬಿಟ್ಟೋಗಿಬಿಟ್ಲು" ಕೃತಿಕಾ ಒಂದು ನಿಟ್ಟುಸಿರುಟ್ಟಳು. ರೂಪ ಅವಳ ಕಡೆಗೆ ತಿರುಗಿನೋಡಿ "ನನಗೂ ಬೆಳಗ್ಗೆ ಎದ್ದಾಗಿನಿಂದ ಅವಳ ಜ್ಞಾಪಕ ಪದೇ ಪದೇ ಬರ್‍ತಾ ಇದೆ " ಎಂದಳು. ಅನಂತರ ಡ್ರಾಯರ್‌ನಲ್ಲಿದ್ದ ಅನು ಪೋಟೊ ತೆಗೆದುಕೊಂ ಡು ಒಂದೆರಡು ಕ್ಷಣ ಅವಳ ಭಾವಚಿತ್ರವನ್ನು ನೋಡಿ ಮುತ್ತಿಟ್ಟಳು. ಕೃತಿಕಾ ಕೂಡ ಅನು ಭಾವಚಿತ್ರವನ್ನು ಕೆನ್ನೆಗೆ ಒಮ್ಮೆ ಒತ್ತಿಕೊಂಡು ರೂಪಳ ಕೈಯಿಗೆ ಕೊಟ್ಟುಬಿಟ್ಟಳು. ಕಾಲೇಜಿಗೆ ಸಮಯವಾಗಿದ್ದರಿಂದ ಪುಸ್ತಕಗಳಿದ್ದ ಬ್ಯಾಗುಗಳನ್ನು ಹೆಗಲಿಗೆ ನೇತಾಕಿಕೊಂಡು ಕೋಣೆಗೆ ಬೀಗ ಹಾಕಿ ಡೈನಿಂಗ್ ಹಾಲ್ ಕಡೆಗೆ ಬಿರುಬಿರನೆ ಹೊರಟರು.

ಒಬ್ಬ ಮನುಷ್ಯನ ಯಾವ ನಿರ್ಧಿಷ್ಟ ಘಳಿಗೆಯಲ್ಲಿ ಬದುಕಿನ ಮಹತ್ವದ ತಿರುವುಗಳು ಕಾಣಿಸಿಕೊಳ್ಳುತ್ತವೊ ಗೊತ್ತಾಗುವುದಿಲ್ಲ ಕೆಲವರು ಅದನ್ನೇ ಹಣೆಬರಹ ಎನ್ನುತ್ತಾರೆ. ಕೃತಿಕಾ ಮತ್ತು ರೂಪ ತಿಂಡಿತಿಂದು, ಆಟೊ ಹಿಡಿದುಕೊಂಡು ಕಾಲೇಜಿನ ಹತ್ತರಬಂದು ಇಳಿದರು. "ಸಮಯ ಆಗೋಗಿದೆ ಇವೊತ್ತು" ಎನ್ನುತ್ತಾ ಜೋರಾಗಿ ನಡೆದು ಕಾಲೇಜಿನ ಗೇಟಿಗೆ ಬರುತ್ತಿದ್ದಂತೆ ಅಮರನಾಥ, ಸವ್ಯ ಮತ್ತು ನಿತಿನ್ ಎದುರಿಗೆ ಅಡ್ಡಬರುತ್ತಿದ್ದರು. ಜೊತೆಯಲ್ಲಿ ಕಮಲಾದಾಸ್ ಕೂಡ ಇದ್ದಳು.

"ಯಾಕೆ ತರಗತಿಗಳು ಇಲ್ಲವ....?" ರೂಪ ಪ್ರಶ್ನಿಸಿದಳು. " ನಮ್ಮ ರಾಜ್ಯದ ಮಾಜಿ ರಾಜ್ಯಪಾಲರು ಸತ್ತೋದರಂತೆ. ಇದೆ ಚಾನ್ಸ್ ಯಾವುದಾದರು ಒಂದು ಪ್ರೊಗ್ರಾಂ ಮಾಡಿಕೊಳ್ಳಬಹುದು" ಸವ್ಯ ಉಪಾಯಕೊಟ್ಟ . ಅಮರನಾಥ ಕೃತಿಕಾ ಕಡೆಗೂ, ಕೃತಿಕಾ ಅಮರನಾಥನ ಕಡೆಗೂ ನೋಡಿಕೊಂಡರು. ಸವ್ಯ ಯಥಾ ಪ್ರಕಾರ ಎಲ್ಲರನ್ನು ಒಂದೇ ನೋಟದಲ್ಲಿ ನೋಡತೊಡಗಿದ. ನಿತಿನ್ "ಏನಮ್ಮ ಇವೊತ್ತು ಎಲ್ಲರೂ ಒಳ್ಳೆ ಜಪಾನ್ ಡಾಲ್ಸ್ ತರಹ ಕಾಣಿಸ್ತಾ ಇದ್ದಾರೆ." ನಿಧಾನವಾಗಿ ಹೇಳಿದ. ಕೃತಿಕಾ, ರೂಪ ಮತ್ತು ಕಮಲಾದಾಸ್ ಮೂವರು ಹತ್ತಿರಕ್ಕೆ ಬಂದು ಒಬ್ಬರನ್ನೊಬ್ಬರು ಕೈ ಕೈ ಹಿಡಿದುಕೊಂಡು ಬೆನ್ನುಗಳನ್ನು ಸವರಿಕೊಂಡರು. ಸೆಂಟ್ ಗಮ್ಮನೆ ಎಲ್ಲರನ್ನು

ಸುತ್ತಿಕೊಂಡಿತು. ಯಾರು ಯಾವ ಸೆಂಟನ್ನು ಹಾಕಿಕೊಂಡಿದ್ದಾರೊ ಗೊತ್ತಾಗಲಿಲ್ಲ.

''ಸ್ವಲ್ಪ ಹಾಗೆ ನಿಂತುಕೊಳ್ಳಿ ನಿಮ್ಮ ಸುತ್ತಲು ಒಂದೆರಡು ಸುತ್ತಾಕ್ತಿನಿ'' ಎಂದ ನಿತಿನ್, ಕೃತಿಕಾ ಮತ್ತು ರೂಪಾ ಸುತ್ತಲು ಗಿರಗಿರನೆ ಸುತ್ತತೊಡಗಿದ. ಕೃತಿಕಾ, ಅಮರನಾಥನ ಕಡೆಗೆ ನೋಡಿದಳು. ''ಲೊ ಯಾವನೊ ಇವನು ಮರಗಳಲ್ಲಿ ಇರಬೇಕಾಗಿತ್ತು'' ಎಂದ ಅಮರನಾಥ. ಸವ್ಯ ಯಾವುದೊ ಆಲೋಚನೆಯಲ್ಲಿ ಬಿದ್ದವನಂತೆ ಯೋಚಿಸತೊಡಗಿದ. ನಿತಿನ್ ಸುತ್ತುವುದನ್ನು ನಿಲ್ಲಿಸಿ ತನ್ನ ಶರ್ಟನ್ನು ಮೂಗಿನ ಹತ್ತಿರಕ್ಕೆ ಇಟ್ಟುಕೊಂಡು ಪರವಾಗಿಲ್ಲ ಸೆಂಟು ಒಂದು ಗಂಟೆಯಾದರು ಉಳಿಯುತ್ತೆ '' ಎಂದ.

ರೂಪ ಎರಡೆಜ್ಜೆ ಮುಂದಕ್ಕೆ ಬಂದು ಅಮರನಾಥನ ಹತ್ತಿರ ನಿಂತುಕೊಂಡಳು. ''ಕೃತಿಕಾಗೆ ಇವೊತ್ತು ಹುಟ್ಟಿದ ಹಬ್ಬ ಯಾರಿಗೂ ತಿಳಿಯದೆ ವಿಷ್‌ಮಾಡು. ಖುಷಿಯಾಗಿಬಿಡ್ತಾಳೆ. ನಾನು ಹೇಳಿದೆ ಅಂತ ಹೇಳಬೇಡ '' ಎಂದಳು ರೂಪ. ಸ್ವಲ್ಪ ಸೆಳೆತಗೊಂಡ ಅಮರನಾಥ ಗುಟುಕರಿಸುತ್ತ ಕೃತಿಕಾ ಕಡೆಗೆ ನೋಡಿದ. ಕೃತಿಕಾ ಕಣ್ಣುಗಳಲ್ಲೆ ಏನೊ ಲೆಕ್ಕಾಚಾರ ಮಾಡಿಕೊಂಡಳು. ಈಗ ಸವ್ಯ ರೂಪ ಒಂದುಕಡೆ, ನಿತಿನ್ ಕಮಲಾದಾಸ್ ಒಂದುಕಡೆ ಜೊತೆ ಜೊತೆಯಾಗಿ ನಿಂತುಕೊಂಡು ಏನೊ ಮಾತನಾಡಿಕೊಳ್ಳುತ್ತಿದ್ದರು. ಕೃತಿಕಾ ನಿಧಾನವಾಗಿ ಒಂದು ಗಿಡದ ಮರೆಗೆ ನಡೆದಳು.

ಅಮರನಾಥ ಮೊದಲಬಾರಿಗೆ ತನ್ನ ತಲೆಯಲ್ಲಿ ಯಾವುದೊ ವಿಷಯವನ್ನು ತುಂಬಿಕೊಂಡು ಅವಳ ಕಡೆಗೆ ನಡೆದು ''ವಿಷ್ ಯು ಹ್ಯಾಪಿ ಬರ್ಥ್‌ಡೆ '' ಎಂದುಬಿಟ್ಟ ! ಕೃತಿಕಾ ಕಣ್ಣುಗಳು ಒಮ್ಮೆಲೆ ಹೂವಿನಂತೆ ಅರಳಿಕೊಂಡವು. ಅವಳು ನಕ್ಕ ರೀತಿಗೆ ಬೇರೆ ಯಾರಾದರು ಆಗಿದ್ದರೆ ಅವಳ ಕೈಯನ್ನು ಆಗಲೆ ಹಿಡಿದುಕೊಂಡು ಪ್ರಲಾಪಿಸಿಬಿಡುತ್ತಿದ್ದರೇನೊ. ಕೃತಿಕಾ ತನ್ನ ಬಲಗೈಯನ್ನು ಮುಂದಕ್ಕೆ ಚಾಚಿ ''ಥ್ಯಾಂಕ್ಯೂ'' ಎಂದಳು. ಮುಂದಕ್ಕೆ ಬಂದ ಕೈಯನ್ನು ನೋಡಿದ ಅಮರನಾಥ ಒಳಗೊಳಗೆ ಗುಟುಕರಿಸುತ್ತ ಪೆಚ್ಚುಮೋರೆ ಹಾಕಿಕೊಂಡು ಕೃತಿಕಾಳ ಕಡೆಗೆ ನೋಡಿದ.

ನನ್ನ ಹುಟ್ಟಿದ ಹಬ್ಬ ಅಂತ ನಿನಗೇಗೆ ಗೊತ್ತು....? ಎಂದು ಕೇಳೋಣ ಎನ್ನುವ ಯೋಚನೆ ಬಂದರು ಸುಮ್ಮನಾದಳು. ಅಮರನಾಥನನ್ನು ಕೃತಿಕಾ, ಕೃತಿಕ ಅಮರನಾಥನನ್ನು ಎಷ್ಟೊ ದಿನಗಳಿಂದ ತರಗತಿಗಳಲ್ಲಿ ನೋಡಿಕೊಳ್ಳುತ್ತಿದ್ದರು. ಎಷ್ಟೊ ದಿನಗಳು ಅವರು ಕಣ್ಣುಗಳಲ್ಲೆ ಜಗಳವಾಡಿರುವುದು ಉಂಟು. ಅದೇ ಅಲ್ಲ ತರಗತಿಯ ಒಳಗೆ, ಹೊರಗೆ ಅವರಿಬ್ಬರು ಎಷ್ಟೊ ಕೆಲಸಗಳನ್ನು ಕಣ್ಣುಗಳ ಸಜ್ಞೆಯಿಂದಲೆ ನಡೆಸಿರುವುದು ಉಂಟು.

ಕೃತಿಕಾಳ ಅಪ್ಪ, ಅಮ್ಮ ಎಂತಹವರೊ....? ಇಷ್ಟಕ್ಕೂ ಇವಳನ್ನು ನೋಡಿದಾಗ ಮಾತ್ರ ಯಾಕೆ ನನಗೆ ಅಂತಹ ಯೋಚನೆಗಳು ಹುಟ್ಟುತ್ತವೆ....? ಬಾಡಿ ಕೆಮಿಸ್ಟ್ರಿ ಅಂದರೆ ಇದೆ ಇರಬೇಕೇನೊ....? ಒಂದು ವೇಳೆ ಅವಳು ನಿನ್ನನ್ನು ಪ್ರೀತಿಸ್ತೀನಿ. ನಿನ್ನನ್ನೆ ಮದುವೆ ಆಗ್ತಿನಿ ಅಂದರೆ ನಾನು ಮದುವೆ ಮಾಡಿಕೊಳ್ಳಬೇಕೆ...? ಅವಳು ಹಣವಂತರ ಕುಟುಂಬದ ಹಿನ್ನೆಲೆಯಿಂದ ಬಂದವಳು. ನಮ್ಮಂತಹ ಬಡವರ ಮನೆಯಲ್ಲಿ ಜೀವನ ನಡೆಸುವಳೆ....?

ನನಗೆ ಕೆಲಸ ಸಿಕ್ಕಿದ ಮೇಲೆ ನಾನಂತು ಮನೆಯಲ್ಲಿ ಇರಲು ಸಾಧ್ಯವಿಲ್ಲ. ಉದ್ಯೋಗ ಎಲ್ಲಿ ದೊರಕುತ್ತದೊ ಏನೋ....? ನಮ್ಮ ಕುಟುಂಬಕ್ಕೆ ಯಾವ ತೊಂದರೆಯೂ ಆಗದೆ ಇದ್ದರೆ ಸಾಕು. ಒಂದು ವೇಳೆ ನಾನು ಕೀಳು ಜಾತಿ ಎಂದು ನನಗೆ ಅವರ ತಂದೆ ತಾಯಿ ಕೃತಿಕಾಳನ್ನು ಕೊಟ್ಟು ಮದುವೆ ಮಾಡದೆ ಹೋದರೆ...? ಇಷ್ಟಕ್ಕೂ ಇದೆಲ್ಲ ನಾನು ಯಾಕಾದರು ಯೋಚಿಸಬೇಕು...? ಅವಳು ನಿಜವಾಗಿಯು ನನ್ನನ್ನು ಪ್ರೀತಿಸುತ್ತಿದ್ದಾಳೊ.... ಇಲ್ಲವೊ.... ? ಬಹಳಷ್ಟು ವಿದ್ಯಾರ್ಥಿಗಳು ಕಾಲೇಜಿನಲ್ಲಿ ಒಂದಾಗಿದ್ದು ಕಾಲೇಜು ಮುಗಿದ ಮೇಲೆ ಎಲ್ಲರಂತೆ ವಿದಾಯ ಹೇಳಿ ಹೊರಟು ಹೋಗುತ್ತಾರೆ. ಮೊದಲು ಅವಳೆ ನನ್ನನ್ನ ಪ್ರೀತಿಸ್ತೀನಿ ಅಂತ ಹೇಳಲಿ. ನಾನು ಮೊದಲು ನಿನ್ನನ್ನ ಪ್ರೀತಿಸ್ತೀನಿ ಅಂತ ಹೇಳಿ ಅವಳು ಇಲ್ಲ ಅಂದುಬಿಟ್ಟರೆ....? ಹೀಗೆ ಏನೇನೊ ಯೋಚನೆಗಳು ಎಷ್ಟೊ ದಿನಗಳಿಂದ ಅವನ ತಲೆಯಲ್ಲಿ ಕುದಿಯುತ್ತಿದ್ದವು. ಅಮರನಾಥ ಈ ರೀತಿ ಯೋಚಿಸುತ್ತಿದ್ದರೆ, ಕೃತಿಕಾ ಬೇರೆ ರೀತಿಯಾಗಿ ಯೋಚಿಸುತ್ತಿದ್ದಳು.

ನನ್ನಂತಹ ಹುಡುಗಿಯರಿಗೆ ಓದಿರುವ ಮತ್ತು ಹಣವಂತ ಹುಡುಗರು ದೊರಕುವುದು ಕಷ್ಟದ ವಿಷಯವೇನೂ ಅಲ್ಲ. ನೂರಾರು ಹುಡುಗರು ದೊರಕುತ್ತಾರೆ. ಬಹುಶಃ ಅವರಿಗೆ ಹೆಚ್ಚಾಗಿ ಹುಡುಗಿ ಮನೆಯ ಐಶ್ವರ್ಯವೆ ಮುಖ್ಯ. ಇನ್ನು ಕೆಲವರು ಐಶ್ವರ್ಯದ ಜೊತೆಗೆ ಹುಡುಗಿ ಲಕ್ಷಣವಾಗಿದ್ದಾಳೆ ಅಂತ ಇಷ್ಟಪಡಬಹುದು. ಇನ್ನೂ ಕೆಲವರು ಐಶ್ವರ್ಯ, ಹುಡುಗಿಯ ಸೌಂದರ್ಯದ ಜೊತೆಗೆ ಹುಡುಗಿ ಸಂಪಾದಿಸಿದರೆ ಅದನ್ನು ಸೇರಿಸಿ ಮದುವೆಯಾಗುವರು. ಅದೆ ಐಶ್ವರ್ಯವನ್ನು ಮತ್ತು ಹುಡುಗಿಯ ಸಂಪಾದನೆಯನ್ನು ತೊರೆದು ಕೇವಲ ಪ್ರೀತಿಗಾಗಿ ಮದುವೆಯಾಗುವ ಹುಡುಗರು ತೀರಾ ಕಡಿಮೆ. ಅದಕ್ಕೆ ಹಣವಂತ ಹುಡುಗಿಯರು ಸಾಮಾನ್ಯವಾಗಿ ಸಾಧಾರಣ ಕುಟುಂಬಗಳ ಹುಡುಗರ ಜೊತೆ ಮದುವೆ ಮಾಡಿಕೊಂಡರೆ ಹುಡುಗಿಯನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಾರೆ. ಹುಡುಗನಿಗೆ ಮೊದಲಿಂದಲೂ ಹಣದ ಆಮಿಷವಿಲ್ಲದಲ್ಲಿ ಹುಡುಗ-ಹುಡುಗಿ ಅನ್ಯೋನ್ಯವಾಗಿ ಇರಬಹುದು. ಕೆಲವು

ಹಣವಂತರು ನಮಗಿಂತ ಬಡವರಾದ ಕುಟುಂಬಗಳ ಹೆಣ್ಣು ಮಕ್ಕಳು ಬೇಕೆಂದು ಮದುವೆ ಮಾಡಿಕೊಳ್ಳುತ್ತಾರೆ.

-ಅಮರನಾಥನನ್ನು ಮದುವೆ ಮಾಡಿಕೊಂಡರೆ ನನ್ನನ್ನು ಚೆನ್ನಾಗಿ ನೋಡಿಕೊಳ್ಳುತ್ತಾನೆ. ಯಾರೊ ಗೊತ್ತಿಲ್ಲದವನ್ನು ಮದುವೆ ಮಾಡಿಕೊಳ್ಳುವುದಕ್ಕಿಂತ ಎಲ್ಲಾ ರೀತಿಯಲ್ಲೂ ಗೊತ್ತಿರುವವನನ್ನು ಮದುವೆ ಮಾಡಿಕೊಳ್ಳುವುದೇ ವಾಸಿಯಲ್ಲವೆ....? ಕೃತಿಕ ಹೀಗೆ ಯೋಚಿಸುತ್ತಿದ್ದಳು.

ಕೃತಿಕಾ ಮತ್ತು ಅಮರನಾಥ ಮೊದಲ ಬಾರಿಗೆ ಗಿಡದ ಮರೆಯಲ್ಲಿ ನಿಂತುಕೊಂಡು ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತ ಪೂರ್ಣವಾಗಿ ನರ್ವಸ್ ಆಗಿಬಿಟ್ಟಿದ್ದರು. ಎಷ್ಟೊ ಹುಡುಗರ ಜೊತೆಗೆ ಲೀಲಾಜಾಲವಾಗಿ ಹರಟೆ ಹೊಡೆಯುವ ಕೃತಿಕಾ ಈ ದಿನ ಅಮರನಾಥನ ಎದುರಿಗೆ ಸಂಕೋಚ, ನಾಚಿಕೆಯಿಂದ ಭೂಮಿಯ ಮಟ್ಟಕ್ಕೆ ಇಳಿದು ಹೋಗಿರುವುದಾದರು ಹೇಗೆ....? ಎನ್ನುವುದು ಅವಳಿಗೆ ಅರ್ಥವಾಗಲಿಲ್ಲ. ಇದು ಕೃತಿಕಾಳ ಸ್ಥಿತಿಯಾದರೆ ಅಮರನಾಥ ಇನ್ನೊಂದು ರೀತಿಯಲ್ಲಿ ಉದುಗಿಹೋಗಿದ್ದ. ಅವನು ಇದುವರೆಗೆ ತನ್ನ ಇಪ್ಪತ್ತೆರಡು ವರ್ಷಗಳ ಜೀವನದಲ್ಲಿ ಯಾವುದೇ ಹುಡುಗಿಯ ಎದುರಿಗೆ ನಿಂತುಕೊಂಡು ಈ ರೀತಿಯಾಗಿ ಮಾತನಾಡಿರಲಿಲ್ಲ.

ನಿತಿನ್ ಮತ್ತು ಕಮಲಾ ಒಂದು ಕಡೆ, ಸವ್ಯ ಮತ್ತು ರೂಪ ಇನ್ನೊಂದು ಕಡೆ ತಮಗೆ ಇಷ್ಟವಾದ ರೀತಿಯಲ್ಲಿ ಮಾತಿಗೆ ತೊಡಗಿದ್ದರು. ನಿತಿನ್ ಆಗಲೆ ಕಮಲಾಳನ್ನು ಸಿನಿಮಾಗೆ ಕರೆದುಕೊಂಡು ಹೋಗಲು ಸೆಟ್ ಮಾಡಿಕೊಂಡು ಬಿಟ್ಟಿದ್ದ.

''ಆದರೆ ಒಂದು ಮಾತು ಸಿನಿಮಾದಲ್ಲಿ ನನ್ನನ್ನು ಮುಟ್ಟಬಾರದು. ನಾನು ನನ್ನ ಬಾಯ್‌ಫ್ರೆಂಡ್‌ಗೆ ನಿಷ್ಠೆಯಾಗಿದ್ದೀನಿ. ಅವನನ್ನೇ ಮದುವೆಯಾಗ್ತೀನಿ. ನಮ್ಮ ಮಧ್ಯ ಮಾತ್ರ ಪಿಜಿಕ್ಸ್ ಕೆಮಿಸ್ಟ್ರಿ ನಡೆಯಬೇಕು'' ಎಂದು ಎಚ್ಚರಿಕೆ ನೀಡಿದ್ದಳು. ''ಫಿಜಿಕ್ಸ್, ಕೆಮಿಸ್ಟ್ರಿ ಈಗಾಗಲೆ ನಡೆದೋಗಿದೆಯೊ....? ಇಲ್ಲ ಇನ್ನು ಮುಂದೆ ನಡೆಯುತ್ತೊ.....?'' ನಿತಿನ್ ಕೇಳಿ ನಕ್ಕ. ತುಟಿಗಳಿಗೆ ಬೆರಳನ್ನು ಅಡ್ಡ ಇಟ್ಟು ''ಅದು ಸಸ್ಪೆನ್ಸ್'' ಎಂದಳು ಕಮಲಾ.

ಇನ್ನು ರೂಪ ಸವ್ಯನನ್ನು ಕರೆದುಕೊಂಡು ಎಲ್ಲಾದರು ಸುತ್ತಿಬರಲು ಆಗಲೆ ಸಜ್ಜುಗೊಳಿಸಿಬಿಟ್ಟಿದ್ದಳು. ಇವಳಿಗೆ ಈ ಉಪಾಯ ಹೊಳೆದಿದ್ದು ಅಮರನಾಥ ಮತ್ತು ಕೃತಿಕಾ ಬಹಳ ಹೊತ್ತಿನಿಂದ ಮೊದಲಬಾರಿಗೆ ಗಿಡದ ಮರೆಯಲ್ಲಿ ನಿಂತು ಮಾತನಾಡುತ್ತಿರುವುದರಿಂದ. ರೂಪ, ಕೃತಿಕಾಳನ್ನು ಎಚ್ಚರಿಸಿ ಸಾಯಂಕಾಲ ಹಾಸ್ಟೆಲಿಗೆ

ಬರುವುದಾಗಿ ಸವ್ಯನ ಜೊತೆಗೆ ಗಾಡಿ ಏರಿ ಹೊರಟುಹೋದಳು. ನಿತಿನ್ ಮತ್ತು ಕಮಲಾ ಕೂಡ ಆಗಲೆ ಕಾಲೇಜು ಗೇಟುದಾಟಿ ಹೊರಟುಹೋಗಿದ್ದರು. ಕೃತಿಕಾ ತಲೆಯಲ್ಲಿ ಒಮ್ಮೆಲೆ ನಕ್ಷತ್ರಗಳು ಮಿಂಚಿದವರು. ಕೃತಿಕಾ ಮತ್ತು ಅಮರನಾಥ ಒಬ್ಬರನ್ನೊಬ್ಬರು ಒಳಗೊಳಗೆ ಪ್ರೀತಿಸುತ್ತಿರುವುದು ರೂಪಾಗೆ ಯಾವಾಗಲೊ ಗೊತ್ತಿರುವ ವಿಷಯವೆ ಆಗಿತ್ತು.

ಈಗ ಕೃತಿಕಾ ಸಾಯಂಕಾಲದವರೆಗೆ ಅಮರನಾಥನ ಜೊತೆ ಸುತ್ತಲು ಮನಸ್ಸನ್ನು ದೃಢಮಾಡಿಕೊಂಡಳು. ಪಿ.ಸಿ. ಸರ್ಕಾರ್ ಜಾದುವಿನಿಂದ ಮೈಮರೆತಿದ್ದ ಅಮರನಾಥ ಕೃತಿಕಾ ಹೇಳಿದಂತೆ ನಡೆದುಕೊಳ್ಳಲು ತಯಾರಾಗಿ ನಿಂತಿದ್ದ.ಆದರೂ ಅವರಿಬ್ಬರ ನಡುವೆ ಅರಿಯಾಲಾರದ ಆತಂಕ ಯಾವುದೊ ಒಂದು ಮೂಲೆಯಲ್ಲಿ ಹೆಪ್ಪುಗಟ್ಟಿಕೊಳ್ಳುತ್ತಿತ್ತು. ಅವರಿಬ್ಬರು ಮೊದಲ ಬಾರಿಗೆ ಒಟ್ಟಾಗಿ ಹೋಗುತ್ತಿರುವುದು ಇದಕ್ಕೆ ಸ್ವಲ್ಪ ಕಾರಣವಾಗಿತ್ತು. ನಾಲ್ಕಾರು ವಿದ್ಯಾರ್ಥಿ, ವಿದ್ಯಾರ್ಥಿನಿಯರು ಒಟ್ಟಾಗಿ ಓಡಾಡಿದರೆ ಹೇಗೊ ನಡೆಯುತ್ತದೆ. ಆದರೆ ಈಗ ಅವರಿಬ್ಬರೆ.

ಈಗ ಇಬ್ಬರು ಗೇಟಿನ ಹತ್ತಿರಕ್ಕೆ ನಡೆದುಬಂದರು. ಕೃತಿಕಾ "ಆಟೊ....ಆಟೊ...." ಎಂದಳು. ಆಟೊ ಹತ್ತಿರಕ್ಕೆ ಬಂದು ನಿಂತುಕೊಂಡಿತು. "ಕೃ ನನ್ನ ಹತ್ತಿರ ಹಣ ಇಲ್ಲ" ಅಮರನಾಥ ಹೇಳಿದ. ಅಮರನಾಥ, ಕೃತಿ ಎಂದು ಕರೆದ ಅವಳಿಗೆ ಬಾರಿ ಖುಷಿಯಾಯಿತು. ಕೇವಲ ಕೆಲವರು ಮಾತ್ರ ಅವಳನ್ನು ಕೃತಿ ಎಂದು ಕರೆಯುತ್ತಿದ್ರು. ಒಳಗೊಳಗೆ ನಕ್ಕ ಕೃತಿಕಾ "ನೋಡು, ನನಗೆ ಇವೊತ್ತು ಹುಟ್ಟಿದ ಹಬ್ಬ ನಾನು ಖುಷಿಯಾಗಿ ಇರಬೇಕಾದರೆ ನಾನು ಹೇಳಿದಂತೆ ಕೇಳಬೇಕು...." ಇನ್ನ ಏನೊ ಹೇಳಲು ಹೋಗಿ ಸುಮ್ಮನಾದಳು. ಅಮರನಾಥ ಅವಳ ಹಿಂದೆ ಆಟೋ ಒಳ ಸೇರಿಕೊಂಡ.

ಕೃತಿಕಾ ಬೆಂಗಳೂರಿನ ಒಂದು ರಸ್ತೆಯ ಹೆಸರು ಹೇಳಿದಳು. ಆಟೋ ಚಾಲ ಮೀಟರ್ ತಿರುಗಿಸಿ ಆಟೋ ಚಲಿಸಿದ. ಅಮರನಾಥ ದಾರಿಯನ್ನು ನೋಡುತ್ತಿದ್ದ ಕೃತಿಕಾ ಅವನ ಮುಖವನ್ನು ನಲವತ್ತೈದು ಡಿಗ್ರಿ ಕೋನದಲ್ಲಿ ವಾರೆ ಕಣ್ಣಿನಿಂ ನೋಡುತ್ತಿದ್ದಳು. ಅಮರನಾಥನಿಗೆ ಅವಳು ನೋಡುತ್ತಿರುವುದು ಗೊತ್ತಾಗಿ ಪಕ್ಕ ತಿರುಗಿನೋಡಿದ. ಕೃತಿಕಾ ನಾನು ನಿನ್ನ ಮುಖವನ್ನು ನೋಡೆ ಇಲ್ಲ ಎನ್ನುವಂ ಕಣ್ಣುಗಳ ನೋಟವನ್ನು ಬೇರೆ ಕಡೆಗೆ ನೆಟ್ಟಳು. ಇಬ್ಬರಿಗೂ ಗೊತ್ತು ತಾವು ಏನ ಮಾಡುತ್ತಿದ್ದೇವೆಂದು. ಆಟೊ ಚಾಲಕ ಒಂದೆರಡು ಸಲ ಬ್ರೇಕ್ ಹಾಕಿದ್ದೆ ಇಬ್ಬರು ಮುಂದಕ್ಕೆ ಬಾಗಿ ಮತ್ತೆ ಸ್ವಸ್ಥಳಕ್ಕೆ ಹಿಂದಿರುಗಿದರು. ಅವಳ ಸೀರೆಯ ಸೆರಗು ಗಾಳಿಯ ಹಾರಾಡುತ್ತ ಅವನನ್ನು ನುಣುಪಾಗಿ ಸೋಕುತ್ತಿತ್ತು.

ಅವಳ ಎಡಗೈ ಬೆರಳುಗಳು ಅವಳ ಮನಸ್ಸಿನ ಓಟವನ್ನು ತುದಿಗಳಿಗೆ ತಂದುಕೊಂಡಂತೆ ಅವನ ಎದುರಿಗೆ ನಾಟ್ಯವಾಡುತ್ತಿವೆ. ತಮ್ಮ ಅಂಗಾಂಗಗಳ ನಡುವೆ ಸ್ಪರ್ಶದ ಅನುಭವ ಹತ್ತಿರವಾಗುತ್ತಿದ್ದಂತೆ ತೋರುತ್ತಿದೆ. ಇಬ್ಬರ ನಡುವೆ ನಿಜವಾದ ಸ್ಪರ್ಶ ಯಾವಾಗ ಏರ್ಪಡುತ್ತದೊ ಕಾದು ನೋಡಬೇಕು. ಮೊದಲು ಯಾರು ಮಾತನಾಡಿಸಬೇಕು....? ಬೆಳಗ್ಗೆಯಿಂದ ಆಗಲೆ ನೂರಾರು ಮಾತುಗಳನ್ನು ಮಾತನಾಡಿರುವ ಅವರು ಮತ್ತೆ ಮೊದಲು ಯಾರು ಮಾತನಾಡುತ್ತಾರೆ ಎಂದು ಕಾಯುತ್ತಿದ್ದಾರೆ.

ಪ್ರೀತಿ ಎಂದರೆ ಹಾಗೆ, ಯಾವಾಗ ಏನು ಮಾಡಬೇಕು....? ಏನು ಮಾತನಾಡಬೇಕು ಎನ್ನುವುದನ್ನು ಮರೆಸಿಬಿಡುತ್ತದೆ. ಎಷ್ಟೋ ಪ್ರೇಮಿಗಳು ಸ್ಪರ್ಶಗೊಳ್ಳದೆ ಪ್ರೀತಿಸಿದ್ದಾರೆ. ಇನ್ನು ಕೆಲವರು ತುಟಿಬಿಚ್ಚಿ ಮಾತನಾಡದೆ ಸಮಾಧಿ ಯಾಗಿ ಹೋಗಿದ್ದಾರೆ. ''ಲವರ್ಸ್ ನೆವರ್ ಡೈ ದೇ ವಿಲ್ ಆಲ್‌ವೇಸ್ ಬರೀಡ್ ಆಲೀವ್'' ಎನ್ನುವುದು ಒಂದು ಹಳೆ ಮಾತು. ಆದರೆ ಅದೆಲ್ಲ ಹಳೆಯದಾದ ವಿಷಯಗಳು. ಇದು ಆಧುನಿಕ ಯುಗ. ಈಗಿನ ಪ್ರೇಮಿಗಳ ವಿಷಯವೇ ಬೇರೆ. ಆಟೋ ಇಳಿಯುವವರೆಗೂ ಅವರು ಏನೂ ಮಾತನಾಡಲಿಲ್ಲ. ಆಟೋ ಇಳಿದ ಕೃತಿಕಾ ಆಟೋ ಚಾಲಕನಿಗೆ ಹಣ ಕೊಟ್ಟು , ''ಮೊದಲು ನಿನಗೊಂದು ಸ್ವೀಟ್ ಕೊಡಿಸ್ತೀನಿ. ಆಮೇಲೆ ಎಲ್ಲಿಗಾದರು ಹೋಗೋಣ'' ಎಂದ ಕೃತಿಕಾ ಒಂದು ಹೋಟಲಿನ ಒಳಗೆ ನಡೆದಳು. ''ನಾನು ಸ್ವೀಟ್ ಜಾಸ್ತಿ ತಿನ್ನೋದಿಲ್ಲ'' ಎನ್ನುವ ಮಾತುಗಳು ಅವನ ತುಟಿಗಳವರೆಗೂ ಬಂದು ಹಾಗೆ ನುಂಗಿಕೊಂಡು ಅವಳನ್ನು ಹಿಂಬಾಲಿಸಿದ. ಅದೊಂದು ಸುಸಜ್ಜಿತವಾದ ಹೋಟೆಲ್. ಬೆಳಗ್ಗೆಯಾದ್ದರಿಂದ ಅಲ್ಲೊಬ್ಬರು ಇಲ್ಲೊಬ್ಬರು ಮಾತ್ರ ಕುಳಿತಿದ್ದರು.

ಇಬ್ಬರೂ ಎದುರು ಬದುರಿಗೆ ಕುರ್ಚಿಗಳಲ್ಲಿ ಕುಳಿತುಕೊಂಡರು. ಬೆರರ್ ಹತ್ತಿರಕ್ಕೆ ಬಂದು ಮೆನು ಕಾರ್ಡ್ ಕೊಟ್ಟ . ಸ್ವಲ್ಪಹೊತ್ತು ಬಿಟ್ಟು ಬಾ'' ಕೃತಿಕಾ ಹೇಳಿದಳು. ಬೆರರ್ ಹೊರಟುಹೋದ. ''ಏನು ಸ್ವೀಟ್ಸ್ ತೆಗೆದುಕೊಳ್ತೀಯಾ ....?'' ಕೃತಿಕಾ ಪ್ರಶ್ನೆ. ಮತ್ತೆ ಅದೇ ಮಾತುಗಳು ಪ್ರಾರಂಭವಾದವು. ''ಯುವರ್ ಚಾಯ್ಸ್'' ಅಮರನಾಥ ಹೇಳಿದ. ''ದಡ್ಸ್ ಗುಡ್‌ಬಾಯ್'' ಕೃತಿಕಾ ಏನೊ ಗೆದ್ದವಳಂತೆ ಹೇಳಿದಳು. ಬೆರರ್ ಹತ್ತಿರಕ್ಕೆ ಬಂದಿದ್ದೆ ಎರಡು ''ಶ್ರಿಕಂಠ್, ಎರಡುಕೋಕ್...ಕೋಕ್ ಬೇಡ, ಎರಡು ಐಸ್‌ಕ್ರೀಮ್ಸ್ ವಿತ್ ಫ್ರೂಟ್ಸ್ '' ಎಂದಳು. ಬೆರರ್ ಹೊರಟುಹೋದ. ಇಬ್ಬರು ಒಬ್ಬರನ್ನೊಬ್ಬರು ನೋಡಿಕೊಂಡರು.

"ನಿನಗೆ ಹೆಸರಿಟ್ಟವರು ಯಾರು....?" ಅಮರನಾಥ ಪ್ರಶ್ನಿಸಿದ. "ಯ
ಚೆನ್ನಾಗಿಲ್ಲವಾ....? ಕೃತಿಕಾ ಪ್ರಶ್ನಿಸಿದಳು. "ಚೆನ್ನಾಗಿದೆ ಅದಕ್ಕೆ ಕೇಳಿದೆ. ಕೃತಿಕಾಗಿಂತ
ಅಂತಿದ್ದರೆ ಇನ್ನು ಚೆನ್ನಾಗಿತ್ತು" ಅಮರನಾಥ ಹೇಳುತ್ತಿದ್ದಂತೆ "ನೀನು ಕೃತಿ ಅಂತಾನೆ
ನಿನಗೆ ಇಷ್ಟವಾದರೆ ಕೋರ್ಟ್‌ಗೋಗಿ ಹೆಸರು ಬದಲಾಯಿಸಿಕೊಂಡು ಬರ್ತಿ
ಕೃತಿಕಾ ಮಾತಿಗೆ ಅಮರನಾಥನ ತುಟಿಗಳು ಬಿರಿದವು.

ಇನ್ನು ಸ್ವಲ್ಪ ಜೋರಾಗಿ ನಕ್ಕರೆ ನಿನ್ನ ಗಂಟು ಏನು ಹೋಗುತ್ತೆ..
ಕೃತಿಕಾ ಮನಸ್ಸಿನಲ್ಲಿ ಎದ್ದ ಮಾತುಗಳು ಅಮರನಾಥನಿಗೆ ತಲುಪಲಿಲ್ಲ . "ನ
ಯಾರು ಹೆಸರಿಟ್ಟದ್ದು....?"ಕೃತಿಕಾ ಪ್ರಶ್ನೆ. "ನಮ್ಮ ಸೋದರ ಮಾವ" "ಚೆನ್ನಾಗಿ
ಕೃತಿಕಾ ಹೇಳುತ್ತಿದ್ದಂತೆ ಬೇರರ್ ಸ್ವೀಟ್ಸ್ ತಂದಿಟ್ಟು ಹೊರಟುಹೋದ. ಈಗ ಅ
ನಡುವಿನ ನಾಚಿಕೆ, ಸಂಕೋಚ ಉದ್ವೇಗ ಎಲ್ಲವೂ ಸಡಿಲಗೊಳ್ಳುತ್ತಿತ್ತು. ಒಬ್ಬರನ್ನೊ
ಮೆಚ್ಚಿಕೊಂಡರೆ ಮಾತನಾಡಿದ್ದೆಲ್ಲ ಮಾತುಗಳೆ. ಆ ವಯಸ್ಸೇ ಹಾಗೆ. ಏನೇ
ಕನಸುಗಳು. ಸ್ವೀಟ್ಸ್ ಮತ್ತು ಐಸ್‌ಕ್ರೀಮ್ ಚಪ್ಪರಿಸಿ ಅಲ್ಲಿಂದ ಹೊರಕ್ಕೆ ನಡೆದರು.

ರಸ್ತೆಯಲ್ಲಿ ಉದ್ದಕ್ಕೂ ನಡೆದಾಡುತ್ತಿರುವ ಜನಗಳ ನಡುವೆ ಅಮರನಾಥ ಮ
ಕೃತಿಕಾ ಬೆರತುಹೋದರು. ಜನಜಂಗುಳಿಯ ರಸ್ತೆಯನ್ನು ದಾಟಿ ಜನಸಂದಣಿ ಕ
ಇದ್ದ ಒಂದು ಪಾರ್ಕಿನ ಹತ್ತಿರಕ್ಕೆ ಬರುತ್ತಿದ್ದಂತೆ ರಸ್ತೆಯ ಒಂದು ಮೂಲೆಯಲ್ಲಿ
ಶಾಸ್ತ್ರ ಹೇಳುವವನು ಒಂದು ಗಿಳಿ ಪೆಟ್ಟಿಗೆಯ ಮುಂದೆ ಬಟ್ಟೆ
ಕುಳಿತುಕೊಂಡಿದ್ದಾನೆ. ಅವನು ಆ ಶಾಸ್ತ್ರಹೇಳುವುದಕ್ಕಾಗಿ ಒಂದು ವಿಶೇಷ ಉಡು
ಧರಿಸಿ ಗಿರಾಕಿಗಳಿಗಾಗಿ ಕಾಯುತ್ತಿದ್ದಾನೆ. ಕೃತಿಕಾ ಆ ಕಡೆಗೆ ನೋಡಿದಳು. ಹಣವ
ನಮ್ಮ ಕಡೆಗೆ ತಿರುಗಿಯೂ ನೋಡುವುದಿಲ್ಲ ಎಂದು ಗೊತ್ತಿದ್ದರು ಗಿಳಿಶಾಸ್ತ್ರ
ಒಂದು ಕಲ್ಲು ಹಾಕಿ ನೋಡಿಬಿಡೋಣ ಎಂದು ಅಮರನಾಥ ಮತ್ತು ಕೃತಿಕಾ
"ಬನ್ನಿ ಸ್ವಾಮಿ....ಬನ್ನಿ ತಾಯಿ..... ನಿಮ್ಮ ಭೂತ... ಭವಿಷ್ಯ.... ಕಷ್ಟ... ಸು
ಆರೋಗ್ಯ.... ಐಶ್ವರ್ಯ.... ಎಲ್ಲವನ್ನು ಗಿಳಿರಾಮ ಹೇಳುತ್ತಾನೆ...."
ಆಹ್ವಾನಿಸಿದ. ಕೃತಿಕಾ ಒಂದು ಕ್ಷಣ ನಿಂತುಕೊಂಡು ತಮಾಷೆಗಾಗಿ ಅಮರನ
ಮುಖವನ್ನು ನೋಡಿ ಗಿಳಿ ಇದ್ದ ಪೆಟ್ಟಿಗೆ ಕಡೆಗೆ ನೋಡಿದಳು. ಅಮರನಾಥ ಎ
ಇಟ್ಟು ಪಕ್ಕಕ್ಕೆ ನಿಂತುಕೊಂಡ.

ಗಿಳಿಶಾಸ್ತ್ರದವನು ಇನ್ನಷ್ಟು ಹುರುಪಿನಿಂದ ಅವರನ್ನು ಆಹ್ವಾನಿಸಿದ. "
ಹತ್ತಿರಕ್ಕೆ ಹೋದರೆ ಏನು ಹೇಳುತ್ತಾನೊ ಏನೊ ಎಂದುಕೊಂಡ ಅಮರನಾಥ.
ಕಡೆಗೆ ನೋಡಿದ. ಕೃತಿಕಾ ಗಿಳಿ ಪೆಟ್ಟಿಗೆಯ ಮುಂದೆ ನಿಂತುಕೊಂಡಳು. ಗಿಳಿಶಾಸ್ತ್ರ

ಗಿಳಿಯಿದ್ದ ಪೆಟ್ಟಿಗೆಯ ಬಾಗಿಲು ತೆಗೆದು ಗಿಳಿಯನ್ನು ಹೊರಕ್ಕೆ ಆಹ್ವಾನಿಸಿದ. ಗಿಳಿ ಹೊರಗೆ ಬಂದು ಮಡಿಚಿಟ್ಟಿದ್ದ ಪತ್ರಗಳಲ್ಲಿ ಒಂದನ್ನು ತನ್ನ ಕೊಕ್ಕಿನಲ್ಲಿ ಹೆಕ್ಕಿ ತನ್ನ ಒಡೆಯನ ಕೈಯಿಗೆ ಕೊಟ್ಟು ಗೂಡಿನ ಒಳಕ್ಕೆ ಹೋಗಿಬಿಟ್ಟಿತು. ಗಿಳಿಶಾಸ್ತ್ರದವನು ಪತ್ರವನ್ನು ಬಿಚ್ಚಿ ಪತ್ರದಲ್ಲಿರದ್ದುದನ್ನು ರಸವತ್ತಾಗಿ ಓದಿ ಹೇಳಿ, ಅದರ ಜೊತೆಗೆ ತನ್ನದೆ ಕಲಿತ ಮಾತುಗಳನ್ನು ವ್ಯಯಿಸಿದ. ಅಮರನಾಥ ಮತ್ತು ಕೃತಿಕ ಒಬ್ಬರನ್ನೊಬ್ಬರು ನೋಡಿಕೊಂಡು ಮುಗುಳುನಕ್ಕರು ಅವರ ನಗುವಿನಲ್ಲಿ ಅಡಗಿದ್ದ ಕುತೂಹಲವನ್ನು ಅರಿತ ಶಾಸ್ತ್ರದವನು ನಿಮ್ಮ ಮದುವೆ ಒಂದೇ ವರ್ಷದಲ್ಲಿ ನಡೆಯುತ್ತದೆ. ಆದರೆ ನೀವು ಸೀತೆ ರಾಮನಂತೆ ವನವಾಸ ಮಾಡಲಿದ್ದೀರಿ ಎಂದುಬಿಟ್ಟ, ಇಬ್ಬರು ಸರಕಾರಿ ಕೆಲಸಕ್ಕೆ ಸೇರಿಕೊಂಡರೆ ಜೀವನದಲ್ಲಿ ಎಂದಾದರು ವನವಾಸವಿದ್ದೆ ಇದೆ ಎನ್ನುವುದು ಅವನ ಲೆಕ್ಕಾಚಾರ. ಬೆಚ್ಚಿಬಿದ್ದ ಕೃತಿಕಾ ಎರಡು ರೂಪಾಯಿಗಳನ್ನು ಅಲ್ಲಾಕಿ ಅಮರನಾಥನನ್ನು ಕರೆದುಕೊಂಡು ಹೊರಟುಬಿಟ್ಟಳು. ಅಮರನಾಥ ಗಂಭೀರವಾಗಿ ಏನೊ ಯೋಚಿಸುತ್ತಿದ್ದ.

ಒಂದು ಒಳ್ಳೆ ಹೋಟಲಿನಲ್ಲಿ ಮಧ್ಯಾಹ್ನ ಊಟ ಮುಗಿಸಿದ ಕೃತಿಕಾ ಮತ್ತು ಅಮರನಾಥ ಕಾಲು ಹೋದ ಕಡೆಯಲ್ಲ ನಡೆದಾಡಿ, ಮನಸ್ಸು ಬಂದ ಕಡೆಯಲ್ಲ ಅಲೆದಾಡಿ ಸೂರ್ಯನು ಪಶ್ಚಿಮದಲ್ಲಿ ಇಳಿಯುವ ಹೊತ್ತಿಗೆ ಒಂದು ಹೂ ತೋಟದಲ್ಲಿ ಗಿಡದ ನೆರಳಿನಲ್ಲಿ ಕುಳಿತುಕೊಂಡಿದ್ದರು. ಇಬ್ಬರು ಒಬ್ಬರ ಬಗ್ಗೆ ಇನ್ನೊಬ್ಬರು ಸಾಕಷ್ಟು ತಿಳಿದುಕೊಳ್ಳುವಷ್ಟು ಮಾತನಾಡಿದ್ದರು. ಮಾತನಾಡಿ ಮಾತನಾಡಿ ಸುಸ್ತಾಗಿ ಹೋಗಿದ್ದ ಅವರಿಗೆ ಇನ್ನು ಮುಖ್ಯವಾಗಿ ಹೇಳಬೇಕಾಗಿರುವುದು, ತಿಳಿದುಕೊಳ್ಳಬೇಕಾಗಿರುವುದು ಎಷ್ಟೊ ಉಳಿದುಹೋಗಿರುವಂತೆ ತೋರಿತು.

ಯಾರು ಕೇಳುವುದು....? ಏನು ಕೇಳುವುದು....?ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದೀವಿ ಎನ್ನುವುದಕ್ಕೆ ಇಷ್ಟು ಸಾಕಲ್ಲವೆ....? ಈಗ ಇಬ್ಬರು ಆಲೋಚಿಸುತ್ತ ಮಾತುಗಳಿಗೆ ಆಯಾಸಬಂದಂತೆ ಮಧ್ಯ ಮಧ್ಯ ಒಂದೊಂದು ಮಾತು ಮಾತನಾಡುತ್ತಿದ್ದರು. ಒಬ್ಬರನ್ನೊಬ್ಬರು ಮೊದಲು ನೋಡಿದಾಗ ಬಾಹ್ಯ ಸೌಂದರ್ಯಕ್ಕೆ ಮಾರುಹೋದರು, ಅನಂತರ ಅಂತರಾಳದ ಸೌಂದರ್ಯ ಮಾತ್ರ ಅವರನ್ನು ಎಂದೆಂದಿಗೂ ಒಂದಾಗಿ ಇಡಬಲ್ಲದು. ಪ್ರೀತಿಗೆ ಅಂತರಿಕ ಕಣ್ಣುಗಳು ಇರುತ್ತವೆ.

ಒಟ್ಟಿನಲ್ಲಿ ಅವರಿಬ್ಬರು ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳಲು ಸಮಯ ತೆಗೆದುಕೊಳ್ಳುತ್ತಿರುವಂತೆ ತೋರುತ್ತಿತ್ತು, ಆದರೆ ಸೂರ್ಯ ಅವರಿಗಾಗಿ ಕಾಯಬೇಕಲ್ಲ.

ತನ್ನ ಪಾಡಿಗೆ ತಾನು ಅಂದಿನ ವ್ಯಾಪಾರ ಮುಗಿಸಿಕೊಂಡು ಪಶ್ಚಿಮದ ಕ ಇಳಿಯುತ್ತಿದ್ದಾನೆ. ಕೃತಿಕಾ ''ಅಮರ್ ಸಮಯ ಆಯಿತು ನಾವು ಇ ಹೊರಡಬೇಕು'' ಎಂದು ಒಂದೆರಡು ಸಲ ಎಚ್ಚರಿಸಿ ಅಮರ್ ಏನಾದ ಹೇಳುತ್ತಾನೆಂದು ಕುಳಿತೆ ಇದ್ದಳು. ಅಮರನಾಥ, ಕೃತಿಕಾ ಏನಾದರು ಹೇಳಲಿ ಎ ಕಾಯುತ್ತಾ ಕುಳಿತಿದ್ದ. ಇಬ್ಬರೂ ತಮ್ಮ ಮನಸ್ಸಿನಲ್ಲಿ ಆಮೆ ಮತ್ತು ಮೊಲದ ಆಡುತ್ತಿದ್ದರು. ಮಧ್ಯ ಮಧ್ಯ ಒಬ್ಬರ ಮುಖವನ್ನು ಒಬ್ಬರು ನೋಡಿಕೊಳ್ಳುತ್ತಿದ್ದ ಅವರು ಮುಖಗಳ ಮೇಲೆ ಎಲ್ಲವೂ ಕಾಣಿಸುತ್ತಿತ್ತು.

ಇವನು ಇನ್ನು ಯಾವ ಕಾಲದಲ್ಲಿದ್ದಾನೆ....? ಇಪ್ಪತ್ತು ಮೂವತ್ತು ವರ್ಷ ಹಿಂದೆ ಒಬ್ಬ ಹುಡುಗ ತಾನು ಪ್ರೀತಿಸುವ ಹುಡುಗಿಯ ಮುಂದೆ ''ಐ ಲವ್ ಯ ಎಂದು ಹೇಳಲು ಆರು ತಿಂಗಳೊ... ಒಂದು ವರ್ಷವೊ ತೆಗೆದುಕೊಳ್ಳುತ್ತಿದ್ದನ ಆದರೆ ಈ ಕಾಲದಲ್ಲಿ ನೋಡಿದ ತಕ್ಷಣವೆ ಐ ವಾಂಟ್ ಎ ಕ್ರಷ್...., ಐ ವಾ ಕೆಮಿಸ್ಟ್ರಿ ವಿತ್ ಯು... ಅನ್ನುತ್ತಾರೆ. ಆದರೆ ಇವನು ಬಾರಿ ಮದ್ದು ಎಂದುಕೊಂಡಳು.

ಕೃತಿಕಾ ಮನಸ್ಸಿನಲ್ಲೆ ಇದ್ಯಾಕೊ ಆಗುವ ಕೆಲಸವಲ್ಲ ಎಂದುಕೊಂಡು ' ಅಮರ್ ನಾನಿನ್ನು ಬರ್‍ತೀನಿ'' ಎಂದವಳೆ ಎದ್ದುನಿಂತುಕೊಂಡಳು. ಆಗಲೆ ಬಿಸುವಳಿ ಅಮರನಾಥನು ಎದ್ದುನಿಂತು ಅವಳನ್ನೊಮ್ಮೆ ಪೇಲವ ಮುಖವಾಕಿಕೊ ನೋಡಿದ. ದಿನವೆಲ್ಲ ಒಟ್ಟಾಗಿ ಸುತ್ತಾಡಿದರು ಒಬ್ಬರನ್ನೊಬ್ಬರು ಸೋಕಿಸಿಕೊ ಅವರು ಹಾಗೆಯೆ ಬೇರ್ಪಡುವ ಸಮಯ ಬಂದೇಬಿಟ್ಟಿತು. ಇಬ್ಬರು ನಿಂತಲ್ಲೆ ಮತ್ತೆ ''ನಾನು ಬರ್‍ತೀನಿ... ಓಕೆ ಸಿಯು'' ಎಂದು ಹೇಳಿಕೊಂಡು ಹೆಜ್ಜೆ ಎತ್ತಿ ಇಡಲಿಲ್ಲ.

ಕೃತಿಕಾ, ಅಮರನಾಥನ ಕಣ್ಣುಗಳ ಒಳಕ್ಕೆ ಒಮ್ಮೆ ಬೆಂಕಿ ಹೊತ್ತಿಸಿಕೊ ನೋಡಿದಳು. ಅಮರ್ ಅವಳ ಬೆಂಕಿಯ ನೋಟವನ್ನು ಎದುರಿಸಲಾರದೆ ನೋಡಿದ, ಅಷ್ಟೆ ಕೃತಿಕಾ ಮುಖವನ್ನು ಚಾಚಿ ಅವನ ಕೆನ್ನೆಗೆ ತನ್ನ ತುಟಿಗ ಒತ್ತಿಬಿಟ್ಟಳು. ಅಮರನಾಥನ ದೇಹದ ಒಳಕ್ಕೆ ಚಿಲ್ಲನೆ ಒಂದು ವಿದ್ಯುತ್ ಹಾದುಹೋಯಿತು. ಕೃತಿಕಾ ಗಿಡದ ಮರೆಯಿಂದ ನಡೆದು ಹೊರಟಳು. ಅಮರ ತನ್ನ ಹೃದಯ ಚಲಿಸುತ್ತಿದೆ ತಾನೆ ಎಂದು ದೃಢಪಡಿಸಿಕೊಂಡ ಮೇಲೆ ಅವಳ ಹಿಂ ನಡೆದುಬಂದ.

ಅವನ ದಾರಿಯಲ್ಲಿ ಗುಲಾಬಿಗಿಡವೊಂದು ಹೂವುಗಳನ್ನು ಬಿಟ್ಟು

ಸೂರ್ಯನ ಬೆಳಕಿನಲ್ಲಿ ನಳನಳಿಸುತ್ತಿತ್ತು. ಅವನಿಗೆ ಅದನ್ನು ನೋಡಿ ಅಖಂಡ ಜ್ಞಾನೋಧಯವಾಯಿತು. ಹಸುವಿನಂತೆ ಗಿಡದ ಕೊಂಬೆಗಳಿಗೆ ಕೈಹಾಕಿ ಹೂವೊಂದನ್ನು ಕಿತ್ತುಕೊಂಡು ಕೃತಿಕಾಳ ಹಿಂದೆ ಓಡಿಬಂದ. ಶಬ್ಧ ಕೇಳಿದ ಕೃತಿಕಾ ಯಾವುದೊ ಹಸು ಎಂದು ಹಿಂದಕ್ಕೆ ತಿರುಗಿ ನೋಡಿದಳು. ಅಮರನಾಥ ಹೂವನ್ನು ಅವಳ ಕಡೆಗೆ ಚಾಚಿದ. ಕೃತಿಕಾ ಮೊದಲ ಬಾರಿಗೆ ಅವನ ಆ ಕೆಲಸದಿಂದ ಪುಳಕಗೊಂಡು ಮೃದುವಾಗಿ 'ದಡ್ಡ' ಎನ್ನುತ್ತ ಹಿಂದಕ್ಕೆ ತಿರುಗಿಕೊಂಡಳು. ಅಮರನಾಥ ಅವಳ ಕಪ್ಪು ಕೂದಲಿನಲ್ಲಿ ಆ ಹೂವನ್ನು ಚುಚ್ಚಿದ. ಅದು ಕೃತಿಕಾ ಹೃದಯದಲ್ಲಿ ಹೂವಿನ ಬಿಲ್ಲು ಚುಚ್ಚಿಕೊಂಡತ್ತಿದ್ದರೆ, ಅಮರನಾಥನಿಗೆ ಅಂಬಿನಿಂದ ಬಿಲ್ಲು ಬಿಟ್ಟಂತಿತ್ತು. ಅಮರನಾಥ ಅನಂತರ ಮನೆಗೆ ಹೇಗೆ ತಲುಪಿದನೊ ಅವನಿಗೆ ಗೊತ್ತಾಗಲಿಲ್ಲ.

* * *

ಹರ್ಷ ಈಗೀಗ ಬೆಂಗಳೂರಿನ ಹಲವು ರಾಜಕಾರಣಿಗಳು, ರೌಡಿಗ್ಯಾಂಗ್‌ಗಳು, ಮರಿ ಪುಡಾರಿಗಳು, ಹಡ್ಡೆಗಳಲ್ಲಿ ವಸೂಲಿ ಮಾಡುವವರು, ಏಜಂಟರು, ಪೊಲೀಸರು, ಬಾಡಿಗೆ ರೌಡಿಗಳು ಪ್ರತಿ ಪತ್ರಿಕೆಗಳ ವರದಿಗಾರರು ಹೀಗೆ ಎಲ್ಲರ ಬಗ್ಗೆಯೂ ಆದಷ್ಟು ತಿಳಿದುಕೊಂಡಿದ್ದಾನೆ. ಹಾಗೆ ಬೆಂಗಳೂರಿಗೆ ಬರಿ ಕೈಗಳಲ್ಲಿ ಬಂದು ಈಗ ಲಕ್ಷ ಕೋಟಿ ಕೋಟಿ ರೂಪಾಯಿಗಳಿಗೆ ಬೆಲೆ ಬಾಳುತ್ತಿರುವವರ ಕಥೆಗಳನ್ನು ತಿಳಿದುಕೊಂಡಿದ್ದಾನೆ. ಬೆಂಗಳೂರಿನಲ್ಲಿ ಅಚ್ಚಾಗುವ ಹಲವು ಪತ್ರಿಕೆಗಳನ್ನು ಬಿಡದೆ ಓದುತ್ತಾನೆ.

ಬೆಂಗಳೂರಿನಲ್ಲಿ ಪ್ರಸ್ತುತ ಚಲಾವಣೆಯಲ್ಲಿರುವ ರಾಜಕಾರಣಿಗಳು, ಅಧಿಕಾರಿಗಳು, ವ್ಯಾಪಾರಿಗಳು, ಹಣವಂತರು ಬೆಳೆದುಬಂದ ಕಥೆಗಳನ್ನು ಕೇಳಿ ದಂಗಾಗಿ ಹೋಗಿದ್ದಾನೆ. ಈ ಜನ ಹಣಕ್ಕಾಗಿ ಈ ರೀತಿಯ ದಾರಿಗಳನ್ನೆಲ್ಲ ತುಳಿದುಬಂದರೆ....? ಅದೇಕೆ ಈ ಮನುಷ್ಯ ಪ್ರಾಣಿಗೆ ಇಷ್ಟೊಂದು ಆಸೆ....? ಹೊಟ್ಟೆ ತುಂಬಾ ಊಟ, ಒಳ್ಳೆ ಬಟ್ಟೆ , ವಾಸಿಸಲು ಒಂದು ಒಳ್ಳೆ ಮನೆ ಇದ್ದರೆ ಸಾಕಲ್ಲವೆ....? ಈ ದಿನ ಬದುಕಿರುವವರು ಮುಂದಿನ ಕ್ಷಣದಲ್ಲಿ ಏನಾಗುತ್ತಾರೊ.... ಎನ್ನುವುದೇ ಗೊತ್ತಿಲ್ಲದಿರುವಾಗ ಸಾವಿರಾರು ಜನರ ಹೊಟ್ಟೆ ಹೊಡೆದು ಇಷ್ಟೊಂದು ಹಣವನ್ನು ಗುಡ್ಡೆ ಹಾಕಬೇಕೆ....? ತುಃ ಇದು ನಾಗರೀಕತೆಯೆ....? ಮನುಷ್ಯರೆಂದು ಕರೆಯಲು ಇವರು ಯೋಗ್ಯರೆ....?

ಈ ಭೂಮಿಗೊಂದು ಉಲ್ಕಾಪಾತ ಬಡಿದು ಯಾಕಾದರು ಚೂರು ಚೂರಾಗಿ ಹೋಗಬಾರದು....? ಈ ಮನುಷ್ಯನೆಂಬ ಪ್ರಾಣಿ ಈ ಭೂಮಿಯಿಂದ ನಿರ್ನಾಣವಾಗುವವರೆಗೂ ಹೀಗೆ ನಡೆಯುತ್ತದೆ. ಈ ದೇಶದಲ್ಲಿ ಬುದ್ಧ , ಬಸವ,

ಗಾಂಧಿಯಂತಹ ಎಷ್ಟೋ ಮಹನೀಯರು ಹುಟ್ಟಿದರು. ಆದರೆ ಈ ಜ
ಅತ್ಯಾಚಾರಗಳನ್ನು ತಡೆಯಲು ಯಾರಿಂದಲೂ ಆಗಲಿಲ್ಲ. ನಾನು ಮಾ
ಯಾಕಾದರು ತಲೆ ಕೆಡಿಸಿಕೊಳ್ಳಬೇಕು....? ಹೀಗೆ ಯೋಚಿಸುತ್ತ ಯೋಚಿಸ
ಹರ್ಷ ತನ್ನದೇ ಆದ ಒಂದು ಯೋಜನೆಯನ್ನು ರೂಪಿಸಿಕೊಳ್ಳುತ್ತಿದ್ದ. ಅದಕ
ಅವನು ಹಗಲು ರಾತ್ರಿಯೆನ್ನದೆ ಆ ಬಡಾವಣೆಯಲ್ಲಿ ದುಡಿಯುತ್ತಿದ್ದ.

ಹರ್ಷನ ಹೆಸರು ಆ ಬಡಾವಣೆಯಲ್ಲದೆ ಸುತ್ತಮುತ್ತಲಿನ ಬಡಾವನೆಗಳಿ
ಹರಡಿಕೊಳ್ಳುತ್ತಿತ್ತು. ಯಾವುದೇ ಒಳ್ಳೆಯ ಮತ್ತು ಕೆಟ್ಟ ಕೆಲಸಗಳಿಗೆ ಆ ಬಡಾವಣೆ
ಜನ ಹರ್ಷನನ್ನು ಆಹ್ವಾನಿಸುತ್ತಿದ್ದರು. ಯಾರಿಗೆ ಏನೆ ಆದರೂ, ಹಗಲು ರಾತ್ರಿಯೆ
ಅವರ ಸಹಾಯಕ್ಕೆ ಅವನು ಹೋಗಿ ಅಡ್ಡ ನಿಲ್ಲುತ್ತಿದ್ದ. ಆ ಬಡಾವಣೆಯ
ನಡೆಯುತ್ತಿದ್ದ ರೌಡಿಗಳ ದಾಂದಲೆ ಪೂರ್ಣವಾಗಿ ನಿಂತುಹೋಗಿತ್ತು. ಕುಡಿಯುವವ
ಅವನಿಗೆ ಹೆದುರುತ್ತಿದ್ದರು. ಅವನಿಗೆ ತನ್ನದೇ ಆದ ಒಂದು ಹುಡುಗರ ಗು
ಸಹಾಯಕ್ಕೆ ಟೊಂಕಕಟ್ಟಿ ನಿಂತಿತ್ತು.

ಇದು ಹರ್ಷನ ಒಂದು ಮುಖವಾದರೆ, ರೌಡಿಗಳು, ರಾಜಕಾರಣಿಗಳು ಮ
ಅಧಿಕಾರಿಗಳ ಜೊತೆಗೆ ಎಷ್ಟು ಬೇಕೊ ಅಷ್ಟು ಸಖ್ಯವನ್ನು ಬೆಳೆಸಿಕೊಂಡಿದ್ದ ಹ
ಯಾವ ಕೆಲಸಬೇಕಾದರು ಮಾಡಿಸಿಕೊಳ್ಳುತ್ತಿದ್ದ . ಮನೆ ನಡೆಯಲು ಎಷ್ಟು
ಬೇಕೊ ಅಷ್ಟು ಹಣವನ್ನು ತನ್ನ ತಾಯಿಯ ಕೈಗೆ ಕೊಟ್ಟು ಉಳಿದಿದ್ದನ್ನು ಬಡವ
ತೊಂದರೆಯಲ್ಲಿ ಇರುವವರಿಗೆ ಕೊಟ್ಟುಬಿಡುತ್ತಿದ್ದ. ಅವನಿಗೆ ಹಣ ಎಲ್ಲಿಂದ ಬರು
ಎಲ್ಲಿಗೆ ಹೋಗುತ್ತಿತ್ತು ಎನ್ನುವುದೇ ಗೊತ್ತಾಗುತ್ತಿರಲಿಲ್ಲ.

ಹರ್ಷನ ಹತ್ತಿರಕ್ಕೆ ಖಾಲಿ ನಿವೇಶನ, ಮನೆ ಮಾರುವವರು, ಕೊಳ್ಳುವವ
ಮನೆ ಖಾಲಿ ಮಾಡಿಸಿಕೊಡಿ ಎಂದು ಕೇಳಿಕೊಳ್ಳುವವರು, ಲೈಸನ್ಸ್ ಕೊ
ಎನ್ನುವವರು ಜಗಳವನ್ನು ಇತ್ಯರ್ಥ ಮಾಡಿಕೊಡಿ ಎನ್ನುವವರು, ವಿದ್ಯುತ್‌ಕೊ
ನೀರು ಕೊಡಿಸಿ, ಯಾವುದೊ ಸರ್ಟಿಫಿಕೆಟ್ ಕೊಡಿಸಿ ಎನ್ನುತ್ತ ಹಲವು ರೀತಿಯ
ಬರುತ್ತಿದ್ದರು. ಬಂದವರಿಗೆ ಕೆಲಸ ಮಾಡಿಕೊಡಿಸಿದ ಮೇಲೆ ಅವರಿಗೆ ಇಷ್ಟವಾ
ಹಣಕೊಟ್ಟು ಹೋಗುತ್ತಿದ್ದರು. ಯಾರನ್ನು ಇಷ್ಟೆಕೊಡಿ ಅಷ್ಟೆಕೊಡಿ ಎ
ಕೇಳುತ್ತಿರಲಿಲ್ಲ. ಕೊಟ್ಟರೆ ಬೇಡ ಎನ್ನುತ್ತಿರಲಿಲ್ಲ. ಒಟ್ಟಿನಲ್ಲಿ ಹರ್ಷ ತನ್ನನ್ನು ತಾ
ಬಡಾವಣೆಯ ಜೊತೆಗೆ ತೊಡಗಿಸಿಕೊಂಡಿದ್ದ.

* * *

ಮನೆ ತಲುಪಿದ ಅಮರನಾಥ ಕೆನ್ನೆಯ ಮೇಲೆ ಕೈಯಿಟ್ಟುಕೊಂಡು ಮನೆ

ಮರಿ ಬೆಕ್ಕಿನಂತೆ ಓಡಾಡುತ್ತಿದ್ದ. ಅವನು ಪೂರ್ಣವಾಗಿ ಆಫ್ ಆಗಿಹೋಗಿದ್ದನೊ ಇಲ್ಲ ಖುಷಿಯಿಂದ ನೀರಿನ ಚಿಲುಮೆಯಂತೆ ಉಕ್ಕಿ ಹರಿಯುತ್ತಿದ್ದಾನೊ ಅವನ ಮನೆಯವರಿಗೆ ಒಂದೂ ಅರ್ಥವಾಗಲಿಲ್ಲ. ಅವನ ತಾಯಿ ತನ್ನ ಗಂಡನನ್ನು ಕರೆದು "ರೀ ಅಮರನಾಥ ಯಾಕೊ ಕೆನ್ನೆ ಮೇಲೆ ಕೈ ಇಟ್ಟುಕೊಂಡೆ ಓಡಾಡ್ತ ಇದ್ದಾನಲ್ಲಾರಿ" ಎಂದಳು. ಅವನ ತಂದೆ, "ಏನೊ ಅಮರನಾಥ ಯಾರಾದರು ಕೆನ್ನೆಗೆ ಹೊಡೆದರೇನೊ....?" ಎಂದರು ಆತಂಕದಿಂದ. ಅಮರನಾಥನಿಗೆ ನಗಬೇಕೊ ಅಳಬೇಕೊ ಅರ್ಥವಾಗದೆ ನಗುತ್ತಾ ಹೋಗಪ್ಪೊ ನನ್ನನ್ನ ಯಾರು ಹೊಡಿತಾರೆ....?" ಎಂದ. "ಎಲ್ಲಿ ಕೆನ್ನೆ ತೋರಿಸು....?" ಹತ್ತಿರಕ್ಕೆ ಬಂದು ಕೆನ್ನೆಯನ್ನು ಬೆಳಕಿನಲ್ಲಿ ನೋಡಿದರು. ಏನೂ ಇಲ್ಲ.

"ಏನೂ ಕಾಣಿಸ್ತಾ ಇಲ್ಲ. ಆದರೆ ಕೆನ್ನೆ ಮೇಲೆ ಯಾಕೆ ಕೈ ಇಟ್ಟುಕೊಳ್ತೀಯಾ....?" ಎಂದರು. "ಸುಮ್ಮನೆ ಇರಪ್ಪ. ಅಮ್ಮ ಹೇಳ್ತಾರೆ ಅಂದ್ರೆ. ನೀವು ಹಾಗೆ ಕೇಳ್ತೀರಲ್ಲ" ಎಂದ ಅಮರನಾಥ ಮತ್ತೆ ನಗುತ್ತ. "ಏನೇ ಇವನು ಸುಮ್ಮಸುಮ್ಮನೆ ನಗ್ತಾನೆ....?" ಅಮರನಾಥನ ತಂದೆ ತನ್ನ ಹೆಂಡತಿಗೆ ಹೇಳಿದರು. ಅಮರನಾಥನಿಗೆ ಈಗ ನಿಜವಾಗಿಯೂ ಏನು ಹೇಳಬೇಕೊ ಗೊತ್ತಾಗದೆ ಪೆಚ್ಚುಮೋರೆ ಹಾಕಿಕೊಂಡುನಿಂತುಬಿಟ್ಟ. ಮನೆಯಲ್ಲಿ ಎಲ್ಲರೂ ಅವನನ್ನೇ ನೋಡುತ್ತಿದ್ದರು.

ಇಲ್ಲಿ ಕೃತಿಕಾ ಅಮರನಾಥನ ಜೊತೆಗೆ ಒಂದು ಅದ್ಭುತ ದಿನವನ್ನು ಕಳೆದುಬಂದಂತೆ ಖುಷಿಯ ಉನ್ಮಾದದಲ್ಲಿ ಉಕ್ಕಿ ತೇಲಾಡುತ್ತಿದ್ದಳು. ನನಗೆ ಅಮರನಾಥನೆ ಸರಿಯಾದ ಗಂಡ ಎಂದುಕೊಂಡಳು. ಅಷ್ಟರಲ್ಲಿ ರೂಪ ರೂಮಿಗೆ ಬಂದು "ಉಸ್ಸಪ್ಪ" ಎಂದು ಬ್ಯಾಗನ್ನು ಬಿಸಾಕಿ ಮಂಚದ ಮೇಲೆ ಮೈಚೆಲ್ಲಿದಳು.

"ಬೇಬೀಸ್ ಡೇ ಜಾಟ್ ಹೇಗಿತ್ತೆ....?" ಕೃತಿಕಾ ಪ್ರಶ್ನಿಸಿದಳು. "ನಕ್ಕು ನಕ್ಕು ಸುಸ್ತಾಗೋದೆ ಕಣೆ. ಇನ್ನೊಂದು ವಾರ ನಗೋದೆ ಇಲ್ಲ. ಇಂಟ್ರಸ್ಟಿಂಗ್ ಪೆಲೊ ಸವ್ವ" ಏನೊ ತಿಳಿದುಕೊಂಡು ನಕ್ಕಳು ರೂಪ. "ಇನ್ನೊಂದು ವಾರ ನಗೊದಿಲ್ಲ ಅಂದೆ, ಹಾಗೆ ನಗ್ತಾಯಿದ್ದೀಯಲ್ಲ ?" ಕೃತಿಕಾ ಕೇಳುತ್ತಿದ್ದಂತೆ "ನಿನ್ನದು ಯಾಗಿತ್ತು ಕಂಪನಿ....? ಏನಾದರು ಅಡ್ವಾನ್ಸ್‌ಮೆಂಟ್ ಆಯಿತಾ....?" ರೂಪಾ ಪ್ರಶ್ನೆಗೆ ಕೃತಿಕಾ ಕಣ್ಣುಗಳಲ್ಲೆ ನಕ್ಕಳು. "ಒಟ್ಟಿನಲ್ಲಿ ಒಳ್ಳೆ ಉಪಾಯ ಮಾಡಿದೆ ಕಣೆ ನೀನು" ಎಂದಳು ಕೃತಿಕಾ. "ಬೇರೆ ಬೇರೆ ಹೋಗಿದ್ದ....?" ಹೌದು ಎಂದಳು ಕೃತಿಕಾ.

"ಕಮಲಾ.... ನಿತಿನ್ ಎಲ್ಲಿ ಹೋದರೊ ಏನೊ....? ಅವಳು ಹೋಗುವುದಕ್ಕೆ ಮುಂಚೇನೆ ಫಿಜಿಕ್ಸ್ ಕೆಮಿಸ್ಟ್ರಿ ಅಂತ ಹೋದಳು" ರೂಪ

ಹೇಳುತ್ತಿದ್ದಂತೆ ''ಪಿಜಿಕ್ಸ್ ಕೆಮಿಸ್ಟ್ರಿ ಆಗದೆ ಇದ್ದರೆ ಏನಂತೆ....? ಟ್ವಂಟಿಸಿಕ್ಸ್.... ಥರ್ಟಿ ಸಿಕ್ಸ್.... ಟ್ವಂಟಿ ಸಿಕ್ಸ್ ಮ್ಯಾತ್‌ಮ್ಯಾಟಿಕ್ಸ್ ಆಗಿರುತ್ತೆ ಬಿಡೆ '' ಎಂದಿದ್ದೆ ಕೃತಿಕಾ, ಇಬ್ಬರು ನಕ್ಕರು.

''ಕೊನೆಯಲ್ಲಿ ಅದು ಸಾಯಂಕಾಲ ಒಂದು ರೋಜ್ ಕೊಟ್ಟುಬಿಟ್ಟ ಕಣೆ....?'' ಎಂದ ಕೃತಿಕಾ ತನ್ನ ತಲೆಯನ್ನು ಹಿಂದಕ್ಕೆ ತಿರುಗಿಸಿ ರೂಪ ಕಡೆಗೆ ತೋರಿಸಿದಳು. ''ವಾವ್ ಅಂತು ಸ್ವಲ್ಪ ಸ್ವಲ್ಪಾನೆ ಟ್ರ್ಯಾಕ್‌ಗೆ ಬರ್ತಾ ಇದ್ದಾನೆ ಅನ್ನು'' ರೂಪ ಹೇಳಿದಳು.

''ಇವೊತ್ತು ನಡೆದಿದ್ದು ಅದೊಂದೇ'' ಎಂದಳು ಕೃತಿಕಾ ಮುಖವನ್ನು ಸಪ್ಪೆ ಮಾಡಿಕೊಂಡು.

''ಅವನು ಸವ್ಯ ಬೆರಳು ತೋರಿಸಿದರೆ ದೇಹಾನೆ ನುಂಗಿಬಿಡ್ತಾನೆ. ಒಂದಷ್ಟು ಫಿಜಿಕ್ಸ್'' ಎಂದಳು ರೂಪ. ''ನಾನು ಮದುವೆ ಮಾಡಿಕೊಂಡರೆ ಆ ದಡ್ಡನ್ನೇ ಮಾಡಿಕೊಳ್ತೀನಿ'' ಕೃತಿಕಾ ಹೇಳಿದಳು. ''ಚೆನ್ನಾಗಿ ಯೋಚನೆ ಮಾಡಿ ತೀರ್ಮಾನ ತೆಗೆದುಕೊ'' ರೂಪ ಮಾತಿಗೆ ''ಚೆನ್ನಾಗಿ ಯೋಚಿಸಿ ಮಾಡಿಕೊಂಡರೆ ಚೆನ್ನಾಗಿ ಇರ್ತೀವಿ ಅಂತ ಏನು ಗ್ಯಾರಂಟಿ....? ಅದೆಲ್ಲಾ ಅಣೆಬರಹ ಹು'' ಎಂದಳು ಕೃತಿಕಾ.

✲ ✲ ✲

ಪೊಲೀಸ್ ಠಾಣೆಯಲ್ಲಿ ಅನು ಕೇಸಿನ ಫೈಲನ್ನು ತೆಗೆದುಕೊಂಡು ಇಬ್ಬರು ಪೊಲೀಸ್ ಅಧಿಕಾರಿಗಳು ಕುಳಿತಿದ್ದಾರೆ. ಅದುವರೆಗೂ ಕಲೆ ಹಾಕಿರುವ ಮಾಹಿತಿಯಂತೆ ಅನುಳನ್ನು ಯಾರೋ ಸಾಯಿಸಿರುವುದಾಗಿ ಕೇಸು ಬೆಳೆಯುತ್ತಿದೆ. ಇಬ್ಬರು ಅಧಿಕಾರಿಗಳು ಅನುಳ ತಾಯಿ ತಂದೆಯನ್ನು ಎರಡು ಮೂರು ಸಲ ಭೇಟಿಯಾಗಿ ವಿಚಾರಿಸಿದಾಗಲು ಅವಳ ಸಾವಿನ ಬಗ್ಗೆ ಯಾವುದೇ ಖಚಿತ ಮಾಹಿತಿಗಳು ದೊರಕಲಿಲ್ಲ. ಆದರೆ ಕೆಲವು ಸಂದೇಹಗಳು ಮಾತ್ರ ಪೊಲೀಸರನ್ನು ಇನ್ನಷ್ಟು ಯೋಚಿಸುವಂತೆ ಮಾಡಿತ್ತು.

ಇತ್ತೀಚೆಗೆ ಕೊಲೆ, ಸುಲಿಗೆ ಮಾಡುವುದರಲ್ಲಿ ತೊಡಗಿರುವ ಕೆಲವು ನಟೋರಿಯಸ್ ಗ್ಯಾಂಗ್‌ಗಳನ್ನು , ಸಂದೇಹ ಬಂದ ರೌಡಿಗಳನ್ನು ಪ್ರಶ್ನಿಸಿ ನೋಡಿದರು. ರೌಡಿಗಳ ಪೋಟೊಗಳನ್ನು ಸುತ್ತಮುತ್ತಲು ವಾಸಿಸುವ ಜನರಿಗೆ ತೋರಿಸಿ ಪ್ರಶ್ನಿಸಲಾಗಿತ್ತು. ಆದರೂ ಏನೂ ಲಾಭವಾಗಲಿಲ್ಲ.

ಅನು ಅವಳ ತಂದೆ ತಾಯಿಗೆ ಏಕೈಕ ಪುತ್ರಿಯಾಗಿದ್ದು , ಅವರಿಗೆ ಹೇರಳ ಐಶ್ವರ್ಯ ಇರುವುದಾಗಿ ತಿಳಿದುಬಂದಿತು. ಅವರ ವಂಶಜರಿಂದ ಅವರಿಗೆ ಆ ಸ್ವತ್ತು

ದೊರಕಿತ್ತು. ಅವಳ ತಂದೆ ಜಗನ್ಮೋಹನರಾವ್ ಕಾಲೇಜು ಓದುತ್ತಿದ್ದ ದಿನಗಳಲ್ಲಿ ಒಂದು ಹೆಣ್ಣನ್ನು ಪ್ರೀತಿಸಿ ಮನೆಯಲ್ಲಿ ಗೊತ್ತಿಲ್ಲದೆ ಮದುವೆ ಮಾಡಿಕೊಂಡು ಮನೆಗೆ ಕರೆದುಕೊಂಡು ಬರುವ ಹಂತದಲ್ಲಿದ್ದಾಗ ಜಗನ್ಮೋಹನರಾವ್ ಅವರ ಮನೆಯವರಿಗೆ ಹೇಗೊ ಸುಳಿವು ಸಿಕ್ಕಿ ಮನೆಗೆ ಕರೆದುಕೊಂಡುಬಂದುಬಿಟ್ಟರೆ ಅವಮಾನವಾಗಿಬಿಡುತ್ತದೆ ಎಂದು ರಾತ್ರೋರಾತ್ರಿ ಜಗನ್ಮೋಹನರಾವ್‌ನನ್ನು ಹುಡುಕಿ ಮನೆಗೆ ಹೊತ್ತುತಂದು ಕೂಡಾಗಿ ಬೇರೆ ಹುಡುಗಿಯ ಜೊತೆಗೆ ಮದುವೆ ಮಾಡಿಬಿಟ್ಟರಂತೆ. ನಗರದಲ್ಲಿ ಒಂಟಿಯಾದ ಜಗನ್ಮೋಹನರಾವ್‌ನ ಪ್ರೇಯಸಿ ಅರ್ಥಾತ್ ಮೊದಲನೆ ಪತ್ನಿ ವಿಧಿಯಿಲ್ಲದೆ ತನ್ನ ತವರು ಮನೆಗೆ ಹಿಂದಿರುಗಿ ವಿಷಯವನ್ನು ತಿಳಿಸಿ ಕಣ್ಣೀರು ಹಾಕಿಕೊಂಡಿದ್ದಳಂತೆ. ಆ ಹೊತ್ತಿಗೆ ಅವಳು ಗರ್ಭಧರಿಸಿಬಿಟ್ಟಿದ್ದಳು. ಕೆಲವು ದಿನಗಳಾದ ಮೇಲೆ ಜಗನ್ಮೋಹನರಾವ್ ಮೊದಲನೆ ಪತ್ನಿಯ ಹತ್ತಿರ ತಲುಪಿ ನಾನು ನಿನ್ನನ್ನು ಎಂದೆಂದಿಗೂ ಕೈಬಿಡುವುದಿಲ್ಲವೆಂದು ಕಣ್ಣೀರು ಒರೆಸಿ ಎರಡು ಕಡೆಯೂ ಎರಡು ಸಂಸಾರಗಳನ್ನು ಸರಿತೂಗತೊಡಗಿದನಂತೆ.

ಜಗನ್ಮೋಹನರಾವ್ ಮನೆಯವರು ಹೇಗೊ ತಾವು ಯೋಚಿಸಿದಂತೆ ಮನೆಯ ಮಾನ ಉಳಿಯಿತೆಂದು ಸುಮ್ಮನಾದರು. ಆದರೆ ಜಗನ್ಮೋಹನರಾವ್ ಎರಡನೆಯ ಹೆಂಡತಿಯ ಹತ್ತಿರ ಮೂರು ವಾರಗಳಿದ್ದರೆ, ಮೊದಲನೆ ಹೆಂಡತಿಯ ಹತ್ತಿರ ಒಂದು ವಾರ ಜೀವನ ನಡೆಸತೊಡಗಿದ. ಮೊದಲನೆ ಹೆಂಡತಿಗೂ ಯಾವುದೇ ಕೊರತೆ ಮಾಡಲಿಲ್ಲ . ಜಗನ್ಮೋಹನರಾವ್ ಅವರ ಮೊದಲನೆ ಹೆಂಡತಿಗೆ ಒಂದು ಗಂಡು, ಒಂದು ಹೆಣ್ಣು ಮಗು ಇದ್ದರೆ ಎರಡನೆ ಹೆಂಡತಿಗೆ ಬಹಳ ವರ್ಷಗಳ ನಂತರ ಅನು ಹುಟ್ಟಿದ್ದಳು.

ಮೊದಲನೆ ಹೆಂಡತಿಯ ದೊಡ್ಡಮಗ ಮದ್ರಾಸಿನ ಯಾವುದೊ ಖಾಸಗಿ ಕಂಪನಿಯೊಂದರಲ್ಲಿ ಕೆಲಸ ಮಾಡುತ್ತಿದ್ದ. ಮಗಳು ಡಿಗ್ರಿ ಮುಗಿಸಿ ಮನೆಯಲ್ಲಿದ್ದಳು. ಎರಡನೆ ಹೆಂಡತಿಯ ಮಗಳಾದ ಅನು ಈಗ ಬೆಂಗಳೂರಿನಲ್ಲಿ ಸಾವನ್ನು ಅಪ್ಪಿದ್ದಳು. ಇವಳನ್ನು ಸಾಯಿಸುದ್ದು ಯಾರು...? ಈ ಹಿನ್ನೆಲೆಯಲ್ಲಿ ಪೊಲೀಸರು ಮೇಲಿನ ವಿವರಗಳನ್ನೆಲ್ಲ ತಿಳಿದುಕೊಂಡು, ಜನಗನ್ಮೋಹನರಾವ್ ಮೊದಲನೆ ಹೆಂಡತಿಯ ಮಗನೇನಾದರು ಇದರಲ್ಲಿ ಕೈ ಹಾಕಿರಬಹುದೆ ಎನ್ನುವ ಸಂದೇಹ ಬಂದು ಅವನಿದ್ದ ಸ್ಥಳಕ್ಕೆ ಹೋಗಿ ಮಾಹಿತಿ ಪಡೆದುಕೊಂಡು ಬಂದಿದ್ದರು. ಜೊತೆಗೆ ಇಲ್ಲಿ ಬೆಂಗಳೂರಿನಲ್ಲಿ ಅನು ಕೊಲೆಯಾದ ಮನೆಯ ಸುತ್ತಮುತ್ತಲು ಪೊಲೀಸರು ಪದೆ ಪದೆ ಹೋಗಿ ವಿಚಾರಣೆ ನಡೆಸಿದ್ದರು. ಅವಳು ಸತ್ತ ಮನೆಯಲ್ಲಿ ನಾಲ್ಕಾರು ಸಲ ತಪಾಸಣೆ ನಡೆಸಿದ್ದರು.

ಅನು ಸಾಯುವುದಕ್ಕೆ ಮುಂಚೆ ಜಗನ್ಮೋಹನರಾವ್ ಆಗಾಗ ಎರಡನೆ ಪತ್ನಿಯ ಜೊತೆಗೆ ಸುಮ್ಮಸುಮ್ಮನೆ ಜಗಳವಾಡುತ್ತಿದ್ದುದಾಗಿ ತಿಳಿಯಿತು. ಜೊತೆಗೆ ಮೊದಲನೆ ಹೆಂಡತಿಯ ಮನೆಗೆ ಯಾವಾಗಲಾದರು ಹೋಗಿ ಬಂದರೆ ಖಂಡಿತ ಜಗಳವಾಡುತ್ತಿದ್ದರು ಎಂಬುದಾಗಿ ಎರಡನೆ ಪತ್ನಿ ಅಕ್ಕಪಕ್ಕದವರ ಹತ್ತಿರ ಹೇಳಿಕೊಳ್ಳುತ್ತಿದ್ದಳು ಎಂಬುದಾಗಿ ಪೊಲೀಸರಿಗೆ ತಿಳಿಯಿತು. ಆದರೆ ಅನುಳನ್ನು ಕೊಲೆ ಮಾಡಿದ್ದು ಯಾರು....? ಈಗ ಪೊಲೀಸರಿಗೆ ಉಳಿದಿದ್ದ ಎರಡು ದಾರಿಗಳೆಂದರೆ ಒಂದು ಮದ್ರಾಸಿನಲ್ಲಿರುವ ಮೊದಲನೆ ಹೆಂಡತಿಯ ಮಗನ ಸುತ್ತಲಿರುವ ಸಂದೇಹಗಳು. ಇಲ್ಲಿ ಮೊದಲನೆ ಹೆಂಡತಿಯ ಮಗನ ಮೇಲೆ ಸಂದೇಹವನ್ನು ಕೇಂದ್ರೀಕರಿಸಬೇಕಾದಾರೆ ಜಗನ್ಮೋಹನರಾವ್ ಸ್ವತ್ತಿನ ಮೇಲೆ ಅವನ ಕಣ್ಣುಬಿದ್ದಿರಬಹುದು ಎನ್ನುವ ಸಂದೇಹದ ಆಧಾರದ ಮೇಲೆ. ಎರಡು ಬೆಂಗಳೂರಿನಲ್ಲಿ ಅನು ಸಾವಿಗಿಡಾದ ಮನೆ ಮತ್ತು ಅವಳ ಸುತ್ತಲಿನ ಸಂಬಂಧಗಳು. ಪೊಲೀಸರು ಮೊದಲನೆಯ ಹೆಂಡತಿಯನ್ನು ಮತ್ತು ಅವಳ ಮಗನನ್ನು ಭೇಟಿಮಾಡಬೇಕೊ, ಬೇಡವೊ, ಎನ್ನುವ ಸಂದೇಹದಲ್ಲಿ ಸಿಲುಕಿಕೊಂಡಿದ್ದರು. ಆದರೆ ಅವರಿಗೆ ತಿಳಿಯದೆ ಅವರ ಸುತ್ತಮುತ್ತಲು ಮಾಹಿತಿಯನ್ನು ಕಲೆಹಾಕಿದ್ದರು. ಅನು ಸಾವು ಪೊಲೀಸ್ ಅಧಿಕಾರಿಗಳಿಗೆ ಒಂದು ವಿಶೇಷ ಛಾಲೆಂಜ್ ಆಗಿದ್ದರಿಂದ ಈ ಕೇಸನ್ನು ಹೇಗಾದರು ಬೇಧಿಸಬೇಕೆಂದು ಸಂಬಂಧಪಟ್ಟ ಅಧಿಕಾರಿಗಳು ಹಗಲು ರಾತ್ರಿ ತಲೆ ಕೆಡಿಸಿಕೊಂಡು ನಾಯಿಗಳಂತೆ ಸುತ್ತಾಡುತ್ತಿದ್ದರು.

* * *

ಅಮರನಾಥ ಮತ್ತು ಕೃತಿಕಾ ಓದುತ್ತಿದ್ದ ತರಗತಿಯ ವಿದ್ಯಾರ್ಥಿಗಳು ಮೂರು ವರ್ಷಗಳ ವ್ಯಾಸಂಗವನ್ನು ಮುಗಿಸಿ ಅಂತಿಮ ವರ್ಷಕ್ಕೆ ಕಾಲಿಟ್ಟಿದ್ದರು. ಅವರ ಗೆಳೆಯ ಗೆಳತಿಯರ ಪೈಕಿ ಯಾರೂ ಹೆಚ್ಚು ವಿಷಯಗಳನ್ನು ಬಾಕಿ ಉಳಿಸಿಕೊಂಡಿರಲಿಲ್ಲ. ಒಂದೆರಡು ವಿಷಯಗಳು ಉಳಿದುಕೊಂಡಿದ್ದರು ಅವುಗಳನ್ನು ಬರುವ ಅಂತಿಮ ಪರೀಕ್ಷೆಗಳಿಗಿಂತ ಮುಂಚೆ ಮುಗಿಸಿಕೊಳ್ಳಲು ಗಂಭೀರವಾಗಿ ಓದಿಕೊಳ್ಳುತ್ತಿದ್ದರು. ಮೂರನೆ ವರ್ಷದ ವ್ಯಾಸಂಗದಲ್ಲಿ ಕಮುನಿಟಿ ಮೆಡಿಸನ್, ಇಎನ್‌ಟಿ, ಅಪ್ತಮಾಲಜಿ, ಸರ್ಜರಿ, ಗೈನೊಕಾಲಜಿ ವಿಷಯಗಳನ್ನು ಮುಗಿಸಿದ್ದು, ಅಂತಿಮ ವರ್ಷದಲ್ಲಿ ಮುಖ್ಯವಾಗಿ ಪೊರ್‌ಸಿನಿಕ್ ಮೆಡಿಸನ್ ಅಭ್ಯಾಸ ಮಾಡಬೇಕಾಗಿತ್ತು. ಪೊರ್‌ಸಿನಿಕ್ ಮೆಡಿಸನ್‌ನಲ್ಲಿ ಹೆಚ್ಚಾಗಿ ಸತ್ತ ಹೆಣಗಳನ್ನು ಪರೀಕ್ಷಿಸುವುದರ ಬಗ್ಗೆ ತಿಳಿದುಕೊಳ್ಳಬೇಕಾಗಿತ್ತು.

-''ವೈದ್ಯರು, ಪ್ರಪಂಚದಲ್ಲಿ ಏನೇನು ಸಂಶೋಧನೆಗಳು ನಡೆಯುತ್ತಿವೆ ಅನ್ನೋದನ್ನ ಗಮನಿಸ್ತಾ ಇರಬೇಕು. ಮನುಷ್ಯನ ಕೋಶಗಳಲ್ಲಿ ಅಡಗಿರೊ ಡಿಎನ್‌ಎ ಸಂಶೋಧನೆ ಬಹಳ ಅದ್ಭುತವಾದುದು. ಇಂಗ್ಲೆಂಡಿನಲ್ಲಿರೊ ಆಕ್ಸಫೋರ್ಡ್ ಜೆನಿಟಕ್ಸ್ ಅನ್ನೊ ಒಂದು ಕಂಪನಿಗೆ ನೀವು ಒಂದು ತೊಟ್ಟು ರಕ್ತ ಕಳುಹಿಸಿದರೆ ಸಾಕು. ನಿಮ್ಮ ವಂಶಸ್ಥರು ನೂರು, ಇನ್ನೂರರಿಂದ ಹಿಡಿದು ಹತ್ತು ಹದಿನೈದು ಸಾವಿರ ವರ್ಷಗಳ ಹಿಂದೆ ಯಾವ ಕಸುಬು ಮಾಡ್ತಾ ಇದ್ದರು....? ಅವರು ನೋಡುವುದಕ್ಕೆ ಹೇಗಿದ್ದರು....? ಅವರ ಗುಣಗಳು.... ಹೀಗೆ ಎಲ್ಲವನ್ನು ಹೇಳ್ತಾರೆ. ಆಫ್ರಿಕಾದಲ್ಲಿ ಒಂದು ಲಕ್ಷ ಐವತ್ತು ಸಾವಿರ ವರ್ಷಗಳ ಹಿಂದೆ ಒಂದು ಮಹಿಳೆ ಜೀವಿಸಿದ್ದಳಂತೆ. ನಾವೆಲ್ಲರು ಅವಳ ಸಂತತಿಯಂತೆ. ಯುರೋಪಿನಲ್ಲಿ ಇರೊ ಸಂತತಿಯಲ್ಲ ಏಳು ತಾಯಿಯರ ಸಂತತಿಯಂತೆ. ಅವರ್ನ ಯುರೋಪಿನ ಸಪ್ತಕನ್ನೆಯರು ಅಂತ ಕರಿತಾರೆ.

-ಮನುಷ್ಯನ ಕೋಶದಲ್ಲಿರುವು ಡಿಎನ್‌ಎ ಒಬ್ಬರಿಂದ ಇನ್ನೊಬ್ಬರಿಗೆ ಎಲ್ಲಾ ಗುಣಗಳನ್ನು ರೂಪವನ್ನು ಹೊತ್ತು ಸಾಗುತ್ತದೆ. ಎರಡು ಲಕ್ಷ ಐವತ್ತು ಸಾವಿರ ವರ್ಷಗಳಿಗೊಮ್ಮೆ ಡಿಎನ್‌ಎ ಕಣಗಳು ತಮ್ಮ ಮೂಲ ಧಾತುಗಳನ್ನು ಬದಲಾಯಿಸುತ್ತವಂತೆ. ನಿಮಗೆ ಇನ್ನೊಂದು ವಿಷಯಗೊತ್ತೆ....? ತಾಯಿ ಗರ್ಭದಲ್ಲಿರೊ ಮಗು ತನ್ನ ತಾಯಿ ಮಾತನಾಡುವ ಪ್ರತಿಯೊಂದು ಮಾತನ್ನು ಆಲಿಸುತ್ತದೆ. ತಾಯಿ ಚಳಿಗೆ ನಡುಗಿದರೆ ಅದು ನಡುಗುತ್ತದೆ. ಬಿಸಿಲಿಗೆ ಬಳಲಿದರೆ ಅದು ಬಳಲುತ್ತದೆ. ಅವಳು ನಕ್ಕರೆ ನಗುತ್ತದೆ, ಅತ್ತರೆ ಅಳುತ್ತದೆ. ಯಾರಾದರು ತಾಯಿನ್ನು ಬೈಯ್ದರೆ ಹೊಡೆದರೆ ಮಗು ಭೀತಿಗೊಳಗಾಗುತ್ತದೆ. ಇದೆ ವಿಷಯವನ್ನು ಮಹಾಭಾರತದ ಅಭಿಮನ್ಯು ತನ್ನ ತಾಯಿಯ ಹೊಟ್ಟೆಯಲ್ಲಿದ್ದಾಗ ಎಲ್ಲಾ ಮಾತುಗಳನ್ನು ಕೇಳಿಸಿಕೊಳ್ಳುತ್ತಿದ್ದ ಎನ್ನುವುದನ್ನು ವಿಜ್ಞಾನಿಗಳು ಈಗ ದೃಢಪಡಿಸಿದ್ದಾರೆ.''

-ಹೀಗೆ ಆ ಪ್ರೊಫೆಸರು ತನ್ನ ಪಠ್ಯಪುಸ್ತಕದ ಪಾಠವನ್ನು ಬಿಟ್ಟು, ಆಧುನಿಕ ವಿಜ್ಞಾನದ ಹಲವು ಸಂಶೋಧನೆಗಳ ಬಗ್ಗೆ ಮಾತನಾಡುತ್ತಲೆ ಹೋಗುತ್ತಿದ್ದರು. ತರಗತಿಯ ಸಮಯ ಮುಗಿಯುತ್ತಾ ಬಂದು ಗಂಟೆ ಹೊಡೆದೊಡನೆ ಅವರು ''ಸಾರಿ ನಾನು ಪಾಠಾನೆ ಮರೆತೋದೆ. ಮುಂದಿನ ತರಗತಿಯಲ್ಲಿ ನೋಡೋಣ'' ಎಂದು ಹೊರಟುಹೋದರು.

* * *

ಮರುದಿನ ಬೆಳಗ್ಗೆ ಕಾಲೇಜಿನ ಗೇಟಿನಲ್ಲಿ ಹರ್ಷ ತನ್ನ ದ್ವಿಚಕ್ರ ವಾಹನವನ್ನು ನಿಲ್ಲಿಸಿ ಶತಪಥ ಹೆಜ್ಜೆ ಹಾಕುತ್ತಿದ್ದಾನೆ. ಬಿಳಿ ಬಣ್ಣದ ಖಾದಿ ಬಟ್ಟೆಯನ್ನು ಧರಿಸಿರುವ

ಹರ್ಷ ಒಂದು ಕಡೆ ನಿಲ್ಲದೆ ನಾಯಿಮರಿಯಂತೆ ಕುಯ್‌ಗುಡುತ್ತಿದ್ದಾನೆ. ಅವನ ಗೆಳೆಯರು ಯಾರೂ ಅವನ ಕಣ್ಣಿಗೆ ಕಾಣಿಸಲಿಲ್ಲ. ಅಷ್ಟರಲ್ಲಿ ಕೃತಿಕಾ ಮತ್ತು ರೂಪ ದೂರದಲ್ಲಿ ಬರುತ್ತಿರುವುದು ಅವನ ಕಣ್ಣಿಗೆ ಬಿದ್ದಿತು. ದೂರದಿಂದಲೆ ಹರ್ಷನನ್ನು ನೋಡಿದ ಅವರು ''ಇವನೇನೆ ಬೆಳಗ್ಗೇನೆ ಗೇಟು ಕಾಯ್ತಾ ಇದ್ದಾನೆ....? ತಲೇಗೆ ಬರೊ ವಿಷಯ ಯಾವುದೂ ಇಲ್ಲ ತಾನೆ....?'' ಮಾತನಾಡಿಕೊಳ್ಳುತ್ತ ಹತ್ತಿರಕ್ಕೆ ಬಂದರು.

ಕೃತಿಕಾ ''ಹಲೊ ಹರ್ಷ ಚೆನ್ನಾಗಿದ್ದೀಯಾ....?'' ಪ್ರಶ್ನಿಸಿದಳು. ಓ ಫೈನ್ ಚೆನ್ನಾಗಿದ್ದೀನಿ. ನೀವು ಚೆನ್ನಾಗಿದ್ದೀರ....?'' ''ಚೆನ್ನಾಗಿದ್ದೀವಿ ಥ್ಯಾಂಕ್‌ಯು. ತುಂಬಾ ದಪ್ಪ ಆಗಿಬಿಟ್ಟಿದ್ದೀಯ...?'' ರೂಪ ಹೇಳಿದ್ದೆ , ''ಹೌದಾ?'' ಹರ್ಷ ತನ್ನ ದೇಹವನ್ನು ಕುಲುಕುಲುನೆ ಕುಲುಕಾಡಿಸಿ ತನ್ನನ್ನು ತಾನೆ ನೋಡಿಕೊಂಡು ನಕ್ಕ.

ಅನಂತರ ಏನೊ ಕಳೆದುಕೊಂಡಂತೆ ಮುಖ ಮಾಡಿಕೊಂಡು ''ನಿಮ್ಮನ್ನ ನೋಡಿದರೆ ಅನು ಜ್ಞಾಪಕ ಬರುತ್ತೆ ಪಾಪ !'' ಎಂದ. ಕೃತಿಕಾ ಮತ್ತು ರೂಪ ಮುಖಗಳು ಅನುಳ ಹೆಸರು ಕೇಳಿದ್ದೆ ಒಮ್ಮೆಲೆ ಬಾಡಿಹೋದಂತಾದವು. ''ಐಯಾಮ್ ಸಾರಿ. ಬೆಳಗ್ಗೇನೆ ನಿಮಗೆ ಅನುಳನ್ನು ಜ್ಞಾಪಿಸಿ ತೊಂದರೆ ಮಾಡಿದೆ '' ಹರ್ಷನ ಮಾತಿಗೆ ''ಇಟ್ಸ್ ಓಕೆ ಅನುನ ಜ್ಞಾಪಕ ಇಟ್ಟುಕೊಂಡಿದ್ದೀಯಲ್ಲ. ನಿನ್ನ ರಾಜಕೀಯ ಹೇಗಿದೆ...?'' ಕೃತಿಕಾ ಪ್ರಶ್ನಿಸಿದಳು.

''ಇದೊ ನೋಡಿ...?'' ಎನ್ನುತ್ತ ತನ್ನ ಖಾದಿ ಬಟ್ಟೆಯನ್ನು ಮುಟ್ಟಿತೋರಿಸಿದ. ಮೂವರು ನಕ್ಕರು. ''ನೀನು ಒಬ್ಬ ಎಂ.ಎಲ್.ಎ.ನೊ, ಎಂ.ಪಿ.ನೊ ಆದರೆ ನೋಡುವುದಕ್ಕೆ ಬರ್ತೀವಿ. ನಮ್ಮನ್ನ ಮರೆಯಬೇಡ '' ಕೃತಿಕಾ ನಗುತ್ತಾ ಹೇಳಿದಳು. ''ನೋಡೋಣ.... ಯಾರ್‍ಯಾರ ಹಣೆಯಲ್ಲಿ ಏನೇನು ಬರೆದಿದೆಯೊ.... ಹೌದು. ಈ ಅಮರನಾಥ, ಸವ್ಯ, ನಿತಿನ್, ಇನ್ನೂ ಬರ್ಲಿಲ್ಲವಲ್ಲ.... ನಾನು ಅವರಿಗೋಸ್ಕರ ಕಾಯ್ತಾ ಇದ್ದೀನಿ '' ಹರ್ಷ ಹೇಳಿದ. ''ಯಾಕೆ...?'' ಕೃತಿಕಾ ಪ್ರಶ್ನಿಸಿದಳು. ''ಏನೂ ಇಲ್ಲ ? ಒಂದು ಸಣ್ಣ ಗುಡ್‌ನ್ಯೂಸ್, ಒಂದು ರಾಷ್ಟ್ರಮಟ್ಟದ ರಾಜಕೀಯ ಪಕ್ಷದ ಹೆಸರುಹೇಳಿ ''ನನಗೆ ಬೆಂಗಳೂರು ಕಾರ್ಪೊರೇಷನ್ ಚುನಾವಣೆಯಲ್ಲಿ ಕಾರ್ಪೊರೇಟಾಗಿ ನಿಲ್ಲಲು ಸೀಟು ಸಿಕ್ಕಿದೆ'' ಎಂದ. ''ವಾವ್ ನೀನು ಖಂಡಿತ ಗೆಲ್ಲುತ್ತೀಯ. ನೆಕ್ಸ್ಟ್ ಎಂ.ಎಲ್.ಎ. ಅನಂತರ ಎಂ.ಪಿ. ಈ ವಿಷಯಾನ ಇಷ್ಟು ಲೇಟಾಗಿ ಹೇಳ್ತೀದ್ದಿಯಲ್ಲಾ....? ಅಡ್ವಾನ್ಸ್ ಕಂಗ್ರ್ಯಾಜುಲೇಷನ್ಸ್'' ಎಂದು ಇಬ್ಬರು ಹರ್ಷನ ಕೈ ಕುಲುಕಿದರು.

ಅಷ್ಟರಲ್ಲಿ ಅಮರನಾಥ ಮತ್ತು ಸವ್ಯ ಇಬ್ಬರು ದ್ವಿಚಕ್ರ ವಾಹನದಲ್ಲಿ ಬರುವುದು ಕಾಣಿಸಿಕೊಂಡಿತು. ''ನಮ್ಮ ಹುಡುಗರನ್ನ ಸರಿಯಾಗಿ ನೋಡಿಕೊಳ್ಳಿ'' ಎನ್ನುತ್ತ ಹರ್ಷ ಅವರ ಕಡೆಗೆ ನೋಡಿ ಕೈ ಆಡಿಸಿದ. ಕೃತಿಕಾ ಮತ್ತು ರೂಪ ಇಬ್ಬರೂ ಕಣ್ಣುಗಳನ್ನು ಸಣ್ಣಗೆ ಮಾಡಿಕೊಂಡು ಒಬ್ಬರನ್ನೊಬ್ಬರು ನೋಡಿಕೊಂಡರು. ಅಮರನಾಥ ಮತ್ತು ಸವ್ಯ ಗಾಡಿಯಿಂದ ಇಳಿಯುತ್ತಿದ್ದಂತೆ ಹರ್ಷ ಹತ್ತಿರಕ್ಕೆ ಹೋಗಿ ಇಬ್ಬರನ್ನು ತಬ್ಬಿಕೊಂಡು ಹೇಗಿದ್ದೀಯೊ....? ನೀನು ಹೇಗಿದ್ದೀಯೊ....? ಎಂದು ಒಬ್ಬರನ್ನೊಬ್ಬರು ಮುಟ್ಟಿನೋಡಿಕೊಳ್ಳುತ್ತ ಕೇಳಿಕೊಂಡರು.

''ನಡಿಯಿರೊ ತಿಂಡಿ ತಿಂದುಕೊಂಡು ಮಾತನಾಡೋಣ'' ಎಂದು ಹಿಂದಕ್ಕೆ ನೋಡುತ್ತಾನೆ. ಕೃತಿಕಾ ಮತ್ತು ರೂಪ ಅಲ್ಲಿಂದ ಒಂದಷ್ಟು ದೂರದಲ್ಲಿ ತಿರುಗಿ ನೋಡುತ್ತ ಕಾಲೇಜಿನ ಕಡೆಗೆ ಹೋಗುತ್ತಿದ್ದಾರೆ. ಹರ್ಷ ಕೈಯನ್ನು ಮೇಲಕ್ಕೆ ಎತ್ತಿ ಚಹಾ ಕುಡಿಯಲು ಆಹ್ವಾನಿಸಿದ.

ಅವರು ಇಲ್ಲ ಕ್ಲಾಸಿದೆ ಎಂದು ಹೇಳಿ ಮುಂದಕ್ಕೆ ಹೋಗುತ್ತ , ''ಇವನು ನಿಜವಾಗಿಯೂ ದೊಡ್ಡ ಪಾಲಿಟಿಷಿಯನ್ ಆಗ್ತಾನೆ ಕಣೆ, ನೋಡಿದರೆ ಹಾಗೇನೆ ಕಾಣಿಸುತ್ತೆ, ಹೋಗ್ಲಿಬಿಡು ನಮಗೆ ಗೊತ್ತಿರುವವರು ಒಬ್ಬರು ಒಳ್ಳೆ ಅಧಿಕಾರದಲ್ಲಿದ್ದರೆ ನಮಗೂ ಒಳ್ಳೇದು'' ಹೀಗೆ ಕೃತಿಕಾ ಮತ್ತು ರೂಪ ಇಬ್ಬರೂ ಮಾತನಾಡಿಕೊಂಡು ಹೋಗುತ್ತಿದ್ದರು. ಅಷ್ಟರಲ್ಲಿ ನಿತಿನ್ ಗೆಳೆಯರ ಜೊತೆಗೆ ಸೇರಿಕೊಂಡ.

ಎಲ್ಲರಿಗೂ ತಿಂಡಿ ಕೊಡಿಸುತ್ತ ತನಗೆ ಬೆಂಗಳೂರು ಕಾರ್ಪೊರೇಷನ್‌ನಲ್ಲಿ ಕಾರ್ಪೊರೇಟರಾಗಿ ನಿಲ್ಲಲು ರಾಷ್ಟ್ರೀಯ ಒಂದು ಪಕ್ಷದಲ್ಲಿ ಸೀಟು ಸಿಕ್ಕಿರುವ ವಿಷಯ ತಿಳಿಸಿದ. ತಿಂಡಿ ತಿನ್ನುತ್ತಿದ್ದವರಿಗೆ ಖುಷಿಯಾಗಿ ಗಂಟಲಲ್ಲಿ ಸಿಕ್ಕಿಕೊಂಡಂತಾಗಿ ಎಲ್ಲರೂ ಅವನನ್ನು ತಬ್ಬಿಕೊಂಡು ಅಭಿನಂದಿಸಿದರು. ಹೋಟಲಿನಲ್ಲಿ ಇದ್ದವರೆಲ್ಲ ಇವರ ಕಡೆಗೆ ನೋಡತೊಡಗಿದರು.

''ನಿನಗೆ ಇಪ್ಪತ್ತೊಂದು ವರ್ಷ ಆಗಿದೆಯೇನೊ....?'' ಸವ್ಯ ಕೇಳಿದ. ''ಆಗದೆ ಇದ್ದರೆ ಮಾಡಿಸ್ತೀನೊ'' ಹರ್ಷ ಉತ್ತರಿಸಿದ, ಎಲ್ಲರೂ ನಕ್ಕರು. ''ನೋಡ್ರೊ ನಿಮಗೆ ಈಗ ಕ್ಲಾಸ್ ಇದೆ ಅನಿಸುತ್ತೆ. ನಾನು ನಿಮಗೆ ಒಂದೆರಡು ದಿನ ಮೊದಲು ತಿಳಿಸ್ತೀನಿ. ಎಲ್ಲರೂ ನನ್ನ ಪರವಾಗಿ ಕ್ಯಾನ್‌ವಸ್ ಮಾಡೊದಕ್ಕೆ ಬಂದುಬಿಡಬೇಕು. ನಾಲ್ಕುದಿನ ತರಗತಿಗಳು ಹೊದ್ರು ಪರವಾಗಿಲ್ಲ'' ಎನ್ನುತ್ತಿದ್ದಂತೆ ''ಏ ಬಿಡಮ್ಮ ನಿನಗೋಸ್ಕರ ತರಗತಿಗಳೇನು ಕಾಲೇಜ್ ಹೋಗ್ಲಿ'' ನಿತಿನ್ ಹೇಳಿದ. ''ಲೊ ಸ್ವಲ್ಪ ಅದುಮಿಕೊಂಡು ಕೇಳು'' ಅಮರನಾಥ ಹೇಳಿದ. ''ಲೊ ಎಲೆಕ್ಷನ್ ಇನ್ನು ಇಪ್ಪತ್ತು ದಿನ ಇದೆ. ನೀವು

ಯಾವುದಕ್ಕೂ ಕಾಲೇಜ್ ಮುಗಿಸಿಕೊಂಡು ನೇರವಾಗಿ ನಮ್ಮ ಮನೆ ಹತ್ತರ ಬಂದುಬಿಡಿ. ಎಲ್ಲಾ ಮಾತನಾಡೋಣ. ನೋಡ್ರೊ ಇದರಲ್ಲಿ ಗೆದ್ದುಬಿಟ್ರೆ ಸಾಕು. ಆ ಮೇಲೆ ನಾನು ಏನು ಆಗ್ತೀನೊ ನೋಡಿ. ನಾನು ಇನ್ನು ಬರ್ಲಾ....? ಕ್ಲಾಸಸ್ ತಪ್ಪಿಸ್ಕೊಬೇಡ್ರೊ ಮಕ್ಕಳಾ..... ಚೆನ್ನಾಗಿ ಓದಿ'' ಎನ್ನುತ್ತ ಹರ್ಷ ಹೋಟಲಿನವರಿಗೆ ಹಣಕೊಟ್ಟು ವಾಹನ ಏರಿ ಹೊರಟುಹೋದ.

-ಮೂವರು ಹರ್ಷ ಹೋಗುವುದನ್ನೇ ನೋಡುತ್ತಾ ನಿಂತುಬಿಟ್ಟರು. ಮತ್ತೆ ವಾಹನದಲ್ಲಿ ಹಿಂದಕ್ಕೆ ಬಂದ ಹರ್ಷ ''ಇವೊತ್ತು ಪೇಪರ್ ನೋಡಲಿಲ್ಲವೇನ್ರೋ....?ರಿಕಿ ರೋನಾಲ್ಡ್ ಬಂದಿದಾನೆ ನೋಡ್ರೋ....?'' ಎಂದ. ಎಲ್ಲರೂ ''ಏನೊ.....ಏನು'' ಎಂದರು. ಹರ್ಷ ''ದಿನಾ ಪತ್ರಿಕೆ ಓದೊದನ್ನು ಕಲಿತುಕೊಳ್ಳರೊ'' ಎಂದೇಳಿ ವಾಹನದ ಎಕ್ಸ್‌ಲೇಟರ್ ತಿರುಗಿಸಿ ಹೊರಟುಹೋದ.

''ಏನ್ರೊ ಬಂದಿದೆ.....? ಅಲ್ಲೆ ಅಂಗಡಿಯಲ್ಲಿ ತಗಲಾಕಿದ್ದ ದಿನಪತ್ರಿಕೆಗಳನ್ನು ತಿರುಗಿಸಿ ನೋಡುತ್ತಾರೆ. ರಿಕಿ ರೊನಾಲ್ಡ್ ಫೋಟೊ ಬಂದಿದೆ. ಕೆಳಗೆ ಓದುತ್ತಾರೆ. ''ಬೆಂಗಳೂರಿನ ಕಾಲೇಜುಗಳಲ್ಲಿ ಮಾದಕ ವಸ್ತುಗಳನ್ನು ಮಾರುತ್ತಿದ್ದ ವಿದ್ಯಾರ್ಥಿಗಳ ಗ್ಯಾಂಗ್ ಬಂಧನ '' ಎಂದಿದೆ. ನನ್ನ ಮಗ ಹೋದ ಕೃಷ್ಣನ ಜನ್ಮಸ್ಥಳಕ್ಕೆ '' ಸವ್ಯ ಹೇಳಿದ. ಅಲ್ಲಿದ್ದವರೆಲ್ಲ ಅವನ ಫೋಟೊ ನೋಡುತ್ತ ''ಲೊ ಇವನು ಕಣೊ ನನ್ನ ಮಗ....? ಇಲ್ಲೆಲ್ಲ ಸುತ್ತಡ್ತಾ ಇದ್ದನಲ್ಲೊ....?'' ಎಂದು ಮಾತನಾಡಿಕೊಳ್ಳುತ್ತಿದ್ದರು. ಅಮರನಾಥ, ಸವ್ಯ ಮತ್ತು ನಿತಿನ್ ಏನೂ ಮಾತನಾಡದೆ ತರಗತಿಯ ಕಡೆಗೆ ಹೊರಟರು.

ಹರ್ಷನ ಗಾಡಿ ಓಡುತ್ತಿದ್ದಂತೆ ಕಾರ್ಪೋರೇಟರ್ ಸೀಟು ಪಡೆಯಲು ತಾನು ಏನೆಲ್ಲ ಸಾಹಸಗಳನ್ನು, ಪಡಪಾಟಲನ್ನು ಪಟ್ಟ ಎನ್ನುವುದು ಅವನ ತಲೆಯಲ್ಲಿ ಹಾದು ಹೋಗುತ್ತಿತ್ತು. ಸೀಟೆನೊ ಸಿಕ್ಕಿತು. ತಾನು ಗೆಲ್ಲುತ್ತೇನೆಯೆ....? ಗೆಲ್ಲಬೇಕಾದರೆ ಇನ್ನು ಏನೇನು ಕೆಲಸಗಳನ್ನು ಮಾಡಬೇಕು....? ವಾಲ್‌ಪೋಸ್ಟರು, ಆಟೊ....ಸ್ಟಿಕರು.... ಪಾಂಪ್ಲೆಟ್.... ಬ್ಯಾನರುಗಳು ಹೀಗೆ ಒಂದೊಂದಾಗಿ ಅವನ ತಲೆಯಲ್ಲಿ ಏಳುತ್ತಿದ್ದವು. ಇವುಗಳಿಗೆಲ್ಲ ಹಣ ಎಲ್ಲಿಂದ ಬರಬೇಕು....? ಯಾರನ್ನು ಕೇಳುವುದು....ಯಾರನ್ನು ಕೇಳುವುದು ಬೇಡ. ಕೇಳದೆ ಇದ್ದರೆ ಯಾರು ಕೊಡ್ತಾರೆ ? ಹಣವಿಲ್ಲದೆ ಗೆಲ್ಲುವುದು ಹೇಗೆ....? ಒಂದು ವೇಳೆ ಸೋತುಬಿಟ್ಟರೆ.....? ಸಾಲ ಮಾಡಬೇಕು. ಸಾಲ ಯಾರು ಕೊಡ್ತಾರೆ....? ಒಂದು ವೇಳೆ ಸಾಲ ತೆಗೆದುಕೊಂಡು ಸೋತುಬಿಟ್ಟರೆ....? ಸಾಲ ತೀರಿಸುವುದು ಹೇಗೆ....? ಅವನ ತಲೆ ಗಿರಗಿರನೆ ತಿರುಗುತ್ತಿತ್ತು. ತನಗೆ ಸೀಟು

ಕೊಟ್ಟಿರುವುದು ರಾಷ್ಟ್ರೀಯ ಪಕ್ಷವಾಗಿದ್ದು,ತಾನು ಖಂಡಿತ ಗೆಲ್ಲುತ್ತೇನೆ ಎನ್ನುವ ನಂಬಿಕೆ ಇದ್ದರು ಹರ್ಷನಿಗೆ ಸಾವು ಬದುಕಿನ ಪ್ರಶ್ನೆಯಂತೆ ಕಾಣುತ್ತಿತ್ತು. ಯಾವುದು ಏನಾದರು ಆಗಲಿ ಮೊದಲು ತನಗೆ ಸೀಟು ದೊರಕಿಸಿಕೊಟ್ಟವರನ್ನು ನೋಡಿ ಅವರಿಂದ ಆಶೀರ್ವಾದ ಪಡೆಯಬೇಕು ಎಂದು ಎಲ್ಲವನ್ನು ಮರೆತು ಗಾಡಿ ಓಡಿಸತೊಡಗಿದ.

ಈ ಬೆಂಗಳೂರಿನಲ್ಲಿ ಗಾಡಿ ಓಡಿಸುವುದು ಒಂದು ಸಾಹಸವೆ ಆಗಿಬಿಟ್ಟಿದೆ. ಪ್ರಪಂಚದಲ್ಲಿ ಇರೊರೆಲ್ಲ ಬಂದು ಬೆಂಗಳೂರು ಸೇರಿಕೊಂಡರೆ ಇನ್ನೇನಾಗುತ್ತೆ....? ಕನ್ನಡದವರೆಲ್ಲ ಬೆಂಗಳೂರು ಬಿಟ್ಟು ದೂರಕ್ಕೇ ಹೋಗ್ತಾಯಿದ್ದರೆ, ಬೇರೆಯವರೆಲ್ಲ ಬೆಂಗಳೂರು ಮಧ್ಯದಲ್ಲಿ ಸೇರಿಕೊಳ್ತಾಇದ್ದಾರೆ. ಎಲ್ಲೆಲ್ಲೂ ಉತ್ತರ ಭಾರತ, ಚೈನಿಸ್ ಹೋಟಲ್‌ಗಳು ಬರ್‍ತಾಇವೆ. ತುಃ ಇವೊತ್ತು ಯಾಕೆ ಏನೇನೊ ಯೋಚನೆಗಳು ಬರ್‍ತಾ ಇವೆ ಎಂದುಕೊಳ್ಳುವಷ್ಟರಲ್ಲಿ ಯಾವನೊ ಒಬ್ಬ ಮೋಟಾರ್ ಬೈಕ್‌ನಲ್ಲಿ ದಿಢೀರನೆ ಅಡ್ಡಬಂದುಬಿಟ್ಟ. ಇಬ್ಬರೂ ದುರುಗುಟ್ಟಿ ನೋಡಿಕೊಂಡರು.

''ಅರೆ ಮಿಂಚ ನೀನು....? ಅರೆ ಹರ್ಷ ನೀನಾ....? ಇಬ್ಬರು ಗಾಡಿಗಳನ್ನು ನಿಲ್ಲಿಸಿ ಒಬ್ಬರನ್ನೊಬ್ಬರು ತಬ್ಬಿಕೊಂಡರು. ''ನೀನು ತುಂಬಾ ಲಕ್ಕಿ ಕಣೊ ನಾನು ಅಷ್ಟು ವರ್ಷಗಳಿಂದ ಅವರತ್ತರ ಇದ್ದೀನಿ. ನನ್ನ ಮೇಲೆ ಅವರ ಕಣ್ಣು ಇನ್ನು ಬಿದ್ದಿಲ್ಲ ನೋಡು. ಅವರವರ ಅದೃಷ್ಟ. ನನಗೆ ನನ್ನಮಗಂದು ವಿದ್ಯೆ ಹತ್ತಲಿಲ್ಲ ನೋಡು. ಒಂದ್ನೆದನೇ ಕ್ಲಾಸೊ, ಆರನೆ ಕ್ಲಾಸೋ ಓದಿದ್ದರೆ ಎಲ್ಲಾರ್‍ನ ಆಡಿಸಿಬಿಡ್ತಿದ್ದೆ. ಮಿಂಚ ತನ್ನ ಬಗ್ಗೆ ಹೇಳುತ್ತಿದ್ದಂತೆ, ''ಎಲ್ಲಾ ನಿನ್ನಿಂದಾನೆ ಕಣೊ. ನನಗೆ ಸೀಟು ಸಿಕ್ಕುವುದಕ್ಕೆ ನೀನೆ ಕಾರಣ. ನಾನುಯಾರ್‍ಯಾರ್ರೊ ಬೇಡಿಕೊಂಡೆ. ಎಲ್ಲರೂ ಇಷ್ಟು ಹಣ ಕೊಟ್ಟರೆ ಸೀಟು ಕೊಡಿಸ್ತೀವಿ ಅಂತ ಹೇಳಿದವರೆ. ಅದೇನೊ ಅದೃಷ್ಟ ನೀನು ಕರೆದುಕೊಂಡ್ಹೋದೆ, ನಾನು ಕೇಳಿಬಿಟ್ಟೆ . ಅವರು ಹ್ಞು..... ಆಯಿತು ಅಂದರು ಅಷ್ಟೆ'' ಹರ್ಷನ ಮಾತಿಗೆ ಮಿಂಚ ''ಆಗೋಯಿತು'' ಎಂದು ಸೇರಿಸಿದ.

''ಮೊದಲು ನಡಿಯೊ ಅವರಿಗೆ ಥ್ಯಾಂಕ್ಸ್ ಹೇಳಿಬಿಡ್ತೀನಿ. ಆಮೇಲೆ ಮಿಕ್ಕಿದ ಕೆಲಸ'' ಹರ್ಷ ಗಾಡಿ ಏರುತ್ತಿದ್ದಂತೆ ''ನಾನು ವಿಷಯ ತಿಳಿದು ನಿನ್ನತ್ತಿರಕ್ಕೆ ಬರ್‍ತಾ ಇದ್ದೆ. ನನ್ನ ಗಾಡಿ ಯಾಕೊ ಸ್ವಲ್ಪ ಟ್ರಬಲ್ ಕೊಡ್ತಾ ಇದೆ. ಇರು, ಇಲ್ಲೆ ಗ್ಯಾರೇಜ್‌ನಲ್ಲಿ ಬಿಟ್ಟು ಬರ್‍ತೀನಿ. ಬರುವಾಗ ತೆಗೆದುಕೊಂಡ್ಹೋಗ್ತೀನಿ'' ಎಂದ ಮಿಂಚ ಗಾಡಿಯನ್ನು ಅಲ್ಲೆ ಇದ್ದ ಗ್ಯಾರೇಜಿನಲ್ಲಿ ಬಿಟ್ಟುಬಂದ. ಇಬ್ಬರು ಹರ್ಷನ ಗಾಡಿ ಏರಿ ಹೊರಟರು.

''ಈಗ ಹಣಕ್ಕೇ ಏನೊ ಮಾಡೊದು....?'' ಹರ್ಷ ಪ್ರಶ್ನಿಸಿದ. ಹಣಕ್ಕೇನು....? ಅದಕ್ಕದೇ ಬರುತ್ತೆ ಬಿಡೊ.... ಎಷ್ಟೊ ಜನ ಹಣ ವಸೂಲಿ ಮಾಡಿ,

ಸೋತರು ಸರಿ, ಗೆದ್ದರು ಸರಿ ಅರ್ಧ ಸುತ್ತಿಬಿಡ್ತಾರೆ. ನೀನು ಯಾಕೆ ಯೋಚನೆ ಮಾಡ್ತೀಯಾ....? ನಡಿ'' ಮಿಂಚ ಹೇಳಿದ. ''ಅಣ್ಣನ್ನ ಕೇಳಿದರೆ ಹೇಗೆ....?'' ಅವರ್ನ ಕೇಳೊದು ಬೇಡ. ಅವರೆ ಕೊಟ್ಟರೆ ತೆಗೆದುಕೊ ಇಲ್ಲ ಅಂದರೆ ಬಂದುಬಿಡು. ಮೊದಲು ಅವರನ್ನ ಭೇಟಿಯಾಗಿ ವಿಷಯ ತಿಳಿಸೋಣ ನಡಿ'' ಇಬ್ಬರು ಹೊರಟರು.

ಅದೆ ಮನೆ. ಗೂರ್ಖಾ ಅವರನ್ನು ಒಳಕ್ಕೆ ಬಿಟ್ಟ. ಹರ್ಷ ಒಳಕ್ಕೆ ನಡೆದುಬಂದು ಒಂದು ಕಡೆ ನಿಂತುಕೊಂಡ. ಅಲ್ಲಿದ್ದವನು ಹರ್ಷನನ್ನು ಸರಿಯಾಗಿ ಕ್ಯಾಮಾರ ಮುಂದೆ ನಿಂತುಕೊಳ್ಳುವಂತೆ ಹೇಳಿದ. ಹರ್ಷ ಮುಖವನ್ನು ನೇರವಾಗಿ ಇಟ್ಟು, ಮಿಲ್ಟ್ರಿಯೋಥ ನಿಂತುಕೊಂಡಂತೆ ನಿಂತುಕೊಂಡ. ಅವನ ದೇಹ ಕಂಪಿಸುತ್ತಿತ್ತು.

''ಏನು ಹರ್ಷ ಚೆನ್ನಾಗಿದ್ದೀಯಾ....?'' ಆ ಕಡೆಯಿಂದ ಪ್ರಶ್ನೆ ಬಂದಿತು.

''ಚೆನ್ನಾಗಿದ್ದೀನಿ ಅಣ್ಣ. ತುಂಬಾ ಥ್ಯಾಂಕ್ಸ್ ಅಣ್ಣ. ನನಗೆ ಸೀಟು ಕೊಡಿಸಿದ್ದಕ್ಕೆ. ನಾನು ಸಾಯೊವರೆಗೆ ಮರೆಯೊದಿಲ್ಲ ನಿಮ್ಮನ್ನ'' ಎನ್ನುತ್ತಿದ್ದಂತೆ ''ಓಕೆ, ಓಕೆ, ನಾನು ಬಿಜೆಯಾಗಿದ್ದೀನಿ. ಒಂದೆರಡು ದಿನ ಬಿಟ್ಟು ಬಂದು ನೋಡು'' ಸ್ಪೀಕರ್ ಸಂಪರ್ಕ ಕಡಿದುಕೊಂಡಿತು. ''ಆಯಿತು ಅಣ್ಣ'' ಹರ್ಷ ಹಿಂದಕ್ಕೆ ಸರಿದು ನಿಂತುಕೊಂಡ.

ಮಿಂಚ ಮತ್ತು ಹರ್ಷ ಅಲ್ಲಿಂದ ಗಾಡಿ ಏರಿ ಹಿಂದಕ್ಕೆ ಹೊರಟರು. ಅಲ್ಲಿಂದ ಬಂದು ಒಂದು ಹೋಟಲು ಮುಂದೆ ಗಾಡಿ ನಿಲ್ಲಿಸಿ ಹೋಟಲ್ ಒಳಕ್ಕೆ ಹೋಗುತ್ತಿದ್ದಂತೆ ''ಇಲ್ಲೆ ಆ ಮನೆಯಲ್ಲಿ ಒಂದು ಹುಡುಗೀನ ತೆಗೆದುಬಿಟ್ಟರು ನನ್ನ ಮಕ್ಕಳು'' ಮಿಂಚನ ಬಾಯಿಂದ ಆ ಮಾತುಗಳು ಬಂದಿದ್ದೆ ಏನೊ ಯೋಚಿಸುತ್ತಿದ್ದ ಹರ್ಷ ಅವಕ್ಕಾಗಿ ಮಿಂಚನನ್ನೇ ನೋಡುತ್ತ ಇದ್ದುಬಿಟ್ಟ. ಕೆಲವು ಕ್ಷಣಗಳಾದ ಮೇಲೆ, ''ಏನಂದೆ....?'' ಗಾಬರಿಯಿಂದ ಪ್ರಶ್ನಿಸಿದ. ''ಇಲ್ಲೆ ಒಂದು ಮೆಡಿಕಲ್ ಸ್ಟೂಡೆಂಟ್ ಇದ್ದಳು ಆ ನನ್ನ ಮಕ್ಕಳು ಅವಳ್ನ ತೆಗೆದುಬಿಟ್ಟರು''. ಮಿಂಚ ಮತ್ತೆ ಹೇಳಿದ. ''ಲೊ ಮಿಂಚ ಅವಳು ನನ್ನ ಕ್ಲಾಸ್‌ಮೆಂಟ್ಟಾಗಿದ್ಲೊ ಪಾಪ'' ''ಹೌದಾ....?''

''ಯಾರೊ ಅವಳ್ನ ಸಾಯಿಸಿದ್ದು....?'' ಹರ್ಷ ಮಿಂಚನ ಕೈಗಳನ್ನು ಹಿಡಿದುಕೊಂಡು ಕೇಳಿದ. ಸುತ್ತಲು ನೋಡಿದ ಮಿಂಚ ''ಲೊ ಮೆತ್ತಗೆ ಮಾತನಾಡೊ ನಮಗ್ಯಾಕೊ ಅದೆಲ್ಲಾ. ಇಲ್ಲಿ ಅದನ್ನೆಲ್ಲಾ ಮಾತನಾಡೊದು ಬೇಡ ನಡಿ. ಮೊದಲು ಕಾಫಿ ಕುಡಿದು ಹೋಗೋಣ'' ಮಿಂಚ, ಹರ್ಷನನ್ನು ಒಳಕ್ಕೆ ಎಳೆದೊಯ್ದರು ಹರ್ಷ ಹೋಗಲಿಲ್ಲ. ಮಿಂಚನನ್ನು ಪಕ್ಕಕ್ಕೆ ಎಳೆದುಕೊಂಡೋದ ಹರ್ಷ ''ನಿನಗೆ ಗೊತ್ತ ಯಾರೂ ಅಂತ....?'' ''ಯಾಕ್ ಗೊತ್ತಿಲ್ಲ ....? ನಮಗ್ಯಾಕೆ ಅದೆಲ್ಲ...?'' ಮಿಂಚನ ಮಾತಿಗೆ ''ಲೊ ಗೊತ್ತಿದ್ದರೆ ಹೇಳೊ ನಾನೇ ಹೋಗಿ ಪೊಲೀಸ್

ಠಾಣೆಯಲ್ಲಿ ಹೇಳ್ತೀನಿ. ನನ್ನ ಕ್ಲಾಸ್‌ಮೆಟ್ ಕಣೊ ಅವಳು.'' ''ಲೊ ನಿನ್ನಬ್ಬ! ನಿನಗೆ ತಲೆಗಿಲೆ ಕೆಟ್ಟೋಗಿದೆಯ ಹೇಗೆ....? ನಾವೇನಾದರು ಪೊಲೀಸರ ಹತ್ತಿರಕ್ಕೆ ಹೋದರೆ ಇನ್ನು ಇಪ್ಪತ್ತು ಕೊಲೆ ಕೇಸುಗಳ್ನ ನಮ್ಮ ತಲೇಗೆ ಕಟ್ಟಾಕಿ ಪರ್ಮನೆಂಟಾಗಿ ಜೈಲಿಗೆ ತಳ್ಳಿಬಿಡ್ತಾರೆ. ಯಾರ ಸಹವಾಸನಾದರು ಮಾಡಬಹುದು. ಆ ನನ್ನ ಮಕ್ಕಳ ಸಹವಾಸ ಮಾತ್ರ ಬೇಡ'' ಮಿಂಚ, ಹರ್ಷನನ್ನು ಬಲವಂತವಾಗಿ ಎಳೆದುಕೊಂಡು ಹೋಟಲಿನ ಒಳಕ್ಕೆ ಹೋದ. ಹರ್ಷನ ಮುಖ ಭೀತಿಯಿಂದ ಕೆಂಪಾಗಿಹೋಗಿತ್ತು. ಇಬ್ಬರು ಕಾಫಿ ಕುಡಿದು ಹೊರಗಡೆಗೆ ಬಂದರು. ಚುನಾವಣೆಗೆ ಕೇವಲ ಎರಡು ವಾರಗಳು ಮಾತ್ರ ಉಳಿದಿದ್ದವು.

ಬೆಂಗಳೂರು ಮಹಾನಗರ ಪಾಲಿಕೆ ಚುನಾವಣೆಯಲ್ಲಿ ಹರ್ಷನಿಗೆ ಕಾರ್ಪೊರೇಟರಿಗೆ ಸೀಟು ಸಿಕ್ಕಿದ ವಿಷಯ ಅವನ ಬಡಾವಣೆಯಲ್ಲಿ ತಿಳಿದಿದ್ದೆ ತಡ, ಅವನ ಮನೆ ಮುಂದೆ ಜನ ಜಮಾಯಿಸತೊಡಗಿದರು. ಆಟೋಗಳು, ಕಾರುಗಳು ಮನೆ ಮುಂದೆ ಬಂದು ನಿಂತುಕೊಂಡವು. ಪೋಸ್ಟರುಗಳನ್ನು ಯಾರೊ ಮುದ್ರಿಸಿದರು, ಬ್ಯಾನರುಗಳನ್ನು ಯಾರೊ ಕಟ್ಟಿದರು. ಕರಪತ್ರಗಳನ್ನು ಯಾರೊ ಮುದ್ರಿಸಿ ಯಾರೊ ಹಂಚಿದರು. ಆಟೋಗಳಲ್ಲಿ ಸ್ಪೀಕರುಗಳನ್ನು ಕಟ್ಟಿಕೊಂಡು ಯಾರ್‍ಯಾರೊ ಓಡಾಡಿದರು. ಅವನಿಗೆ ಒಂದೂ ತಿಳಿಯಲಿಲ್ಲ. ಹಣವನ್ನು ಯಾರ್‍ಯಾರು ಕೊಟ್ಟರು....? ಎಷ್ಟು ಖರ್ಚಾಯಿತು....? ಒಂದೂ ಗೊತ್ತಾಗಲಿಲ್ಲ. ಆದರೆ ಕೊನೆಯ ದಿನದವರೆಗೂ, ಚುನಾವಣೆ ಮುಗಿದು ಫಲಿತಾಂಶ ಬರುವವರೆಗೂ ಅವನು ನಿದ್ದೆ ಮಾಡಲಿಲ್ಲ.

ಕೊನೆಗೆ ಒಂದು ದಿನ ಫಲಿತಾಂಶ ಬಂದೂ ಆಯಿತು. ಹರ್ಷ ಚುನಾವಣೆಯಲ್ಲಿ ಗೆದ್ದೂ ಆಗಿತ್ತು. ಹರ್ಷ ರಾಜಕೀಯ ಪಕ್ಷದಲ್ಲಿ ಸೇರಿ ಹೋಗಿದ್ದ. ಬೆಂಗಳೂರು ಮಹಾಪಿತೃರ ಆಯ್ಕೆಯಲ್ಲಿ ಅವನ ಓಟು ಬಹಳ ಮಹತ್ವದ ಸ್ಥಾನವನ್ನು ಪಡೆದುಕೊಂಡಿತ್ತು. ಅಂತೂ ಹರ್ಷ ಕೇವಲ ಎರಡು ಮೂರು ವರ್ಷಗಳಲ್ಲಿ ತನ್ನ ಲೆಕ್ಕಾಚಾರದಂತೆ ರಾಜಕೀಯದಲ್ಲಿ ಒಂದು ಸ್ಥಾನವನ್ನು ಗಿಟ್ಟಿಸಿಕೊಂಡುಬಿಟ್ಟಿದ್ದ. ಎಲ್ಲಾ ಮುಗಿದ ಮೇಲೆ ತನ್ನ ಬಡಾವಣೆಯ ಅಭಿವೃದ್ಧಿಗೆ ಇನ್ನಷ್ಟು ಮುತುವರ್ಜಿಯನ್ನು ವಹಿಸತೊಡಗಿದ.

ಹರ್ಷ ಗೆದ್ದ ದಿನ ಬಡಾವಣೆಯಲ್ಲಿ ಮೆರವಣಿಗೆ ಹೊರಟುಬಂದಿದ್ದ. ಒಂದೆರಡು ದಿನಗಳಾದ ಮೇಲೆ ಒಂದಿಬ್ಬರು ಸ್ನೇಹಿತರ ಜೊತೆಗೆ ಪ್ರತಿಯೊಂದು ಮನೆಗೂ ಹೋಗಿ ಧನ್ಯವಾದಗಳನ್ನು ತಿಳಿಸಿ ಬಂದಿದ್ದ. ಅನಂತರ ಒಂದು ವಾರದ ನಂತರ ಅಮರನಾಥ, ನಿತಿನ್ ಮತ್ತು ಸವ್ಯ ಇನ್ನಿತರ ಗೆಳೆಯರನ್ನು ಕರೆದು ವಿಶೇಷವಾಗಿ ಪಾರ್ಟಿಕೊಟ್ಟಿದ್ದ.

ಚುನಾವಣೆಯಲ್ಲಿ ಅಮರನಾಥ, ನಿತಿನ್ ಮತ್ತು ಸವ್ಯ ಮೂರ್‍ನಾಲ್ಕು ದಿನಗಳು ಹಗಲು ರಾತ್ರಿಯೆನ್ನದೆ ಪ್ರಚಾರದಲ್ಲಿ ತೊಡಗಿದ್ದರು.

ಅಂತಿಮ ವರ್ಷದ ಪರೀಕ್ಷೆಗಳು ಹತ್ತಿರ ಬರುತ್ತಿರುವುದರಿಂದ ಕೃತಿಕಾ, ರೂಪ ಮತ್ತು ಕಮಲಾ ಮೂವರು ಹಾಸ್ಟೆಲಿನಲ್ಲಿ ಕುಳಿತುಕೊಂಡು ಓದಿಕೊಳ್ಳುತ್ತಿದ್ದರು. ಮಧ್ಯ ಮಧ್ಯ ಬೋರಾದಾಗ ತಮ್ಮ ಸೌಂದರ್ಯದ ಬಗ್ಗೆ ಕೊಚ್ಚಿಕೊಳ್ಳುತ್ತಿದ್ದರು. ಕೃತಿಕಾಳ ನೀಳ ಮೂಗು, ರೂಪಾಳ ದುಂಡು ದುಂಡಾದ ಕೆಂಪು ಕೆನ್ನೆಗಳು ಮತ್ತು ಕಮಲಾಳ ತುಟಿಗಳು, ಆ ಕಾಲೇಜಿನಲ್ಲಿಯೆ ಯಾರಿಗೂ ಇಲ್ಲ ಎನ್ನುವುದು ಅವರ ವಾದ. ಎಲ್ಲರೂ ಎಲ್ಲವನ್ನು ಹೊಗಳುವುದರಿಂದ ಅವರ ನಡುವೆ ಯಾವುದೇ ಕೋಪ ತಾಪಗಳಿರಲಿಲ್ಲ.

ಇತ್ತೀಚಿನ ಮಾಡಲ್‌ಗಳ ಬಗ್ಗೆ ಅವರ ಮಾತುಗಳು ಹೊರಳಿದವು. ಕಮಲಾ ಅಮೆರಿಕಾದ ನೀಗ್ರೊ ಮಾಡಲ್‌ಗಳ ಬಗ್ಗೆ ಮಾತನಾಡಿದರೆ, ರೂಪ ಇಂಡಿಯನ್ ಮಾಡಲ್‌ಗಳ ಬಗ್ಗೆ ಮಾತನಾಡುತ್ತಿದ್ದಳು. ''ಈ ವರ್ಷ ನಮ್ಮ ದೇಶದ ಮಾಡಲ್ ನೋಡಲು ಸುಂದರವಾಗಿದ್ದರು, ಭುವನಸುಂದರಿ ಸ್ಪರ್ಧೆಯಲ್ಲಿ ಅಂತಿಮ ಘಟ್ಟವನ್ನೇ ತಲುಪಲಿಲ್ಲ ಏಕೆ....? ಕಳೆದ ವರ್ಷ ನೋಡಲು ಏನೇನೂ ಚೆನ್ನಾಗಿಲ್ಲದ ಹುಡುಗಿ ಭುವನಸುಂದರಿಯಾಗಿ ಬಿಟ್ಟಳಲ್ಲ ....? ಸೌಂದರ್ಯ ಅನ್ನುವುದು ನೋಡುವವರ ಕಣ್ಣಲ್ಲಿ ಇರುತ್ತದೆ '' ಎಂದಳು ಕಮಲ. ''ಅಂತಿಮ ವರ್ಷದ ಪರೀಕ್ಷೆಗಳು ಮುಗಿದ ಮೇಲೆ ಎಲ್ಲರೂ ಬೇರೆ ಬೇರೆ ಹೋಗಿಬಿಡುತ್ತಾರೆ. ಈ ಕಾಲೇಜು ಜೀವನ ಇಷ್ಟು ಬೇಗನೆ ಮುಗಿದುಹೋಗುತ್ತೆ ಅಂತ ಅಂದುಕೊಂಡಿರಲಿಲ್ಲ . ಇನ್ನು ಒಂದು ವರ್ಷ ಹೌಸ್ ಸರ್ಜನ್. ಯಾರ್‍ಯಾರಿಗೆ ಯಾವ ಆಸ್ಪತ್ರೆಯಲ್ಲಿ ಹೌಸ್ ಸರ್ಜನ್ ದೊರಕುತ್ತದೊ...... ಆಗ ನಾವೆಲ್ಲ ಒಂದು ಕಡೆ ಇರುವುದಿಲ್ಲ'' ಎಂದಳು ಕೃತಿಕಾ.

''ಹೌದು ಕಣೆ ನಿನ್ನ ಮದುವೆ ಬಗ್ಗೆ ನಿಮ್ಮ ಮನೆಯಲ್ಲಿ ಏನು ಹೇಳ್ತಾರೆ....? ನಿನ್ನ ಫ್ರೆಂಡ್‌ನೆ ಮದುವೆ ಮಾಡಿಕೊಳ್ತೀಯಾ....'' ಕೃತಿಕಾ, ಕಮಲಾದಾಸಳನ್ನು ಪ್ರಶ್ನಿಸಿದಳು. ''ಹೌದು ಮತ್ತೆ ಇನ್ಯಾರನ್ನ ಮಾಡಿಕೊಳ್ತೀನಿ....? ನಮ್ಮ ಮನೆಯಲ್ಲಿ ಆಗಲೆ ಹೇಳಿಬಿಟ್ಟಿದ್ದೀನಿ. ನಮ್ಮ ಮನೆಯವರು ಒಪ್ಪಿಕೊಂಡಿದ್ದಾರೆ. ಅವನ ಮನೆಯವರು ಒಪ್ಪಿಕೊಂಡಿದ್ದಾರೆ. ಹೌಸ್ ಸರ್ಜನ್ ನಡಿತಾ ಇರುವಾಗಲೆ ಮದುವೆಯಾದರು ಆಗಿಬಿಡಬಹುದು'' ಕಮಲಾ ನಾಳೆಯೆ ಮದುವೆ ನಡೆಯುವಂತೆ ನಾಚಿಕೆ ಪಡುತ್ತ ಹೇಳಿಕೊಂಡಳು.

''ಗಂಡ ಕಂಪ್ಯೂಟರ್ ಇಂಜಿನಿಯರ್. ಪತ್ನಿ ಡಾಕ್ಟರು. ಲಕ್ಕಿ ಕಣೆ ನೀನು. ಅಮೆರಿಕಾದಿಂದ ಯಾವಾಗ ಬರ್‍ತಾನೆ ನಿನ್ನ ಫ್ರೆಂಡ್....?'' ''ಅವನಿಗೇನು ಕರೆದಾಗ

ಬಂದುಬಿಡ್ತಾನೆ. ಈ ಸಲ ಬಂದರೆ ಮದುವೆ ಮಾಡಿಕೊಂಡೆ ಹೋಗ್ತೀನಿ ಅಂತ ಹೇಳಿಹೋಗಿದ್ದಾನೆ. ಇನ್ನು ಗ್ರೀನ್ ಕಾರ್ಡ್ ಸಿಕ್ಕಿಲ್ಲ. ಇನ್ನೆರಡು ತಿಂಗಳಲ್ಲಿ ಸಿಕ್ಕಿಬಿಡುತ್ತಂತೆ. ಅವನಿಗೆ ಗ್ರೀನ್ ಕಾರ್ಡ್ ಸಿಕ್ಕಿಬಿಟ್ಟರೆ ಆಮೇಲೆ ನನಗೂ ಪ್ಲೈ ಆಗೊದಕ್ಕೆ ಈಜಿ ಆಗಿಬಿಡುತ್ತೆ. ಅದಕ್ಕೆ ಬೇಗನೆ ಮದುವೆ ಮಾಡಿಕೊಂಡುಬಿಟ್ಟರೆ ನೊಂದಣಿ ಮಾಡಿಬಿಡಬಹುದು ಅಂತ ಹೇಳ್ತಾ ಇದ್ದಾನೆ'' ಕಮಲಾ ರೆಕ್ಕೆಬಿಚ್ಚಿ ಆಕಾಶದಲ್ಲಿ ಹಾರಾಡುತ್ತಿರುವುದನ್ನು ಕೃತಿಕಾ ಮತ್ತು ರೂಪ ಅಸೂಯೆದಿಂದ ನೊಡುತ್ತಿದ್ದರು.

''ನಿನ್ನ ಮದುವೆ ಬಗ್ಗೆ ಏನು ಹೇಳ್ತಾರೆ ನಿಮ್ಮ ಮನೆಯಲ್ಲ....?'' ಈಗ ಕಮಲಾ, ರೂಪಾಳನ್ನು ಪ್ರಶ್ನಿಸಿದಳು. ''ನನ್ನದು ಏನೂ ಇಲ್ಲಪ್ಪ . ನಮ್ಮ ತಂದೆ ತಾಯಿ ಹೇಳಿದಂತೆ. ಎಲ್ಲಾ ಅವರಿಗೆ ಬಿಟ್ಟುಬಿಟ್ಟಿದ್ದೀನಿ. ಅವರು ಯಾರಿಗೆ ಮದುವೆ ಮಾಡ್ತಾರೊ ಅವರ್ನ ಮದುವೆ ಮಾಡಿಕೊಂಡು ಬಿಡ್ತೀನಿ'' ರೂಪ ಹೇಳುತ್ತಿದ್ದಂತೆ , ''ಎಲ್ಲರ್ದು ಸರಿ. ಈಗ ನನ್ನದೆ ಪ್ರಾಬ್ಲಂ.....? ನಾನಂತು ಅಮರನಾಥನನ್ನೇ ಮದುವೆ ಮಾಡಿಕೊಳ್ಳುವುದು. ಇಲ್ಲ ಅಂದರೆ ಮದುವೇನೆ ಮಾಡಿಕೊಳ್ಳುವುದಿಲ್ಲ '' ಕೃತಿಕಾ ಹೇಳುತ್ತಿದ್ದಂತೆ ''ಬಿಡು ಅನ್ನೆ. ಯಾಕ್ ಮದುವೆ ಆಗುವುದಿಲ್ಲ, ನಿಮ್ಮ ತಂದೆ ತಾಯಿ ಗ್ಯಾರಂಟಿ ಒಪ್ಪಿಕೊಳ್ತಾರೆ'' ರೂಪ ಹೇಳಿದಳು....''ಜಾತಿ ಒಂದು ಅಡ್ಡ ಬರುತ್ತಲ್ಲೆ....?'' ಕೃತಿಕಾ ನೊಂದು ಕೊಳ್ಳುವಂತೆ ಹೇಳಿದಳು. '' ಎಲ್ಲರೂ ಕ್ರಿಶ್ಚಿಯನ್ನಾಗಿ ಕನ್‌ವರ್ಟ್ ಆಗಿಬಿಡಿ'' ಕಮಲಾ ನಗುತ್ತಾ ಹೇಳಿದಳು. ಕೃತಿಕಾ ಮತ್ತು ರೂಪ ಇಬ್ಬರು ಕಮಲಾ ಕಡೆಗೆ ನೊಡಿದರು. ಕಮಲಾ ''ಸಾರಿ'' ಎಂದಳು. ''ಅದಕ್ಕೇಕೆ ಸಾರಿ....?'' ಕೃತಿಕಾ ಹೇಳಿದಳು.

''ನೀನು ನಿಮ್ಮ ಮನೆಯಲ್ಲಿ ಮೊದಲೆ ತಿಳಿಸಿಬಿಡಬೇಕಾಗಿತ್ತು '' ಕಮಲಾ ಹೇಳಿದಳು. ''ಈಗ ಅದೆಲ್ಲಾ ಯಾಕೆ....? ಪರೀಕ್ಷೆಗಳು ಮುಗಿಯಲಿ. ಮೊದಲು ಓದುವುದರ ಕಡೆ ಗಮನ ಕೊಡೋಣ'' ಕೃತಿಕಾ ಹೇಳಿದಳು. ''ಅಮರ್ ಮನೆಯಲ್ಲಿ ಏನು ಹೇಳ್ತಾರಂತೆ...?'' ''ನಾನು ಕೇಳಿಲ್ಲ. ಅಂತಹ ಪರಿಸ್ಥಿತಿ ಬಂದರೆ ಅಮರನಾಥ್‌ನ ಕರೆದುಕೊಂಡೋಗಿ ನಮ್ಮ ತಂದೆ ತಾಯಿ ಮುಂದೆ ನಿಲ್ಲಿಸಿಬಿಡ್ತೀನಿ'' ಕೃತಿಕಾ ಹೇಳಿದ ರೀತಿಗೆ ಅವಕ್ಕಾದ ರೂಪ ''ನಿಮ್ಮ ಅಪ್ಪ ಅಮ್ಮ ಶಾಕ್ ಆಗಿಬಿಟ್ಟರೆ....?''ಅಂತಹ ವಿಷಯಾನ ಅದೇ ರೀತಿ ಹೇಳಬೇಕು. ಸುಮ್ಮನೆ ನ್ಯಾಗ್ ಮಾಡಬಾರದು.'' ಕೃತಿಕಾ ಮತ್ತೊಮ್ಮೆ ದೃಢವಾಗಿ ಹೇಳಿದಳು.

ಮತ್ತೆ ಏನೊ ಯೋಚಿಸುತ್ತ ''ನಮ್ಮ ತಂದೆಗೆ ಡಾಕ್ಟರಿಗೆ ಕೊಟ್ಟು ಮದುವೆ ಮಾಡಬೇಕು ಅಂತ ಆಸೆ ಇದೆ. ಜೊತೆಗೆ ಬೆಂಗಳೂರಿನಲ್ಲಿ ಒಂದು ನರ್ಸಿಂಗ್ ಹೋಂ

ಹಾಕಿಸಿಕೊಡ್ತೀನಿ ಅಂತಾಸು ಹೇಳಿದ್ದಾರೆ'' ಕೃತಿಕಾ ಹೇಳಿದಳು. ''ಹಾಗಾದರೆ ನೀನು ಬಾರಿ ಬುದ್ಧಿವಂತೆ ಕಣೆ. ಎಲ್ಲಾನ್ನೂ ಯೋಚನೆ ಮಾಡೀನೆ ಮಾಡಿದ್ದೀಯಾ....? ಇಬ್ಬರು ಬೆಂಗಳೂರಿನಲ್ಲೆ ಇರಬಹುದು. ಅಮರನಾಥ ಒಳ್ಳೆ ಚಾಯ್ಸ್. ಒಳ್ಳೆ ಫ್ರೆಂಡ್. ಒಳ್ಳೆ ಸಹೋದ್ಯೋಗಿ. ಒಳ್ಳೆ ಗಂಡ ಎಲ್ಲಾನು ಒಟ್ಟಿಗೆ ಸಿಕ್ಕಿದಂತಾಗುತ್ತೆ....?'' ಕಮಲಾ ಮಾತಿಗೆ ''ನನಗೆ ಈ ವಿಷಯ ಗೊತ್ತೆ ಇಲ್ಲ'' ಎಂದಳು ಕೃತಿಕಾ. ''ನಿನಗೆ ಗೊತ್ತು'' ರೂಪ ಹೇಳಿದಳು. ಈಗ ಎಲ್ಲರೂ ನಕ್ಕರು.

''ಬರಿ ಮಾತೆ ಆಗೋಯಿತು, ಸುಮ್ಮನೆ ಓದಿಕೊಳ್ಳಿ'' ಕೃತಿಕಾ ಪುಸ್ತಕದ ಕಡೆಗೆ ತಿರುಗಿಕೊಂಡಳು. ರೂಪ ಮತ್ತು ಕಮಲಾ ಇಬ್ಬರಿಗೂ ಇನ್ನು ಮಾತನಾಡಬೇಕೆನಿಸಿದರು ವಿಧಿ ಇಲ್ಲದೆ ಪುಸ್ತಕದ ಮೇಲೆ ಕಣ್ಣುನೆಟ್ಟರು.

* * *

ಅಮರನಾಥ, ನಿತಿನ್ ಮತ್ತು ಸವ್ಯ , ಮೂವರು ಸವ್ಯನ ಮನೆಯಲ್ಲಿ ಕುಳಿತುಕೊಂಡು ಓದಿಕೊಳ್ಳುತ್ತಿದ್ದರು. ಮಧ್ಯ ಮಧ್ಯ ಹೊರಗೆ ಹೋಗಿ ಚಹಾ ಕುಡಿದು, ಸಿಗರೇಟ್ ಸೇದಿ ಬರುತ್ತಿದ್ದರು. ''ಈ ನನ್ನ ಮಗಂದು ಮೆಡಿಸನ್ ಓದಬಾರದಿತ್ತು. ಎಷ್ಟು ಅಂತ ಓದುವುದು....? ಕೊನೆ ಮೊದಲೆ ಬೇಡವೆ...? ಓದಿ ಓದಿ ತಲೆ ಕೆಟ್ಟೋಗಿದೆ '' ಅಮರನಾಥ ಹೇಳುತ್ತಿದ್ದಂತೆ ಮೆಡಿಕಲ್ ಓದದೆ ಇದ್ದಿದ್ದರೆ ಕೃತಿಕಾ ಎಲ್ಲಿ ಸಿಗ್ತಾ ಇದ್ಲು ನಿನಗೆ....?'' ಸವ್ಯ ಪ್ರಶ್ನಿಸಿದ. ''ಎಲ್ಲಾ ಸರಿ ಅವಳು ರಿಚ್ ಪ್ಯಾಮಿಲಿಯಿಂದ ಬಂದಿರೊಂದು ನನಗೆ ಹಿಡಿಸ್ತಾ ಇಲ್ಲವೊ'' ಅಮರನಾಥ ನಿರಾಶೆಯಾಗಿ ಹೇಳಿದ. ''ಇವನೇನೊ ಯಾವ ಫಿಲಾಸಫಿ ಮಾತಾಡ್ತಾ ಇದ್ದಿಯೊ....? ಎಲ್ಲರೂ ರಿಚ್ ಇನ್‌ಲಾಸ್ ಬೇಕಂತ ಸಾಯ್ತಾ ಇದ್ದರೆ ಇವನು ಇನ್‌ಲಾಸ್ ಬಡವರಾಗಿರಬೇಕು ಅಂತಾನೆ....?'' ನಿತಿನ್ ಮಾತಿಗೆ ''ಮನುಷ್ಯರು ಬೈ ಹಾರ್ಟ್ ರಿಚ್ಚಾಗಿ ಇರಬೇಕು. ಪ್ರಾಪರ್ಟಿ ಇವೊತ್ತು ಇರುತ್ತೆ ನಾಳೆ ಹೋಗುತ್ತೆ'' ಅಮರನಾಥ ಹೇಳಿದ.

''ಲೋ ಮಾರಾಯ..... ನೀನು ಮಹಾತ್ಮಗಾಂಧಿ ಜಮಾನದಲ್ಲಿ ಹುಟ್ಟಬೇಕಾಗಿತ್ತು. ಇದು ಇಪ್ಪತ್ತೊಂದನೆ ಶತಮಾನ'' ನಿತಿನ್ ಹೇಳಿದ. ''ನಾನಂತು ಯಾವುದಾದರು ಹಳ್ಳಿಗೋಗಿ ಸೆಟ್ಲ್ ಆಗಿಬಿಡ್ತೀನಿ. ದಿನಕ್ಕೊಂದು ಹಳ್ಳಿ ವಿಸಿಟ್ ಮಾಡಿ ಹಳ್ಳಿ ಜನರಿಗೆ ಟ್ರೀಟ್‌ಮೆಂಟ್ ಮಾಡ್ತೀನಿ'' ಅಮರನಾಥ ದೃಢವಾಗಿ ನಿಶ್ಚಯಿಸಿಕೊಂಡಂತೆ ಹೇಳಿದ. ''ಲೋ ಅಮರ್ ಸ್ವಲ್ಪ ಕೂಲಾಗಿ ಯೋಚನೆ ಮಾಡು. ಹಳ್ಳಿಯಲ್ಲಿ ಏನಿದೆ ಅಂತ ಹೋಗ್ತೀಯಾ....? ಕುಡಿಯೋಕೆ ನೀರು ಇರುವುದಿಲ್ಲ, ಕರಂಟ್ ಇರುವುದಿಲ್ಲ....?'' ಸವ್ಯನ ಮಾತುಗಳ ಮಧ್ಯದಲ್ಲೆ ''ಎಲ್ಲಾ ಹಳ್ಳಿಯಲ್ಲೇ

ಇರುವುದು. ಪಟ್ನದಲ್ಲಿ ಏನಿದೆ....? ಅವರು ಕಷ್ಟಪಟ್ಟು ಬೆಳೆದರೇನೆ ನಾವೆಲ್ಲ ತಿನ್ನೋದು. ಹಳ್ಳಿಗಳು ಚೆನ್ನಾಗಿದ್ದರೇನೆ ದೇಶ ಚೆನ್ನಾಗಿರುವುದು. ಮಹಾತ್ಮಗಾಂಧೀನ ಇವೊತ್ತು ಎಲ್ಲಾ ಯಾಕ್ ನೆನೆದುಕೊಳ್ತಾರೆ....?ಬಾಬಾ ಅಮಟೇನ ಯಾಕ್ ನೆನೆದುಕೊಳ್ತಾರೆ....? ರಾಜಸ್ಥಾನದಲ್ಲಿ ರಾಜೇಂದ್ರ ಸಿಂಗ್‌ನ ಯಾಕ್ ನೆನೆದುಕೊಳ್ತಾರೆ....? ಎಲ್ಲರೂ ನಮ್ಮ ತರಹಾನೆ ಯೋಚನೆ ಮಾಡಿದ್ದರೆ ನಮ್ಮ ದೇಶ ಇವೊತ್ತು ಇರೋ ರೀತಿಯಲ್ಲೂ ಇರ್ತಾ ಇರಲಿಲ್ಲ'' ಅಮರನಾಥನ ಮಾತುಗಳನ್ನೇ ಕೇಳುತ್ತಿದ್ದ ನಿತಿನ್ ಮತ್ತು ಸವ್ಯ ಮೊದಲ ಬಾರಿಗೆ ಅವನ ಮಾತುಗಳಿಗೆ ಬೆರಗಾಗಿ ಪಿಳಿಪಿಳಿ ಕಣ್ಣುಬಿಟ್ಟು ನೋಡಿಕೊಂಡರು. ಅವರ ನಡುವೆ ಸ್ವಲ್ಪ ಹೊತ್ತು ಮೌನ ತಾಂಡವವಾಡುತ್ತಿತ್ತು.

''ಅಲ್ವೋ ನೀನು ಹಳ್ಳಿಗೋದರೆ ಕೃತಿಕಾ ನಿನ್ನ ಹಿಂದೆ ಬರ್ತಾಳೇನೊ?'' ನಿತಿನ್ ಸ್ವಲ್ಪ ಆಲೋಚಿಸಿ ಪ್ರಶ್ನಿಸಿದ. ಅದೆ ನನ್ನ ಪ್ರಶ್ನೆ....?'' ಅಮರನಾಥ ಹೇಳಿದ. ''ಈ ವಿಷಯಾನ ಯಾವಾಗಲಾದರು ಅವಳ ಜೊತೆ ಮಾತನಾಡಿದ್ದೀಯಾ....?'' ''ಇಲ್ಲ, ನಮ್ಮ ತಂದೆ ತಾಯಿ ಕೂಡ ಒಪ್ಪುತಾರೊ ಇಲ್ಲವೊ....?'' ''ಓ....ನೀನು ಬಾರಿ ತೊಂದರೆಯಲ್ಲಿ ಸಿಕ್ಕಾಕಿಕೊಳ್ತೀಯ. ನಿನಗೆ ನೀನೆ ಶಿಕ್ಷೆ ಮಾಡಿಕೊಳ್ತೀಯ...?'' ಎಂದ ಸವ್ಯ. ಅಮರನಾಥ ಕೆಲವು ಕ್ಷಣಗಳು ಮಾತು ಕಳೆದುಕೊಂಡವನಂತೆ ಸುಮ್ಮನಾದ.

''ನೋಡೊ ನನ್ನ ಮಾತು ಕೇಳು. ನೀನು ಹಳ್ಳಿಗೆ ಹೋಗೊ ವಿಚಾರಾನ ಬಿಟ್ಟುಬಿಡು. ಕೃತಿಕಾನ ಮದುವೆ ಮಾಡಿಕೊಂಡು ಬೆಂಗಳೂರಿನಲ್ಲೆ ಆರಾಮಗಿರು'' ಸವ್ಯ ಬುದ್ಧಿವಾದ ಹೇಳಿದ. ''ಲೋ ಅವನ್ ಬ್ರೈನ್‌ಗ್ಯಾಕೋ ಕೈ ಹಾಕ್ತೀಯಾ....? ಅದನ್ನು ಯೋಚಿಸುವುದಕ್ಕೆ ಇನ್ನು ಬಹಳ ದಿನ ಇದೆ. ಓದಿಕೊಳ್ಳೋಣ ನಡಿರೊ'' ನಿತಿನ್ ಹೇಳಿದ್ದೆ ಎಲ್ಲರೂ ಎದ್ದು ಮನೆಯ ಕಡೆಗೆ ಹೊರಟರು.

ಎಲ್ಲರೂ ಮನೆಯ ಒಳಗೆ ಬರುತ್ತಿದ್ದಂತೆ ಸವ್ಯನ ತಾಯಿ ''ಸವ್ಯ ನಿನ್ನ ಫ್ರೆಂಡ್ಸ್‌ನ ಕರೆದುಕೊಂಡು ಬಾರೊ ಊಟ ರೆಡಿಯಾಗಿದೆ '' ಎಂದಳು. ಮೂವರು ಕೈ ತೊಳೆದುಕೊಂಡು ಡೈನಿಂಗ್ ಟೇಬಲ್ ಮುಂದೆ ಕುಳಿತುಕೊಂಡರು. ಹುಡುಗರು ಹಗಲು ರಾತ್ರಿ ಓದುತ್ತಾರೆಂದು ಸವ್ಯನ ತಾಯಿ ವೆಜಿಟೇಬಲ್ ಪಲಾವ್ ಜೊತೆಗೆ ಆಲೂ ಹೂಕೋಸಾಕಿ ಕುರ್ಮಾ ಮಾಡಿದ್ದರು. ಪಲಾವ್ ಎಂದರೆ ಸವ್ಯ ಮೂರು ಹೊತ್ತು ತಿಂದುಬಿಡುತ್ತಿದ್ದ. ಮೂರು ತಟ್ಟೆಗಳಿಗೂ ಬಡಿಸುತ್ತ ನಿಧಾನವಾಗಿ ಆರಾಮಾಗಿ ಊಟಮಾಡಿ'' ಎಂದರು ಸವ್ಯನ ತಾಯಿ.

''ನಾವು ನಿಧಾನವಾಗಿ ಆರಾಮಾಗಿ ಜಾಸ್ತಿ ತಿನ್ನುತ್ತೀವಿ ಬಿಡಿ ಆಂಟಿ'' ನಿತಿನ್ ಮಾತಿಗೆ ಎಲ್ಲರೂ ನಕ್ಕರು. '' ಈ ವರ್ಷ ಕಷ್ಟಪಟ್ಟು ಚೆನ್ನಾಗಿ ಓದಿ, ಎಲ್ಲರೂ

ಡಿಸ್ಟಿಂಕ್ಷನ್‌ನಲ್ಲಿ ಪಾಸು ಮಾಡಿಬಿಡಿ'' ಸವ್ಯನ ತಾಯಿ ಹೇಳಿದಳು. ''ನೀವು ಇದೆ ತರಹ ಅಡಿಗೆ ಮಾಡಿ ಹಾಕ್ತಾ ಇರಿ ಆಂಟಿ. ಒಂದು....ಎರಡು....ಮೂರು ರ್‍ಯಾಂಕ್ಸ್ ನಮ್ಮದೆ '' ನಿತಿನ್ ಮಾತುಗಳಿಗೆ ಮತ್ತೆ ಎಲ್ಲರು ನಕ್ಕರು.

''ಹುಡುಗಿಯರು ಬಿಟ್ಟಬಿಡ್ತಾರೆನೋ ರ್‍ಯಾಂಕ್ಸ್....? ಪ್ರೊಫೆಸರ್ ಹುಡುಗಿಯರಿಗೆ ರ್‍ಯಾಂಕ್ಸ್ ಕೊಡಿಸುವುದಕ್ಕೆ ಪೈಪೋಟಿ ನಡಿಸ್ತಾ ಇದ್ದಾರೆ '' ಸವ್ಯನ ಮಾತುಗಳಿಗೆ ಅವನ ತಾಯಿ ನಗುತ್ತ ''ಬಾಯಿ ಮುಚ್ಚಿಕೊಂಡು ತಿನ್ನೊ. ಯಾರು ಚೆನ್ನಾಗಿ ಓದ್ತಾರೊ ಅವರಿಗೆ ರ್‍ಯಾಂಕ್ಸ್ ಕೊಡ್ತಾರೆ '' ಸವ್ಯನ ತಾಯಿ ಹೇಳಿದರು. ''ನಮ್ಮ ಅಮ್ಮನಿಗೆ ಏನೂ ಗೊತ್ತಿಲ್ಲ ಬಿಡ್ರೊ ಪಾಪ !'' ಸವ್ಯ ನಕ್ಕ.

ಸವ್ಯ ಮತ್ತು ನಿತಿನ್‌ಗೆ ಅಮರನಾಥನ ಮನೆಯಲ್ಲಿ ಮಾಡುವ ಮಟನ್ ಸಾರೆಂದರೆ ಎಲ್ಲಿಲ್ಲದ ಇಷ್ಟ. ಒಂದೆರಡು ಸಲ ಅಮರನಾಥ ಇಬ್ಬರನ್ನು ಕರೆದುಕೊಂಡೋಗಿ ಮಟನ್ ಸಾರಿನ ರುಚಿಯನ್ನು ತೋರಿಸಿದ್ದ . ಮಟನ್ ಸಾರು ತಿಂದಿದ್ದ ಸವ್ಯ ಯಾವುದೇ ಪರಿಸ್ಥಿತಿಯಲ್ಲೂ ಈ ವಿಷಯ ನಮ್ಮ ಮನೆಯಲ್ಲಿ ಗೊತ್ತಾಗಬಾರದೆಂದು ಅಮರನಾಥ ಮತ್ತು ನಿತಿನ್‌ಗೆ ತಾಕೀತು ಮಾಡಿದ್ದಾನೆ.

ನಿತಿನ್, ಸವ್ಯನ ಕಿವಿಯಲ್ಲಿ ಈಗ ಅದೇ ವಿಷಯವನ್ನು ಹೇಳಿದ. ಸವ್ಯ, ನಿತಿನ್‌ನನ್ನು ದುರುಗುಟ್ಟಿ ನೋಡಿದ. ಈಗ ಅಮರನಾಥನ ಕಿವಿಯಲ್ಲೂ ಹೇಳಿದ. ಅಮರನಾಥ ಸುಮ್ಮನೆ ಇರುವಂತೆ ನಿತಿನ್‌ಗೆ ಎಚ್ಚರಿಗೆ ನೀಡಿದ. ಸವ್ಯನ ತಾಯಿ ''ಏನು ವಿಷಯಾ ನನಗೂ ಹೇಳಿ. ನಾನು ಕೇಳಿಸಿಕೊಳ್ತೀನಿ'' ಎಂದರು. ''ಏನೂ ಇಲ್ಲ ಆಂಟಿ '' ನಿತಿನ್ ಮತ್ತೆ ನಕ್ಕ . ''ಇಲ್ಲ ನನಗೆ ಹೇಳ್ಳೇಬೇಕು'' ಸವ್ಯನ ತಾಯಿ ಹೇಳಿದಳು. ಮೂವರು ಒಬ್ಬರನ್ನೊಬ್ಬರು ನೋಡಿಕೊಂಡರು.

''ಏನೂ ಎಲ್ಲ ಆಂಟಿ ಸವ್ಯನ್ನ ಕಾಲೇಜಿನಲ್ಲಿ ನಾವೆಲ್ಲ ''ಮೋಗಲಿ'' ಅಂತ ಕರಿತೀವಿ'' ಎಂದು ನಕ್ಕ. ಆ ಮಾತಿಗೆ ಎಲ್ಲರಿಗೂ ನಗು ಬಂದಿತು. ''ಮೋಗಲಿ.....? ಅವನೇನು ಲಂಗೋಟಿ ಹಾಕಿಕೊಂಡಿದ್ದಾನ......'' ಎನ್ನುತ್ತಾ ಸವ್ಯನ ತಾಯಿ ಮತ್ತೊಮ್ಮೆ ನಕ್ಕಳು. ಜಂಗಲ್ ಜಂಗಲ್ ಪತಾಚಲ ಚೆಡ್ಡಿ ಪೇನ್‌ಕೆ ಪೂಲ್ ಕಿಲಾ..... ಎನ್ನುವ ಹಾಡು ಸವ್ಯನ ತಾಯಿಗೆ ಹೊಳೆದು ಏನೊ ಮರೆಮಾಚುತ್ತಿದ್ದಾರೆ ಎಂದು ಗೊತ್ತಾದರು ಆಕೆ ನಕ್ಕು ಸುಮ್ಮನಾದರು. ಮೂವರು ಊಟ ಮಾಡಿ ಓದಿಕೊಳ್ಳಲು ಸವ್ಯನ ಕೋಣೆಗೆ ಹೊರಟರು. ಸವ್ಯನ ತಾಯಿ ಒಳಗೊಳಗೆ ನಗುತ್ತ ಮೂವರು ಹೋಗುವುದನ್ನೇ ಹಿಂದೆ ನಿಂತು ನೋಡುತ್ತಿದ್ದರು.

✲ ✲ ✲

ಹರ್ಷ ಮತ್ತು ಮಿಂಚ ಇಬ್ಬರು ಕುಳಿತುಕೊಂಡು ಮಾತನಾಡುತ್ತಿದ್ದರು. ಅನುಳನ್ನು ಕೊಲೆ ಮಾಡಿರುವ ಗುಂಪು ಯಾವುದೆಂದು ಮಿಂಚನಿಗೆ ಗತ್ತಿರುವುದಾಗಿ ಹರ್ಷನಿಗೆ ತಿಳಿಸಿದ. ಈ ವಿಷಯವನ್ನು ಪೊಲೀಸರಿಗೆ ಹೇಗೆ ತಿಳಿಸುವುದು ಎನ್ನುವುದರ ಬಗ್ಗೆ ಮಾತುಕತೆ ನಡೆಸಿ ಯಾರಿಗೂ ಗೊತ್ತಾಗದಂತೆ ಒಂದು ಪತ್ರವನ್ನು ಬರೆದು ಪೊಲೀಸರಿಗೆ ತಲುಪಿಸುವುದಾಗಿ ನಿಶ್ಚಯಿಸಿಕೊಂಡರು. ಅದನ್ನು ಇಬ್ಬರೂ ಬರೆಯಬಾರದು ಬೇರೆಯಾರ ಕೈಯಲ್ಲಾದರು ಬರೆಸಿದರೆ ಮೂರನೆಯವನಿಗೆ ವಿಷಯ ತಿಳಿಯುತ್ತದೆ. ಸರಿ ಹರ್ಷನೆ ಎಡಗೈಯಲ್ಲಿ ಪತ್ರ ಬರೆದ. ಪತ್ರದ ಒಳಗೆಲ್ಲ ಕರ್ಚೀಪಿನಿಂದ ಒರೆಸಿ ಮುಚ್ಚಿ ಅಂಟಾಕಿ ಮೆತ್ತಿಸಿ, ಮೇಲೆ ಪೊಲೀಸ್‌ವಿಳಾಸ ಬರೆದು ಅದನ್ನು ಮತ್ತೆ ಕರ್ಚೀಪಿನಲ್ಲಿ ಒರೆಸಿ ಅವರಿರುವ ಬೆಂಗಳೂರಿನ ವಿರುದ್ಧ ದಿಕ್ಕಿನಲ್ಲಿ ಪೋಸ್ಟ್ ಮಾಡಿ ಬಂದರು.

ಬೆಂಗಳೂರಿನ ಪೊಲೀಸರು ಬಾರಿ ಚುರುಕು. ಆದರೆ ಅನು ಕೇಸನ್ನು ಬೇದಿಸಲಾಗಲಿಲ್ಲ. ಹತ್ತರಲ್ಲಿ ಒಂದೆರಡು ಕೇಸುಗಳು ನಿಗೂಢವಾಗಿಯೆ ಉಳಿದುಬಿಡುತ್ತವೆ. ಬಹಳಷ್ಟು ಕೇಸುಗಳು ತೆರೆದುಕೊಳ್ಳುವುದು ಬೇರೆ ಬೇರೆ ಗ್ಯಾಂಗುಗಳು ತಮಗೆ ವಿರುದ್ಧವಾದ ಗ್ಯಾಂಗ್‌ಗಳ ಬಗ್ಗೆ ಮಾಹಿತಿ ಕೊಡುವುದರಿಂದಲೆ. ಇನ್ನು ಕೆಲವು ಹತ್ಯಗಳು, ಹತ್ಯ ಮಾಡುವವರು ಬಿಟ್ಟು ಹೋಗುವ ಮಾಹಿತಿಗಳಿಂದ ಸಿಕ್ಕಿ ಹಾಕಿಕೊಳ್ಳುತ್ತಾರೆ.

ಇಲ್ಲಿ ಪೊಲೀಸ್ ಠಾಣೆಯಲ್ಲಿ ಅನು ಕೇಸಿಗೆ ಸಂಬಂಧಪಟ್ಟ ಯಾವುದೇ ಮಾಹಿತಿ ದೊರಕದೆ ಹೋಗಿ ಜಗನ್ಮೋಹನರಾವ್‌ನ ಮೊದಲನೆ ಹೆಂಡತಿಯ ಮಗನ ಚಟುವಟಿಕೆಗಳನ್ನು ನಿಗೂಢವಾಗಿ ಪರೀಕ್ಷಿಸಿ ನೋಡಿದರು. ಅವನ ಮೇಲೆ ಸಾಕಷ್ಟು ಗುಮಾನಿ ಬಂದರೂ ಯಾವುದೇ ಆಧಾರಗಳಿಲ್ಲದೆ ಅವನನ್ನು ತಪಾಷಣೆಗೆ ಒಳಪಡಿಸಲು ಹಿಂಜರಿದರು. ಅವನ ಹೆಸರಿನಲ್ಲಿ ಯಾವುದೇ ರೀತಿಯ ಹಣವು ದೊಡ್ಡ ಮೊತ್ತದಲ್ಲಿ ಚಲಾವಣೆಯಾಗಿರಲಿಲ್ಲ. ಅವನು ಆ ದಿನಗಳಲ್ಲಿ ಕೆಲಸಕ್ಕೆ ರಜೆಯೂ ಹಾಕಿರಲಿಲ್ಲ. ಮದ್ರಾಸಿನಿಂದ ಹಿಂದಕ್ಕೆ ಬಂದ ಪೊಲೀಸರು ಮತ್ತೆ ಅನು ಕೊಲೆಯಾಗಿದ್ದ ಮನೆಯ ಸುತ್ತಮುತ್ತಲು ಮಾಹಿತಿಗಾಗಿ ಹುಡುಕಾಡತೊಡಗಿದರು. ಒಂದು ಜನನಿಬಿಡ ಸ್ಥಳದಲ್ಲಿ ಕೊಲೆ ನಡೆದಿದ್ದರು, ಒಂದೇ ಒಂದು ಸಣ್ಣ ಕ್ಲೂ ಕೂಡ ದೊರಕಿರಲಿಲ್ಲ.

ಪೊಲೀಸ್ ಠಾಣೆಗೆ ಆ ದಿನ ಎಂದಿನಂತೆ ಡಾಕ್ ಬಂದಿತ್ತು. ಪೊಲೀಸ್ ಪೇದೆ ಒಂದೊಂದೆ ಪತ್ರವನ್ನು ಒಡೆದು ಟೇಬಲ್ ಮೇಲೆ ಇಡುತ್ತಿದ್ದಂತೆ ಸರ್ಕಲ್ ಇನ್ಸ್‌ಪೆಕ್ಟರ್ ಒಂದೊಂದೇ ಪತ್ರ ತೆಗೆದುಕೊಂಡು ಓದತೊಡಗಿದರು. ಹರ್ಷ ಎಡಗೈಯಲ್ಲಿ ಬರೆದಿದ್ದ ಪತ್ರ ಈಗ ಅವರ ಕಣ್ಣುಗಳ ಮುಂದೆ ಬಂದಿತು. ಪತ್ರದಲ್ಲಿದ್ದ ಎರಡು ವಾಕ್ಯಗಳನ್ನು

ಓದಿದ್ದೆ ಸಿ.ಐ. ತಲೆಗೆ ಒಂದು ಸಿಡಿಲು ಬಡಿದಂತಾಯಿತು. ಸಿ.ಐ. ಇಂಟರ್‌ಕಾಂ ಒತ್ತಿ ಪಕ್ಕದ ಕೋಣೆಯಲ್ಲಿದ್ದ ಎಸ್.ಐ.ನನ್ನು ಕೋಣೆಗೆ ಬರುವಂತೆ ಕರೆದರು. ಎಸ್.ಐ. ನೇರವಾಗಿ ಬಂದು ಸಿ.ಐ. ಎದುರಿಗೆ ಗುಂಡುಕಲ್ಲಿನಂತೆ ನಿಂತುಕೊಂಡರು. ಪತ್ರವನ್ನು ಸಿ.ಐ. ಎಡಗೈಯಲ್ಲಿ ತೆಗೆದು ಎಸ್.ಐ. ಕೈಗೆ ನೀಡಿದರು.

ಎಸ್.ಐ. ಆ ಪತ್ರದಲ್ಲಿದ್ದ ಎರಡು ವಾಕ್ಯಗಳನ್ನು ನೋಡಿ ಅವಕ್ಕಾಗಿ ಸಿ.ಐ. ಅವರನ್ನೇ ನೋಡುತ್ತ ನಿಂತುಬಿಟ್ಟ, ಕೆಲವು ಕ್ಷಣಗಳು ಸಾವರಿಸಿಕೊಂಡು, ಪತ್ರವನ್ನು ಹಿಂದೆ ಮುಂದೆ ತಿರುಗಿಸಿ ನೋಡಿ ''ಈ ಪತ್ರ ಯಾರು ಬರೆದಿರಬಹುದು....?'' ತನ್ನನ್ನು ತಾನೆ ಪ್ರಶ್ನಿಸಿಕೊಂಡ. ''ಆ ಪತ್ರ ಯಾರಾದರು ಬರೆದಿರಲಿ ಅದನ್ನು ಕಟ್ಟಿಕೊಂಡು ನಮಗೇನು ಬೇಕಾಗಿದೆ. ನಮಗೆ ಯಾವನೊ ಒಬ್ಬ ಒಂದು ಕ್ಲೂ ಕೊಟ್ಟಿದ್ದಾನೆ ಅಷ್ಟು ಸಾಕು. ಈಗ ಅವರ್ನ ಸ್ಟಡಿ ಮಾಡಿದ ಮೇಲೆ ಅರೆಸ್ಟ್ ಮಾಡೋಣವಾ....?'' ಸಿ.ಐ, ಎಸ್.ಐ. ಕಡೆಗೆ ನೋಡಿದರು. ಎಸ್.ಐ. ಏನೂ ಪ್ರತಿಕ್ರಿಯೆ ತೋರಲಿಲ್ಲ. ಸಿ.ಐ. ಒಂದೊಂದು ಸಲ ನಾಯಿ ಆಡಿದಂತೆ ಆಡಿಬಿಡ್ತಾನೆ. ತುಸುವೆ ಹೆಚ್ಚು ಕಡಿಮೆಯಾಗಿ ಮಾತನಾಡಿದರು ಸಾಕು. ಕಚ್ಚಿ ಬಿಡುತ್ತಾನೇನೊ ಎನ್ನುವಂತೆ ಮೈ ಮೇಲೆ ಬೀಳುವುದು ಉಂಟು. ಇಂತಹ ಸಮಯದಲ್ಲಿ ಸಂಮಯಮದಿಂದ ಇರಬೇಕು ಎಂದುಕೊಂಡ ಎಸ್.ಐ. ಒಳಗೊಳಗೆ ಯೋಚಿಸುತ್ತ ಹಾಗೆ ನಿಂತುಕೊಂಡಿದ್ದರು.

''ಏನು ಎಸ್.ಐ. ಸಾಹೇಬರಿಗೆ ದೇವರು ಬಂದಿದಿಯ ಹೇಗೆ ? ಏನಾದರು ಮಾತಾಡ್ರಿ....?'' ಎಂದರು ಸಿ.ಐ. ಈಗ ಎಸ್.ಐ. ಬಾಯಿ ತೆಗೆಯಲೇಬೇಕಾಯಿತು. ''ಸರ್ ತಾವು ಏನು ಹೇಳುತ್ತಿರೊ ಹಾಗೆ ಸರ್ '' ಎಂದ. ''ಹೊ....ಹೌದಲ್ಲವ... ಹಾಗಾದರೆ ಒಂದು ಕೆಲಸ ಮಾಡು. ಹೋಗಿ ಆ ಹುಡುಗೀದು ನಾಲ್ಕು ಪೋಟೋ ಪೋಸ್ಟ್ ಕಾರ್ಡ್ ಸೈಜಿಗೆ ಡೆವಲಪ್ ಮಾಡಿಕೊಂಡು ಬಾ '' ಎಂದರು. ''ಮೂರು ಪೋಟೊ ಇದೆ ಸರ್'' ಎಸ್.ಐ. ಅನು ಕೇಸಿನ ಫೈಲು ತೆಗೆದು ಮೂರು ಪೋಟೊಗಳನ್ನು ತೆಗೆದುಕೊಂಡು ಬಂದು ಸಿ.ಐ. ಕೈಗೆ ನೀಡಿದರು.

ಸಿ.ಐ. ಪೋಟೊ ಕೈಗೆ ತೆಗೆದುಕೊಂಡು ನೋಡಿ ''ಹುಡುಗಿ ಎಷ್ಟು ಚೆನ್ನಾಗಿದ್ದಾಳೆ ನನ್ನ ಮಕ್ಕಳು ಅನ್ಯಾಯವಾಗಿ ಸಾಯಿಸಿಬಿಟ್ರಲ್ಲೊ.... ಲೋಪರ್ ನನ್ನ ಮಕ್ಕಳು. ನೋಡಿ ಎರಡು ಪೋಟೊ ತೆಗೆದುಕೊಂಡು ಆ ಇಬ್ಬರು ಲೋಪರ್ ನನ್ನ ಮಕ್ಕಳ ಹೆಸರು, ವಿಳಾಸ ಬರೆದು ಒಂದೊಂದು ಕವರ್‌ನಲ್ಲಿ ಒಂದೊಂದು ಪೋಟೊ ಇಟ್ಟು ಅಂಟಿಸು'' ಸಿ.ಐ. ಹೇಳಿದರು. ಎಸ್.ಐ. ತನ್ನ ತಲೆಗೆ ಏನೂ ಅರ್ಥವಾಗದಿದ್ದರು,

ಎಲ್ಲವೂ ಅರ್ಥವಾದಂತೆ ಹೇಳಿದ ಕೆಲಸವನ್ನು ಮುಗಿಸಿ ಹತ್ತಿರಕೆ ಬಂದು ''ರೆಡಿ ಸರ್'' ಎಂದರು. ''ನೀವು ಕುಳಿತುಕೊಳ್ಳಿ. ಲೊ ಯಾವನೊ ಅವನು ಟುನಾಟ್ ಒನ್. ಒನ್ ಪೈವ್ ತ್ರಿ ಇಬ್ಬರ್ನು ಕರಿಯೊ'' ಎಂದರು ಸಿ.ಐ. ಕಾನ್‌ಸ್ಟೆಬಲ್ ಹೋಗಿ ಎರಡು ನಿಮಿಷಗಳಲ್ಲಿ ಹೇಳಿದ ಸಂಖ್ಯೆಯ ಪೇದೆಗಳನ್ನು ಕರೆದುಕೊಂಡು ಬಂದ. ಇಬ್ಬರೂ ಸ್ವಲ್ಪ ದೂರದಲ್ಲಿ ನಿಂತುಕೊಂಡು ಒಂದೊಂದು ಸೆಲ್ಯೂಟ್ ಹೊಡೆದರು.

''ಇಲ್ಲಿ ಬನ್ರಯ್ಯ.... ನೀವು ಇಬ್ಬರೂ ಇಲ್ಲಿ ನೋಡಿ. ಈ ಕವರ್ ಮೇಲಿದೆಯಲ್ಲ ಹೆಸರುಗಳು....? ಎತ್ತಿ ತೋರಿಸಿದರು. ಇಬ್ಬರು ಪೇದೆಗಳು ಕವರುಗಳನ್ನು ಕೈಗೆ ತೆಗೆದುಕೊಂಡು ಹಸರುಗಳನ್ನು ನೋಡಿದರು. ''ಇವರಿಬ್ಬರು ಗೊತ್ತು ತಾನೆ...?'' ''ಗೊತ್ತು ಸರ್'' ''ಈಗ್ಲೆ ಮಫ್ತಿಯಲ್ಲಿ ಹೋಗಿ ಇವರು ಎಲ್ಲಿ ಇದ್ದಾರೊ ನೋಡಿಕೊಂಡು ನಾಳೆ ಬೆಳಗ್ಗೆ ಹತ್ತು ಗಂಟೆಗೆ ಎಲ್ಲಿ ಇರ್‍ತಾರೆ ಅಂತ ತಿಳಿದುಕೊಂಡು ಬನ್ನಿ, ಯಾರಿಗೂ ಗೊತ್ತಾಗಬಾರದು. ಉಳಿದ ವಿಷಯ ನೀವು ಬಂದ ಮೇಲೆ ಹೇಳ್ತೀನಿ. ವಿಷಯ ಯಾರಿಗೂ ತಿಳಿಯಬಾರದು ಭದ್ರ'' ಸಿಐ. ಮತ್ತೆ ಎಚ್ಚರಿಸಿದರು. ಇಬ್ಬರು ಪೇದೆಗಳು ಒಂದೊಂದು ಜಬರ್ದಸ್ತ ಸೆಲ್ಯೂಟ್ ಹೊಡೆದು ಅಲ್ಲಿಂದ ಹೊರಟುಹೋದರು.

* * *

ಮರುದಿನ ಬೆಳಗ್ಗೆ ಹತ್ತು ಗಂಟೆಗೆ ಸರಿಯಾಗಿ ಹಂತಕರಿಬ್ಬರು ದೊರಕುವ ಸ್ಥಳವನ್ನು ಪೊಲೀಸರು ತಿಳಿದುಕೊಂಡು ಬಂದಿದ್ದರು. ಇಬ್ಬರು ಹಂತಕರು ಬೇರೆ ಬೇರೆ ದಿಕ್ಕುಗಳಲ್ಲಿ ಇರುವುದರಿಂದ ಎಸ್.ಐ. ಜೊತೆಗೆ ಇಬ್ಬರು ಪೇದೆಗಳು, ಸಿ.ಐ. ಜೊತೆಗೆ ಇಬ್ಬರು ಪೇದೆಗಳು ಬೇರೆ ಬೇರೆಯಾಗಿ ಹೊರಟರು. ಮೊದಲಿಗೆ ಹಂತಕರು ಇರುವ ಸ್ಥಳಗಳ ಸುತ್ತಲು ದಾರಿಗಳನ್ನು ಸೀಲ್ ಮಾಡಿದರು. ಮೊದಲಿಗೆ ಎಸ್.ಐ. ಜೊತೆ ಇದ್ದ ಒಬ್ಬ ಪೇದೆ ಪೋಸ್ಟ್‌ಮನ್ ವೇಷದಲ್ಲಿ ಪಕ್ಕದ ಮನೆಯ ಹುಡುಗನ ಕೈಯಲ್ಲಿ ಒಬ್ಬ ಹಂತಕನ ಹೆಸರಿಗೆ ಪೋಸ್ಟ್ ಬಂದಿದೆ ಕೊಟ್ಟುಬಿಡು ಎಂದು ಪತ್ರವನ್ನು ಕೊಟ್ಟು ಕಳುಹಿಸಿ ದೂರದಲ್ಲಿದ್ದ ಎಸ್.ಐ. ಜೊತೆ ಸೇರಿಕೊಂಡ. ಹುಡುಗ ಪತ್ರವನ್ನು ಪೋಸ್ಟ್‌ಮನ್‌ಕೊಟ್ಟರು ಎಂದು ಕೊಟ್ಟುಬಂದ.

ಪತ್ರ ತೆರೆದುನೋಡಿ ಹಂತಕನ ಎದೆ ದಡದಡನೆ ಹೊಡೆದುಕೊಂಡು ಮೈಯೆಲ್ಲಾ ಬೆವರು ಹರಿಯತೊಡಗಿತು. ತಾನು ಇರುವ ಮನೆಯಿಂದ ಹೊರಕ್ಕೆ ಇಣಿಕಿ ನೋಡಿದ. ಸಂದೇಹ ಪಡುವಂತಹವರು ಯಾರೂ ಕಾಣಿಸಲಿಲ್ಲ. ಈ ಹುಡುಗಿಯ ಪೋಟೊ ಪೋಸ್ಟ್‌ನಲ್ಲಿ ಕಳುಹಿಸಿದ್ದು ಯಾರಿರಬೇಕು... ? ಪೊಲೀಸರಿಗೆ ಗೊತ್ತಾಗಿಬಿಟ್ಟಿತೆ...?

ಇಲ್ಲಿ ಯಾರಾದರು ಎದುರಾಳಿಗಳು ನಮಗೆ ಬೆದರಿಸಲು ಕಳುಹಿಸಿರಬಹುದೆ....? ಒಟ್ಟಿನಲ್ಲಿ ಎಲ್ಲೋ ಎಡವಟ್ಟಾಗಿದೆ. ಈಗ ಏನು ಮಾಡುವುದು....? ಬಿಲದಿಂದ ಹೊರಕ್ಕೆ ಬಿದ್ದ ಇಲಿಯಂತೆ ಹಂತಕ ಮನೆಯಿಂದ ಹೊರಬಿದ್ದ. ಇದನ್ನು ಮೊದಲೆ ಅರಿತಿದ್ದ ಎಸ್.ಐ. ಪೇದೆಗಳ ಜೊತೆಗೆ ದೂರದಿಂದಲೆ ಅವನನ್ನು ಹಿಂಬಾಲಿಸಿದರು.

ಇನ್ನೊಂದು ಕಡೆ ಸಿ.ಐ. ಇಬ್ಬರು ಪೇದೆಗಳು ಜೊತೆಗೆ ಇನ್ನೊಬ್ಬ ಹಂತಕನಿರುವ ಮನೆಯ ಮುಂದೆ ದೂರದಲ್ಲಿ ಕಾಯತೊಡಗಿದರು. ಎಸ್.ಐ. ಮೊದಲ ಹಂತಕ ಎರಡನೆ ಹಂತಕನ ಮನೆಯ ಕಡೆಗೆ ಬರುತ್ತಿರುವುದಾಗಿ ಸೂಚನೆ ನೀಡಿದರು. ಇನ್ನೇನು ಹತ್ತು ನಿಮಿಷಗಳಲ್ಲಿ ಮೊದಲನೆ ಹಂತಕ ಎರಡನೇ ಹಂತಕನ ಮನೆ ತಲುಪುತ್ತಾನೆ ಎನ್ನುವಾಗ ಸಿ.ಐ. ಹತ್ತಿರ ಇದ್ದ ಪೇದೆ ಇನ್ನೊಂದು ಪತ್ರವನ್ನು ಒಬ್ಬ ಹುಡುಗನ ಕೈಯಲ್ಲಿ ಎರಡನೆ ಹಂತಕನಿಗೆ ಪೋಸ್ಟ್‌ಮನ್ ವೇಷದಲ್ಲಿ ತಲುಪಿಸಿದ.

ಎರಡನೆ ಹಂತಕ ಪತ್ರವನ್ನು ಬಿಚ್ಚಿ ನೋಡುತ್ತಾನೆ. ಅನು ಪೋಟೊ....? ಅವನ ಹೃದಯ ದಸಕ್ಕೆಂದು ಮಣ್ಣಿಗೆ ಬಿದ್ದಂತಾಯಿತು. ಮೈಯೆಲ್ಲಾ ಬೆವರು ಹನಿಗಳು ಹೊಡೆದುಕೊಂಡವು. ಹೊರಕ್ಕೆ ಇಣಿಕಿನೋಡಿದ. ದೂರದಲ್ಲಿ ತನ್ನ ಗೆಳೆಯ ಓಡೋಡಿ ಬರುತ್ತಿದ್ದಾನೆ. ಇಬ್ಬರು ಮನೆ ಒಳಕ್ಕೆ ಸೇರಿಕೊಂಡು ಬಾಗಿಲು ಮುಚ್ಚಿಕೊಂಡರು. ಸುಮಾರು ಹೊತ್ತಾದರು ಅವರು ಹೊರಕ್ಕೆ ಬರಲಿಲ್ಲ.

ಹಂತಕರು ಮನೆಯ ಒಳಗೆ ಮಾತನಾಡುತ್ತಿದ್ದ ಮಾತುಗಳೆಲ್ಲ ಇಲ್ಲಿ ಪೊಲೀಸ್ ಜೀಪಿನ ಒಳಗೆ ಸಿ.ಐ. ಮತ್ತು ಎಸ್.ಐ. ಕೇಳಿಸಿಕೊಳ್ಳುತ್ತಿದ್ದಾರೆ. ಸಿ.ಐ. ಜೀಪನ್ನು ಮನೆಯ ಹತ್ತಿರಕ್ಕೆ ಓಡಿಸುವಂತೆ ಆಜ್ಞೆಮಾಡಿದರು. ಜೀಪು ಸರ್ರನೆ ಸಾಗಿ ಮನೆ ಮುಂದೆ ನಿಂತುಕೊಂಡಿತು. ಪೇದೆಗಳು ಆಗಲೆ ಬಾಗಿಲಲ್ಲಿ ನಿಂತುಕೊಂಡಿದ್ದರು. ಸಿ.ಐ. ಜೀಪಿನಿಂದ ಕೇಳಕ್ಕೆ ಇಳಿಯುತ್ತ ಬೆಲ್ಟ್‌ನಲ್ಲಿದ್ದ ಪಿಸ್ತೂಲನ್ನು ಕೈಗೆ ತೆಗೆದುಕೊಂಡರು. ಎಸ್.ಐ., ಸಿ.ಐ. ಪಕ್ಕದಲ್ಲಿ ನಿಂತುಕೊಂಡದ್ದ, ಸಿ.ಐ ತಲೆ ಆಡಿಸಿದರು. ಪೇದೆಯೊಬ್ಬ ಬಾಗಿಲಿನ ಮೇಲೆ ಕುಟ್ಟಿದ.

ತಬ್ಬಿಬ್ಬಾದ ಹಂತಕರು ಬಾಗಿಲು ತೆಗೆದು ಹೊರಕ್ಕೆ ನೋಡುತ್ತಾರೆ....? ಪೊಲೀಸ್ ಠಾಣೆಯೆ ಎದುರು ನಿಂತಿದೆ. ಪೇದೆಗಳು ಒಳಕ್ಕೆ ನುಗ್ಗಿ ಹಂತಕರ ಜುಟ್ಟುಗಳನ್ನು ಹಿಡಿದು ಎಳೆದು ತಂದು, ಇಬ್ಬರ ಕೈಗಳನ್ನು ಸೇರಿಸಿ ಬೇಡಿ ತೊಡಿಸಿ ಜೀಪಿನ ಒಳಕ್ಕೆ ತಳ್ಳಿದರು. ಎಸ್.ಐ. ಒಳಕ್ಕೆ ಹೋಗಿ ಹಂತಕರಿಗೆ ತಿಳಿಯದೆ ಇಟ್ಟಿದ್ದ ಮೈಕ್ರೊಫೋನ್ ಯಂತ್ರವನ್ನು ಕೈಗೆ ತೆಗೆದುಕೊಂಡ. ಜೀಪು ಪೊಲೀಸ್ ಠಾಣೆಯ ಕಡೆಗೆ ಓಡತೊಡಗಿತು. ಸುತ್ತಮುತ್ತಲಿನ ಜನರಿಗೆ ಏನು ನಡೆಯುತ್ತಿದೆ ಎಂದು

ಗೊತ್ತಾಗದೆ ಗುಸುಗುಸು ಮಾತನಾಡಿಕೊಳ್ಳುತ್ತಿದ್ದರು. ಸಿ.ಐ., ಎಸ್.ಐ. ಮತ್ತು ಪೇದೆಗಳ ಕಡೆಗೆ ನೋಡಿ ಮೀಸೆಗಳನ್ನು ತಿರುಗಿಸುತ್ತಿದ್ದರು.

"ಗ್ರೇಟ್ ಸರ್ ನೀವು" ಎಸ್.ಐ., ಸಿ.ಐ. ಅವರಿಗೆ ಹೇಳಿದ್ದೆ "ಗ್ರೇಟ್ ಅಲ್ಲಾರಿ, ವೆರಿ ಗ್ರೇಟ್" ಎಂದು ಹೋಗುತ್ತಿರುವ ಜೀಪಿನಲ್ಲಿ ಹಿಂದಕ್ಕೆ ತಿರುಗಿ ಹಂತಕರ ಕಡೆಗೆ ನೋಡಿದರು. ಅಷ್ಟೆ ಪೇದೆಗಳು ಲಾಠಿಗಳಲ್ಲಿ ಪಕ್ಕದಲ್ಲಿದ್ದ ಹಂತಕರಿಬ್ಬರಿಗೂ ದಬದಬನೆ ಇಕ್ಕಿದರು. ಸಿ.ಐ. ಕಳ್ಳರನ್ನು ರೌಡಿಗಳನ್ನು ಹಂತಕರನ್ನು ದಿಟ್ಟಿಸಿ ನೋಡಿದರೆಂದರೆ ಪೇದೆಗಳು ಅವರನ್ನು ಇಗ್ಗಾಮುಗ್ಗಾ ಹೊಡೆಯಬೇಕಾಗಿತ್ತು. ಇದು ಆ ಸಿ.ಐ. ಸ್ಪೆಷಲ್. ಈಗ ಹಂತಕರೇನೊ ಸಿಕ್ಕಿದ್ದರು, ಆದರೆ ಇವರಿಗೆ ಅನುಳನ್ನು ಸಾಯಿಸಲು ಸುಪಾರಿ ಕೊಟ್ಟವರು ಯಾರು....? ಆ ದಿನವೆಲ್ಲ ಅವರಿಗೆ ಪೊಲೀಸರು ತಮ್ಮದೇ ಶೈಲಿಯಲ್ಲಿ ವಿಚಾರಿಸಿಕೊಂಡು ಮರುದಿನ ನ್ಯಾಯಾಲಯದಲ್ಲಿ ನಿಲ್ಲಿಸಿದರು. ಪೊಲೀಸರು ಬಲವಾದ ಸಾಕ್ಷಿಯನ್ನು ನ್ಯಾಯಾಲಯದಲ್ಲಿ ಇಟ್ಟಿದ್ದರಿಂದ ನ್ಯಾಯಮೂರ್ತಿಗಳು ಪೊಲೀಸ್ ಕಸ್ಟಡಿಗೆ ಹಂತಕರನ್ನು ಒಪ್ಪಿಸಿದರು. ಪೊಲೀಸರು, ಹಂತಕರನ್ನು ಈಗ ಪೂರ್ಣವಾಗಿ ಗಮನಿಸಿಕೊಳ್ಳಲು ಕರೆದೊಯ್ದರು.

* * *

ಕೊನೆಗೂ ಒಂದು ದಿನ ಅಂತಿಮ ವರ್ಷದ ಪರೀಕ್ಷೆಗಳನ್ನು ಮುಗಿಸಿದ ವಿದ್ಯಾರ್ಥಿಗಳು ಹಕ್ಕಿಗಳಂತೆ ಹಾರಾಡುತ್ತಿದ್ದರು. ಸರಿಯಾಗಿ ಪರೀಕ್ಷೆಗಳನ್ನು ಬರೆಯದವರು ಡ್ಯೂಯ್ಸ್ ಇಟ್ಟುಕೊಂಡಿದ್ದವರು ಮಾಮೂಲಿಯಾಗಿಯೆ ಪೆಚ್ಚುಮೊರೆ ಹಾಕಿಕೊಂಡು ಗಿಡಗಳ ಜೊತೆಗೆ ಮಾತನಾಡಿಕೊಳ್ಳುತ್ತಿದ್ದರು. ಈ ದಿನ ಹಲವು ವಿದ್ಯಾರ್ಥಿಗಳಿಗೆ ಆ ಕಾಲೇಜ್ ಕೊನೆಯ ದಿನವಾಗಿತ್ತು. ಪಾಸಾದವರೆಲ್ಲ ಹೌಸ್ ಸರ್ಜನ್‌ರಾಗಿ ಯಾವುದೊ ಆಸ್ಪತ್ರೆಯಲ್ಲಿ ತಮ್ಮ ಕಾಯಕವನ್ನು ಪ್ರಾರಂಭಿಸುವವರಿದ್ದರು. ಫೇಲಾದವರು ಮತ್ತೆ ಮತ್ತೆ ಪರೀಕ್ಷೆಗಳನ್ನು ಬರೆಯಬೇಕಾಗಿತ್ತು. ಬೇರೆ ಊರುಗಳಿಂದ ಬಂದಿದ್ದ ವಿದ್ಯಾರ್ಥಿಗಳು ಒಂದೆರಡು ದಿನಗಳಲ್ಲಿ ಬೆಂಗಳೂರು ಬಿಟ್ಟು ಹೋಗಬೇಕಾಗಿತ್ತು. ಅದರಲ್ಲೂ ಕೃತಿಕಾ ಮತ್ತು ರೂಪ ಕೂಡ ಸೇರಿದ್ದರು. ಬೆಂಗಳೂರು ಜೊತೆಗೆ ಗೆಳೆಯರನ್ನು ಬಿಟ್ಟು ಹೋಗಲು ಅವರಿಗೆ ಮನಸ್ಸು ಬರಲಿಲ್ಲ. ಆದರೆ ಹೋಗಲೇಬೇಕಲ್ಲ.

ಕೃತಿಕಾ ಮತ್ತು ಅಮರನಾಥ ಮರುದಿನ ಬೆಳಗ್ಗೆ ಹತ್ತು ಗಂಟೆಗೆ ಒಂದು ಕಡೆ ಸೇರಿದರು. ಹುಡುಗಿಯೊಬ್ಬಳನ್ನು ಒಬ್ಬ ಹುಡುಗ ಏಕೆ ಇಷ್ಟ ಪಡುತ್ತಾನೆ....? ಹುಡುಗಿಯೊಬ್ಬಳು ಒಬ್ಬ ಹುಡುಗನನ್ನು ಏಕೆ ಪ್ರೀತಿಸುತ್ತಾಳೆ....? ಇಬ್ಬರ ನಡುವೆ

ಮೊದಲಿಗೆ ಪ್ರೀತಿ ಹೇಗೆ ಹುಟ್ಟುತ್ತದೆ. ಪ್ರೀತಿಸುವವರ ನಡುವಿನ ಬಾಡಿ ಕೆಮಿಸ್ಟ್ರಿಗೂ ಪ್ರೀತಿಗೂ ಏನಾದರು ಸಂಬಂಧವಿದೆಯೆ....? ಪ್ರೀತಿಸುವವರು ಕಣ್ಣುಗಳು ಮತ್ತು ಮಾತುಗಳ ಮುಖಾಂತರ ಏನಾದರು ಕಂಡುಕೊಳ್ಳುತ್ತಾರೆಯೆ ...? ದುಶ್ಯಂತ ಮತ್ತು ಶಕುಂತಲೆ ಪ್ರೀತಿಸುವವರಿಗೆ ಒಂದು ಒಳ್ಳೆಯ ಉದಾಹರಣೆ.

ಬುದ್ಧ ,ಬಸವ , ಏಸು ಮುಂತಾದ ಮಹನಿಯರನ್ನು ಲಕ್ಷಾಂತರ ಮಂದಿ ಹಿಂಬಾಲಿಸಿದರು. ಒಬ್ಬರಿಗಾಗಿ ಇನ್ನೊಬ್ಬರು ಪ್ರಾಣ ಕೊಡಲು ತಯಾರಾಗುವುದು ಹೇಗೆ....? ಪ್ರೀತಿಗೂ ಅಂತಹ ಯಾವುದೊ ಒಂದು ಶಕ್ತಿ ಇರಲೇಬೇಕು. ಹಾಗಿಲ್ಲದಿದ್ದಲ್ಲಿ ಜಾತಿ, ಮತ, ಬಂಧು, ಬಾಂಧವ್ಯ, ಐಶ್ವರ್ಯ ಎಲ್ಲವನ್ನು ತೊರೆದು ಹುಚ್ಚು ಹಿಡಿದವರಂತೆ ಸಾವಿಗೂ ಎದುರದೆ ಒಬ್ಬರನ್ನೊಬ್ಬರು ಹಿಂಬಾಲಿಸುತ್ತಾರೆಯೆ...? ಪ್ರಾಣದ ಹಂಗು ತೊರೆದು ಮುಂದೆ ಏನಾಗುತ್ತದೆ ಎನ್ನುವುದನ್ನು ಲೆಕ್ಕಿಸದೆ ಎಲ್ಲವನ್ನು ತೊರೆದುಬಿಡುತ್ತಾರೆ. ಅವರಿಬ್ಬರ ನಡುವೆ ಆಗ ಇರುವುದು ಪ್ರೀತಿ ಮಾತ್ರ. ಅವರಿಗೆ ಕಾಣಿಸುವುದು ಅದೊಂದೆ.

ಕೃತಿಕಾ ಮತ್ತು ಅಮರನಾಥ ಕಳೆದ ನಾಲ್ಕು ವರ್ಷಗಳಿಂದ ಎಷ್ಟು ಮಾತನಾಡಿದ್ದಾರೊ ಲೆಕ್ಕವಿಲ್ಲ. ಆದರೆ ಅವರು ಪ್ರೀತಿ ಮಾಡಲು ತೊಡಗಿರುವುದು ಇದೆ ಮೊದಲು ಎನ್ನುವಂತೆ ಬೆಳಗ್ಗೆಯಿಂದ ಮಾತನಾಡುತ್ತಿದ್ದಾರೆ. ಕೃತಿಕಾ ಬೆಳಿಗ್ಗೆ ಅಮರನಾಥನ ಕಣ್ಣುಗಳಲ್ಲಿ ಅದ್ಬುತವಾಗಿ ಕಾಣಿಸುತ್ತಿದ್ದಳು. ಬೆಳಿಗ್ಗೆ ಅವಳು ಎದುರಿಗೆ ಬಂದಾಗ ಅವಳನ್ನು ನೋಡಿ ಆಶ್ಚರ್ಯದಿಂದ ತನ್ನನ್ನು ತಾನೆ ಚಿವುಟಿಕೊಂಡು ಅವನಿಗೆ ಗೊತ್ತಿಲ್ಲದೆಯೆ ಮೊದಲ ಬಾರಿಗೆ ಕೈಚಾಚಿ ಅವಳ ಕೈಯನ್ನು ಸ್ಪರ್ಶಿಸಿದ. ಕೃತಿಕಾ ಕೂಡ ಅವನ ಕಣ್ಣುಗಳಲ್ಲಿ ಎದ್ದ ಬೆಳಕನ್ನು ನೋಡಿ ಆಶ್ಚರ್ಯಚಕಿತಳಾಗಿದ್ದಳು.

ಹೆಣ್ಣು ತಾನು ಧರಿಸುವ ಬಟ್ಟೆ ಮತ್ತು ತನ್ನ ಶೃಂಗಾರದ ಜ್ಞಾನದಿಂದ ಒಮ್ಮೊಮ್ಮೆ ಅದ್ಭುತವಾಗಿ ಕಾಣಿಸಿಕೊಳ್ಳುವಳು. ಸೌಂದರ್ಯ ನೋಡುವವರ ಕಣ್ಣುಗಳಲ್ಲಿ ಇರುತ್ತದೆ ಎನ್ನುವುದು ಮೊದಲ ಬಾರಿಗೆ ನಿಜ ಎನಿಸಿತು ಅವನಿಗೆ. ಅವಳ ಮೈಬಣ್ಣ, ನಗುವ ತುಟಿಗಳು..... ನೀಳವಾದ ಮೂಗು.... ಹೊಳೆಯುವ ಕಣ್ಣುಗಳು..... ಗುಲಾಬಿ ಕೆನ್ನೆಗಳು.... ಮೈಬಣ್ಣಕ್ಕೆ ಒಪ್ಪುವಂತಹ ಸೀರೆ ಬ್ಲೌಸ್...... ನೀಳವಾದ ಜಡೆ ಎಲ್ಲವನ್ನು ರಂಗುಗೊಳಿಸುತ್ತಿರುವ ಉಷೆಯ ಕಿರಣಗಳು..... ಅಮರನಾಥ ಅವಳನ್ನು ನೋಡುತ್ತಲೆ ಇದ್ದುಬಿಟ್ಟ.

ಕೃತಿಕಾ ಅಮರನಾಥನನ್ನು ''ಏನು ಯಾವುತ್ತು ನೋಡಿಲ್ಲವೇನು...?'' ಎಂದು ಕೇಳಬೇಕಾಯಿತು. ಹೂತೋಟದಲ್ಲಿ ಒಂದು ಗಿಡದ ಕೆಳಗೆ ಇಬ್ಬರೂ ಪಕ್ಕಪಕ್ಕದಲ್ಲಿ

ಕುಳಿತುಕೊಂಡಿದ್ದಾರೆ. ''ನಾನು ನಾಳೆ ಊರಿಗೋಗ್ತೀನಿ ಮತ್ತೆ ಬರುವುದು ಫಲಿತಾಂಶ ಬಂದ ಮೇಲೆನೆ..... ನಿಮ್ಮ ತಂದೆ ತಾಯಿ ನಮ್ಮ ಮದುವೆಗೆ ಒಪ್ಪುತಾರ.....?'' ಕೃತಿಕಾ ಎಲ್ಲಾ ಪ್ರೇಮಿಗಳು ಕೇಳುವ ಮಾಮೂಲಿ ಪ್ರಶ್ನೆಯನ್ನು ಕೇಳಿದಳು.... ''ನಮ್ಮ ತಂದೆ ತಾಯಿ ಬಗ್ಗೆ ಬಿಟ್ಟುಬಿಡು. ನಿಮ್ಮ ತಂದೆ ತಾಯಿ ಬಗ್ಗೆ ಹೇಳು....'' ಅಮರನಾಥ ಹೇಳಿದ. ''ನಾನು ಈ ಸಲ ಊರಿಗೋಗಿ ನಮ್ಮ ತಂದೆ ತಾಯಿಗೆ ನೇರವಾಗಿ ಕೇಳಿಬಿಡ್ತೀನಿ. ಅವರು ಒಪ್ಪಿಕೊಂಡರೆ ನಿಮ್ಮ ಮನೆಗೆ ಕಳುಹಿಸಿಕೊಡ್ತೀನಿ, ಒಪ್ಪಲಿಲ್ಲ ಅಂದರೆ ನಾನು ಅವರ್ನ ಒಪ್ಪಿಸೊದಕ್ಕೆ ಮ್ಯಾಕ್ಸಿಮಮ್ ಟ್ರೈ ಮಾಡ್ತೀನಿ. ಆಗಲೂ ಒಪ್ಪಲಿಲ್ಲ ಅಂದರೆ ಆ ಮೇಲೆ ಯೋಚಿಸೋಣ. ನಮ್ಮ ತಂದೆ, ತಾಯಿ ಅಷ್ಟೊಂದು ರಿಜಿಡ್ ಅಲ್ಲ. ಹೇಗೊ ನನ್ನ ಅಕ್ಕನಿಗೆ ಮದುವೆ ಆಗೋಗಿದೆ. ತಮ್ಮ ಒಬ್ಬನಿದ್ದಾನೆ. ಅವನ ಬಗ್ಗೆ ನಾನು ಯೋಚಿಸೊ ಅವಶ್ಯಕತೆಯಿಲ್ಲ'' ಕೃತಿಕಾ ಹೇಳಿದಳು.

''ಮೊದಲು ನಮ್ಮ ತಾಯಿಗೆ ಹೇಳಿ ಅವರ ಮೂಲಕ ನಮ್ಮ ತಂದೆಗೆ ತಿಳಿಸ್ತೀನಿ. ನನ್ನ ಬಗ್ಗೆ ಏನೂ ಯೋಚಿಸಬೇಡ. ನಿಮ್ಮ ಮನೆಯಲ್ಲಿ ಒಪ್ಪಿಕೊಂಡರೆ ಸಾಕು ಮದುವೆ ಆದಂತೆಯೆ. ಆ ಮೇಲೆ ಏನಾದರು ಮಾಡಿ ಹೌಸ್ ಸರ್ಜನ್‌ಗೆ ಬೆಂಗಳೂರಿನಲ್ಲೆ ಹಾಕಿಸ್ಕೊ. ನಾನೂ ಬೆಂಗಳೂರಿನಲ್ಲೆ ಟ್ರೈ ಮಾಡ್ತೀನಿ. ನಮ್ಮ ಹರ್ಷ ಇದ್ದಾನಲ್ಲ....? ಅವನಿಗೆ ಒಳ್ಳೆ ಇನ್‌ಫ್ಲೂಯನ್ಸ್ ಇದೆ. ನಮ್ಮಿಬ್ಬರಿಗೂ ಒಂದೇ ಆಸ್ಪತ್ರೆಯಲ್ಲಿ ಸಿಕ್ಕಿದರೆ ಚೆನ್ನಾಗಿರುತ್ತೆ'' ಅಮರನಾಥ ಹೇಳಿದ. ಇಬ್ಬರು ಕೆಲವು ಕ್ಷಣಗಳು ಸುಮ್ಮನಾದರು.

''ನನಗೊಂದು ಉಪಾಯ ಬಂದಿದೆ'' ಕೃತಿಕಾ ಇದ್ದಕ್ಕಿದ್ದಾಗ್ಗೆ ಹೇಳಿದಳು.

''ಏನು ಉಪಾಯ....?'' ಅಮರನಾಥ ಅವಳ ಕಣ್ಣುಗಳ ಆಳಕ್ಕೆ ನೋಡಿದ.

''ನನ್ನನ್ನ ಈಗಲೆ ನಿಮ್ಮ ಮನೆಗೆ ಕರೆದುಕೊಂಡೋಗು'' ಕೃತಿಕಾ ಮಾತಿಗೆ ಸ್ವಲ್ಪ ಸೆಳೆತಗೊಂಡ ಅಮರನಾಥ ''ಈಗ್ಲೇನೆ....'' ಎಂದ. ''ಹೌದು ಈಗ್ಲೇನೆ. ನಾನು ನಿಮ್ಮ ತಾಯೀನ ನೊಡಬೇಕು. ನಿಮ್ಮ ತಂದೆ ಮನೆಯಲ್ಲಿರ್‍ತಾರ....?'' ''ಇರೊದಿಲ್ಲ ಆಫೀಸಿಗೋಗಿರ್‍ತಾರೆ'' ''ಸರಿ ನಡಿ. ನೊ ಸೆಕೆಂಡ್ ಥಾಟ್. ನಿಮ್ಮ ಮನೆ ನೋಡಬೇಕು. ಯಾವತ್ತಾದರು ಆ ಮನೆಯಲ್ಲಿ ಜೀವನ ನಡೆಸಬೇಕಲ್ಲ....'' ಅಮರನಾಥನಿಗೆ ಒಮ್ಮೆಲೆ ದೊಡ್ಡ ಸಮಸ್ಯೆ ಎದುರಾಗಿಬಿಟ್ಟಿತು. ಈ ದಿನ ಅಲ್ಲದಿದ್ದರೆ ಯಾವುದಾದರು ಒಂದು ದಿನ ಅವಳು ನಮ್ಮ ಮನೆಗೆ ಬರಲೇಬೇಕು. ಅವಳ ಮನೆಗೂ ನಮ್ಮ ಮನೆಗೂ ಎಲ್ಲಿಗೆಲ್ಲಿಗೊ....? ಇಷ್ಟು ದಿನಗಳು ಯೋಚಿಸದ ಸಮಸ್ಯೆಗಳು ಈಗ ಒಮ್ಮೆಲೆ ಅವನ ಕಣ್ಣುಗಳ ಮುಂದು ಉರುಳಾಡತೊಡಗಿದವು.

''ಏನು ಯೋಚಿಸ್ತಾ ಇದ್ದೀಯಾ...?'' ಕೃತಿಕಾ ಅವನನ್ನು ಯೋಚನೆಗಳ

ಮರದಿಂದ ಅಲ್ಲಾಡಿಸಿದಳು. ''ಆಯಿತು ನಡಿ'' ಅಮರನಾಥ ಎದ್ದುನಿಂತ. ಇಬ್ಬರೂ ಒಂದು ಆಟೋ ಹಿಡಿದು ಮನೆ ಮುಂದೆ ಇಳಿದುಕೊಂಡರು. ಅಲ್ಲಿಯವರೆಗೂ ಯಾವುದೇ ಭಯ ಸಂಕೋಚಗಳಿಲ್ಲದೆ ಇದ್ದ ಕೃತಿಕಾ ಆಟೋದಿಂದ ಇಳಿಯುತ್ತಿದ್ದಂತೆ ಭೂಮಿಗೆ ಇಳಿದೊದವಳಂತೆ ಸುತ್ತಲು ಒಮ್ಮೆ ನೋಡಿದಳು ಸೀರೆಯನ್ನು ಮೈತುಂಬಾ ಸುತ್ತಿಕೊಂಡಳು.

ಅಮರನಾಥ ಇದೆ ಮೊದಲ ಬಾರಿಗೆ ಒಂದು ಹುಡುಗಿಯನ್ನು ತಮ್ಮ ಮನೆಗೆ ಕರೆದುಕೊಂಡು ಬರುತ್ತಿದ್ದ. ನಿತಿನ್ ಮತ್ತು ಸವ್ಯ ಎಷ್ಟೋ ಬಾರಿ ಅಮರನಾಥನ ಮನೆಗೆ ಬಂದು ಹೋಗಿದ್ದಾರೆ. ಆಗಾಗ ಕೃತಿಕಾ,ರೂಪ ಮತ್ತು ಕಮಲಾದಾಸ್ ಹೆಸರುಗಳನ್ನು ಅಮರನಾಥ ತನ್ನ ತಾಯಿಯ ಮುಂದೆ ಹೇಳಿದ್ದಾನೆ. ಅದು ಯಾವುದೂ ಅವನಿಗೆ ಸಮಸ್ಯೆಯಲ್ಲ. ಈ ಸಣ್ಣ ಮನೆಯನ್ನು ನೋಡಿ ಕೃತಿಕಾ ಏನು ತಿಳಿದುಕೊಳ್ಳುವಳೊ ಎನ್ನುವ ವಿಷಯ ಅವನ ತಲೆಯಲ್ಲಿ ಮೊದಲ ಬಾರಿಗೆ ಎದ್ದಿತು. ತಾಯಿಯ ಪ್ರತಿಕ್ರಿಯೆ ಹೇಗಿರಬಹುದು....?

ಅಮರನಾಥ ಹಿಂದೆ , ಕೃತಿಕಾ ಮುಂದೆ ಇಬ್ಬರು ನಡೆದು ಬಾಗಿಲುವರೆಗೂ ತಲುಪಿದರು. ಅಮರನಾಥ ಶೂಗಳನ್ನು ಬಾಗಿಲಲ್ಲಿ ತೆಗೆದಿಟ್ಟು''ಅಮ್ಮಾ.... ಅಮ್ಮಾ...'' ಎಂದು ಎರಡು ಸಲ ಕರೆದು ಅನಂತರ ''ಬಾ...ಕೃತಿಕಾ....'' ಎಂದು ಒಳಕ್ಕೆ ಆಹ್ವಾನಿಸಿದ. ಮನೆಯ ಒಳಗೆ ಯಾವುದೊ ಕೆಲಸದಲ್ಲಿ ತೊಡಗಿದ್ದ ಅಮರನಾಥನ ತಾಯಿ ಮಗನ ಕೊರಳು ಕೇಳಿ ಕೈ ಒರೆಸಿಕೊಳ್ಳುತ್ತ ಎದ್ದು ಬಂದಳು. ಅಮರನಾಥನ ಜೊತೆಗೆ ಒಂದು ಹೆಣ್ಣು ನಿಂತಿದ್ದಾಳೆ. ಹತ್ತಿರಕ್ಕೆ ನಡೆದು ಬರುತ್ತಿದ್ದಂತೆ ಅಮರನಾಥ ''ನಮ್ಮ ತಾಯಿ'' ಎಂದ.

ಕೃತಿಕಾಗೆ ಏನಾಯಿತೊ ಏನೊ ಅದುವರೆಗೂ ಅವಳ ತಲೆಗೆ ಹೊಳೆಯದಿದ್ದ ಒಂದು ಉಪಾಯ ದಿಢೀರನೆ ಅವಳಿಗೆ ಹೊಳೆಯಿತು. ಅಮರನಾಥನ ತಾಯಿನ್ನು ಒಮ್ಮೆಲೆ ಕಣ್ಣುಗಳಲ್ಲಿ ತುಂಬಿಕೊಂಡು ದಿಢೀರನೆ ಕಾಲಿಗೆ ಎರಗಿಬಿಟ್ಟಳು. ಕೃತಿಕಾಳ ಈ ಅನಿರೀಕ್ಷಿತ ನಡತೆಯಿಂದ ದಂಗಾಗಿ ಹೋದ ಅಮರನಾಥನ ತಾಯಿ ಒಂದೆಜ್ಜೆ ಹಿಂದಕ್ಕೆ ಸರಿದು ''ನನ್ನ ಕಾಲಿಗೆ ಯಾಕ್ ಬೀಳ್ತಿಯಮ್ಮ....? ಮೇಲೇಳು. ಎಷ್ಟು ಚಂದಾಗಿದ್ದೀಯಮ್ಮ....'' ಎಂದು ಕೃತಿಕಾ ಕೆನ್ನೆಗಳನ್ನು ತಡವಿ ನೆಟಿಕೆ ಮುರಿದರು. ಕೃತಿಕಾಗೆ ತನ್ನ ತಾಯಿಯ ಜ್ಞಾಪಕ ಬಂದುಬಿಟ್ಟಿತು. ಕೃತಿಕಾ ತನ್ನ ಊರಿನಿಂದ ಬೆಂಗಳೂರಿಗೆ ಹಿಂದಿರುಗಿ ಬಂದಾಗಲೆಲ್ಲ ಅವಳ ತಾಯಿ ಇದೆ ರೀತಿ ದೃಷ್ಟಿ ತೆಗೆದು ಕಳುಹಿಸುತ್ತಿದ್ದಳು.

"ಕುಳಿತುಕೊ ಬಾಮ್ಮ..... ಏನು ನಿನ್ನೆಸರು....?" ಎಂದಿದ್ದಕ್ಕೆ "ಕೃತಿಕಾ" ಎಂದಳು. ಕೃತಿಕಾ ಮನೆಯನ್ನು ಕಣ್ಣುಗಳಲ್ಲೆ ಚಿತ್ರಿಸಿಕೊಳ್ಳುತ್ತಿದ್ದಂತೆ ಅಮರನಾಥನ ತಾಯಿ ಮಗನ ಕಡೆಗೆ ನೋಡಿದಳು. "ಕೃತಿಕಾ ಅಂತ. ನನ್ನ ಕ್ಲಾಸ್‌ಮೇಟ್. ಗುಂಟೂರು....ಆಂಧ್ರ. ನಾಳೆ ಊರಿಗೆ ಹೋರಟೋಗ್ತಾಳೆ. ನಿಮ್ಮ ಮನೇಗೆ ಬರ್ತೀನಿ ಅಂದಳು. ಅದಕ್ಕೆ ಕರೆದುಕೊಂಡು ಬಂದೆ " ಎಂದ. "ನಿಮ್ಮ ತಂದೆ ತಾಯಿ ಏನು ಕೆಲಸ ಮಾಡ್ತಾರೆ....?" "ವ್ಯವಸಾಯ ಮಾಡ್ತಾರೆ. ಜೊತೆಗೆ ಒಂದಷ್ಟು ವ್ಯಾಪಾರನು ಮಾಡ್ತಾರೆ " ಅಷ್ಟೇಳಿ ಸುಮ್ಮನಾದಳು. ನಾವು ತುಂಬಾ ಹಣವಂತರು ಅಂತ ಹೇಳಿಕೊಳ್ಳಲು ಅವಳಿಗೆ ಇಷ್ಟವಿರಲಿಲ್ಲ. "ಮನೆಯಲ್ಲಿ ಯಾರೂ ಇಲ್ಲ. ಅಮರನಾಥನ ತಂಗಿ, ತಮ್ಮ ಸ್ಕೂಲಿಗೆ ಹೋಗಿದ್ದಾರೆ. ಅವನ ತಂದೆ ಆಫೀಸಿಗೊಗಿದ್ದಾರೆ. ನೀನು ಊಟ ಮಾಡಿಕೊಂಡೆ ಹೋಗಬೇಕು" ತಾಯಿ ಹೇಳುತ್ತಿದ್ದಂತೆ "ಇಲ್ಲ ಆಂಟಿ ಊಟ ಬೇಡ" ಎಂದಳು ಕೃತಿಕಾ. ಇಲ್ಲಮ್ಮ ಹಾಗೆಲ್ಲ ಹೇಳ್‌ಬಾರದು ಮೊದಮೊದಲು ನಮ್ಮ ಮನೆಗೆ ಬಂದಿದ್ದೀಯಾ ಅದು ಹೆಣ್ಣು ಮಗಳು, ಕುಳಿತುಕೊ. ಅಮರನಾಥ ನೀನು ಮಾತನಾಡ್ತಾ ಇರು. ನಾನು ಅಡಿಗೆ ಮಾಡಿಬಿಡ್ತೀನಿ" ಎಂದು ಅಡಿಗೆ ಮನೆಯ ಒಳಗೆ ಹೋದಳು.

ಕೃತಿಕಾ ಗೋಡೆಗೆ ನೇತಾಕಿದ್ದ ಫೋಟೋಗಳನ್ನು ನೋಡಲು ಎದ್ದು ನಿಂತಳು. ಅಲ್ಲಿದ್ದ ಅಮರನಾಥನ ತಮ್ಮ , ತಂಗಿ ಮತ್ತು ಅವನ ತಂದೆಯ ಭಾವಚಿತ್ರಗಳನ್ನು ನೋಡಿದಳು. "ಅಮರನಾಥ " ಅವನ ತಾಯಿ ಅಡಿಗೆ ಮನೆಯ ಒಳಗಿಂದಲೆ ಕರೆದಳು. ಅಮರನಾಥ ಓಡಿ ಬಂದು "ಏನಮ್ಮ....?" ಕೇಳಿದ. ಮಾಂಸ ತಿನ್ನುತಾಳೇನೊ ಆ ಹುಡುಗಿ....?" ಎಲ್ಲಾ ತಿನ್ನುತಾಳಮ್ಮ ಎಂದ. "ಹೋಗಿ ಒಂದರ್ಧ ಕೆಜಿ ತರ್ತಿಯೇನೊ....? ಎಂದಳು ಅಮರನಾಥನ ತಾಯಿ. ಅಮರನಾಥನ ತಾಯಿಗೆ ಯಾರೇ ಮನೆಗೆ ಬಂದರು ಮಾಂಸದ ಊಟ ಹಾಕಿದರೇನೆ ತೃಪ್ತಿ. ಮಾಂಸ ಸಾರು ಮಾಡುವುದರಲ್ಲಿ ಅವನ ತಾಯಿ ಎತ್ತಿದ ಕೈ.

"ಬೇಡ ಸುಮ್ಮನೆ ಇರಮ್ಮ" ಅಮರನಾಥ ಹೇಳಿದ. "ಇವೊತ್ತು ಶನಿವಾರ " ಹೆಣ್ಣು ಹುಡುಗಿ. ಇವೊತ್ತು ಬೇಡ ಬಿಡು" ತನಗೆ ತಾನೆ ಹೇಳಿಕೊಂಡಳು. ಅಮರನಾಥ ಅಡಿಗೆ ಮನೆಯಿಂದ ಕೃತಿಕಾ ಕುಳಿತಿದ್ದ ಹಾಲ್‌ಗೆ ಬಂದು ಕುಳಿತುಕೊಂಡ. ಇವನು ಹುಡುಗೀನ ಯಾವೊತ್ತು ಮನೆಗೆ ಕರೆದುಕೊಂಡು ಬರೊದಿಲ್ಲವಲ್ಲ....? ಇವೊತ್ತು ಯಾಕೆ ಕರೆದುಕೊಂಡು ಬಂದ....? ಆ ಹುಡುಗಿ ಬೇರೆ ಕಾಲಿಗೆ ಬೀಳ್ತಾಳೆ....? ತುಂಬಾ ಸುಂದರವಾಗಿದ್ದಾಳೆ. ಯಾವ ಜಾತೀನೊ ಏನೊ....? ಅಡಿಗೆ ಮಾಡುತ್ತ ಅಮರನಾಥನ ತಾಯಿ ತನಗೆ ತಾನೆ ಒಳಗೊಳಗೆ ಮಾತನಾಡಿಕೊಳ್ಳುತ್ತಿದ್ದಳು.

“ನಮ್ಮ ಮನೆ ಚಿಕ್ಕ ಮನೆ ” ಅಮರನಾಥನ ಮನಸ್ಸಿನಲ್ಲಿದ್ದುದ್ದನ್ನು ಅವನ ತಾಯಿ ಅಡಿಗೆ ಮನೆಯ ಒಳಗಿಂದ ಹೇಳಿದಳು. ಅಷ್ಟರಲ್ಲಿ ಕೃತಿಕಾ ಎದ್ದು ಅಡಿಗೆ ಮನೆಯ ಒಳಗೆ ಬಂದಿದ್ದಳು. “ಅಡಿಗೆ ಮನೆ ಗಲೀಜಾಗಿ ಇದೆಯಮ್ಮ. ಇನ್ನು ಕ್ಲೀನ್ ಮಾಡಿಲ್ಲ ” ಅಮರನಾಥನ ತಾಯಿಯ ಮಾತಿಗೆ “ಏನು ಮಾಡ್ತಾ ಇದ್ದೀರಾ ಆಂಟಿ....? ನಾನೂ ಮಾಡ್ಲ ...” ಎಂದಳು ಕೃತಿಕಾ.

“ನೀನು ಏನು ಮಾಡ್ತೀಯಾ ಬಿಡಮ್ಮ ಹಿತಿಕೆ ಬೇಳೆ ಸಾರಾಗಿದೆ. ಅದರ ಜೊತೆಗೆ ದೋಸೆ ಹಾಕಿಕೊಡ್ಲ....? ಚೆನ್ನಾಗಿರುತ್ತೆ. ಇಲ್ಲ ಅಂದರೆ ಎರಡೇ ನಿಮಿಷ ಅನ್ನ ಮಾಡ್ತೀನಿ ಇರು. ಹಿತಿಕೆ ಬೇಳೆ ಸಾರಿಗೆ ತುಪ್ಪ ಹಾಕಿಕೊಂಡು ತಿಂದರೆ ಚೆನ್ನಾಗಿರುತ್ತೆ. ನಿಮ್ಮೂರು ಕಡೆ ಹಿತಿಕೆ ಬೇಳೆ ಸಾರು ಮಾಡ್ತಾರಾ....?” ಕೇಳಿದಳು. “ಎಲ್ಲಿ ತೋರಿಸಿ....?” ಎಂದಿದ್ದೆ ಅಮರನಾಥನ ತಾಯಿ ತಟ್ಟೆ ತೆಗೆದು ಸೌಟಿನಲ್ಲಿ ಎತ್ತಿ ತೋರಿಸಿದಳು. ಗಮ್ಮನೆ ವಾಸನೆ ಅವಳ ಮೂಗಿಗೆ ಬಡಿಯಿತು.

“ದೋಸೇನು ಹಾಕಿ, ಅನ್ನಾನು ಮಾಡಿ ಎರಡರಲ್ಲೂ ತಿಂತೀನಿ. ಆದರೆ ಸ್ವಲ್ಪ ಸ್ವಲ್ಪ” ಎಂದಳು ಕೃತಿಕಾ. ಕುಕ್ಕರ್‌ನಲ್ಲಿ ಅನ್ನಕ್ಕಿಟ್ಟು ಎರಡು ದೋಸೆ ಮಾಡಿ ತಟ್ಟೆಗೆ ಹಾಕಿ ಸಾರನ್ನು ತಟ್ಟೆಗೆ ಹಾಕಿಕೊಟ್ಟಳು. ಕೃತಿಕಾ ಹಾಲ್‌ಗೆ ಬಂದು ಕುಳಿತುಕೊಂಡು ತಿನ್ನತೊಡಗಿದಳು. ಅಮರನಾಥನ ತಾಯಿ ನೋಡಲೆಂದೇ ಕೃತಿಕಾ ದೋಸೆಯನ್ನು ಮುರಿದುಕೊಂಡು ಸಾರಿನಲ್ಲಿ ಅದ್ದಿ ಅಮರನಾಥ ಬೇಡ ಬೇಡವೆಂದರೂ ಅವನ ಬಾಯಿಗೆ ಇಟ್ಟಳು. ಅಮರನಾಥನ ತಾಯಿ ಅಡಿಗೆ ಮನೆಯ ಒಳಗಿಂದ ಎಲ್ಲಾ ನೋಡುತ್ತಿದ್ದಳು. ಕೃತಿಕಾ ಒಂದು ರೀತಿಯಲ್ಲಿ ತನ್ನ ಮನಸ್ಸಿನಲ್ಲಿ ಇರುವುದನ್ನು ಅಮರನಾಥನ ತಾಯಿಗೆ ತಿಳಿಸಿಬಿಡೋಣ ಎಂದು ತೀರ್ಮಾನಿಸಿದ್ದಳು.

ಅಮರನಾಥನ ತಾಯಿಗೆ ಆಗಲೆ ಅರ್ಧಕತೆ ಅರ್ಥವಾಗಿ ಹೋಗಿತ್ತು. ಇನ್ನು ಅದು ಅವನ ತಂದೆಗೆ ಮಾತ್ರ ಮುಟ್ಟಬೇಕಿತ್ತು. ಅನ್ನ ಆದಮೇಲೆ ಅದನ್ನು ಸ್ವಲ್ಪ ತಿಂದ ಕೃತಿಕಾ “ತುಂಬಾ ಚೆನ್ನಾಗಿದೆ. ನಿಮ್ಮ ಕೈ ಊಟ ಮಾಡಿಕೊಂಡು ಇಲ್ಲೆ ಇದ್ದುಬಿಡೋಣ ಅನ್ನಿಸತ್ತೆ ಆಂಟಿ” ಎಂದಳು ಈ ಮಾತಿನಿಂದ ಅಮರನಾಥನ ತಾಯಿಗಿದ್ದ ಅಲ್ಪ ಸ್ವಲ್ಪ ಸಂದೇಹಗಳೆಲ್ಲ ಪರಿಹಾರವನ್ನು ಕಂಡುಕೊಂಡಿದ್ದವು.

ಕೃತಿಕಾ ಹೋಗುವಾಗ ಅಮರನಾಥನ ತಾಯಿ ಹೂವು, ಹಣ್ಣು , ಹರಿಷಿನ, ಕುಂಕುಮ ಕೊಟ್ಟು ಕಳುಹಿಸಿದಳು. ಕೃತಿಕಾ ಕುಂಕುಮ ತೆಗೆದು ಹಣೆಯಲ್ಲಿ ಇಟ್ಟುಕೊಳ್ಳುವಾಗ ಅಮರನಾಥನ ಕಡೆಗೆ ನೋಡಿ ಕಣ್ಣುಬ್ಬುಗಳನ್ನು ಹಾರಿಸಿದ್ದಳು. ಅಮರನಾಥ “ಅಮ್ಮ ಕೃತಿಕಾನ ಆಟೊ ಹತ್ತಿಸಿ ಹಾಗೆ ಸವ್ಯನ ಮನೆಗೆ ಹೋಗಿಬರ್ತೀನಿ”

ಎಂದು ಹೇಳಿ ಹೊರಟುಹೋದ. ಅಮರನಾಥನ ತಾಯಿ ಹಿಂದೆ ನಿಂತುಕೊಂಡು ಇಬ್ಬರು ಹೋಗುವುದನ್ನೇ ನೋಡುತ್ತಿದ್ದಳು. ಈ ಹುಡುಗ ಇಷ್ಟು ದಿನ ಏನೂ ಹೇಳಲಿಲ್ಲವಲ್ಲ....? ಈಗ ಇದ್ದಕ್ಕಿದ್ದಾಗ್ಗೆ ಹುಡುಗೀನ ಮನೇಗೆ ಕರೆದುಕೊಂಡು ಬಂದುಬಿಟ್ಟನಲ್ಲ....? ಹುಡುಗ ದೊಡ್ಡವನಾಗಿಬಿಟ್ಟ. ಮಕ್ಕಳು ಎಷ್ಟು ಬೇಗನೆ ದೊಡ್ಡವರಾಗಿಬಿಡ್ತಾರೆ.....? ಹುಡುಗಿ ಲಕ್ಷಣವಾಗಿದ್ದಾಳೆ. ಮನೆಗೆ ಬರಲಿ ಅವನನ್ನ ಎಲ್ಲಾ ಕೇಳಿಬಿಡ್ತೀನಿ. ಮನಸ್ಸಿನಲ್ಲೆ ನಕ್ಕಳು.

ಕೃತಿಕಾ ಮತ್ತು ಅಮರನಾಥ ಆಟೋದಲ್ಲಿ ಕುಳಿತುಕೊಂಡು ಒಂದು ಪಾರ್ಕಿನ ಕಡೆಗೆ ಹೋಗುವಂತೆ ತಿಳಿಸಿದರು. "ನಿಮ್ಮ ಮನೆಯಲ್ಲಿ ನೀನು ನಮ್ಮ ಮದುವೆ ಬಗ್ಗೆ ಕೇಳ್ಲೋ ಅಗತ್ಯಾನೆ ಇಲ್ಲ. ನಿಮ್ಮ ತಾಯಿ ನನ್ನನ್ನ ಒಪ್ಪಿಕೊಂಡುಬಿಟ್ಟರು. ಈಗ ಉಳಿದಿರೊದು ನಮ್ಮ ಮನೆಯಲ್ಲಿ ಒಪ್ಪಿಸೊದು" ಕೃತಿಕಾ ಹೇಳಿದಳು. ಅಮರನಾಥ "ಗಂಡು ಹುಡುಗರಿಗೆ ಈ ತರಹ ಉಪಾಯಗಳು ಯಾಕೆ ಹೊಳೆಯುವುದಿಲ್ಲ....?" ಪೆದ್ದ ಗುಂಡನಂತೆ ಪ್ರಶ್ನಿಸಿದ.

"ಅದಕ್ಕೆ ಬೆಟರ್ ಆಫ್ ಅನ್ನೊದು. ಲೇಡಿಸ್ ಆರ್ ಮೋರ್ ಇಂಟಲಿಜೆನ್ಸ್ ದೆನ್ ಜೆಂಟ್ಸ್" ಅಂತ ದೊಡ್ಡ ದೊಡ್ಡ ಮೇದಾವಿಗಳೆ ಒಪ್ಪಿಕೊಂಡುಬಿಟ್ಟಿದ್ದಾರೆ" ಕೃತಿಕಾ ಕಣ್ಣುಗಳನ್ನು ಆಗಲಿಸಿಕೊಂಡು ಹೇಳಿದಳು. ಅಮರನಾಥನಿಗೆ ಕೃತಿಕಾಳನ್ನು ತಬ್ಬಿಕೊಳ್ಳಬೇಕೆನಿಸಿತು. ಈಗೀಗ ಅವನು ಯಾವ ಸಂಕೋಚವು ಇಲ್ಲದೆ ಆಗಾಗ ತಬ್ಬಿಕೊಳ್ಳುತ್ತಾನೆ. ಮನಸ್ಸಿಗೆ ಖುಷಿಯಾದಾಗಲೆಲ್ಲ ಅವಳ ಮೃದುವಾದ ಕೈಗಳನ್ನು ಹಿಡಿದುಕೊಳ್ಳುತ್ತಾನೆ. ಮಧ್ಯ ಮಧ್ಯ ಕೆನ್ನೆಗಳನ್ನು ತುಟಿಗಳನ್ನು ಮುಟ್ಟಿ ಸ್ಪರ್ಶದ ಆನಂದವನ್ನು ಪಡೆಯುತ್ತಾನೆ. ಜಡವಾಗಿದ್ದ ಅವನ ದೇಹದ ಅಣುಗಳನ್ನೆಲ್ಲ ತಟ್ಟಿ ಎಬ್ಬಿಸಿ ಸ್ಪರ್ಶದ ಸುಖವನ್ನು ತೋರಿಸಿರುವ ಕೃತಿಕಾ ಅವನನ್ನು ತನಗೆ ಇಷ್ಟವಾದ ರೀತಿಯಲ್ಲಿ ಆಡಿಸಿಕೊಳ್ಳುತ್ತಿದ್ದಾಳೆ. ಒಂದೆರಡು ಸಲ ತುಟಿಗಳಿಗೆ ತುಟಿಗಳನ್ನು ಒತ್ತಿ ಆನಂದದಲ್ಲಿ ತೇಲಾಡಿದ್ದಾನೆ. ಮೊದಲ ಬಾರಿಗೆ ಅಮರನಾಥ ತನ್ನ ತುಟಿಗಳನ್ನು ಕೃತಿಕಾ ತುಟಿಗಳಿಗೆ ಒತ್ತಿದಾಗ ಮೈಯೆಲ್ಲಾ ಕಂಪನಗೊಂಡಿತ್ತು. ಮೊದಲ ಬಾರಿಗೆ ಹೆಣ್ಣು-ಗಂಡಿನ ನಡುವೆ ಇರುವ ಸ್ಪರ್ಶ ಸುಖ ಏನೆಂಬುದನ್ನು ಸ್ವಲ್ಪ ಸ್ವಲ್ಪವಾಗಿ ಅರ್ಥಮಾಡಿಕೊಳ್ಳುತ್ತಿದ್ದಾನೆ.

ಅವರಿಬ್ಬರು ಎಷ್ಟೊ ಹೊತ್ತಿನಿಂದ ಮಾತುಗಳಲ್ಲಿ ಮುಳುಗಿದ್ದರು. ಸೂರ್ಯ ಪಶ್ಚಿಮಕ್ಕೆ ವಾಲಿಕೊಂಡು ಆಕಾಶದಲ್ಲಿ ಕೈ ಎತ್ತಿ ವಿದಾಯ ಹೇಳುತ್ತಿದ್ದಂತೆ ಅವರು ಬಿಡುಗಡೆಯಾಗುವ ಸಮಯ ಬಂದೇಬಿಟ್ಟಿತು. ಒಬ್ಬರ ಕಣ್ಣುಗಳಲ್ಲಿ ಇನ್ನೊಬ್ಬರು ಇಣುಕಿನೋಡುತ್ತ ಕುಳಿತುಕೊಂಡಿದ್ದಾರೆ. ಅವನು ಫೌಜಿಗೆ ಹೋಗುವ ಸಿಪಾಯಿಯಂತೆ ಕಾಣುತ್ತಿದ್ದರೆ, ಅವಳು ನೀರು ತರಲು ನದಿಗೆ ಹೋಗುವ ಬಾಲೆಯಂತೆ ಕಾಣುತ್ತಿದ್ದಾಳೆ.

ಕೃತಿಕಾ ಹತ್ತಿರಕ್ಕೆ ಮುಖತಂದಳು. ಅಮರನಾಥ ಅವಳ ತುಟಿಗಳನ್ನು ತನ್ನ ತುಟಿಗಳಿಂದ ಸ್ಪರ್ಶಿಸಿದ. ಇಬ್ಬರು ಎದ್ದು ನಿಂತು ರಸ್ತೆಗೆ ಬಂದರು. ಆಟೋ ನಿಂತಿತ್ತು. ಕೃತಿಕಾ ಕುಳಿತುಕೊಂಡು ಗಾಳಿಯಲ್ಲಿ ಕೈ ಆಡಿಸುತ್ತಾ ಹಾಸ್ಟೆಲ್ ಕಡೆಗೆ ಹೊರಟುಹೋದಳು. ಕೃತಿಕಾ ನಾಳೆ ಬೆಳಗ್ಗೆ ಹಾಸ್ಟಲ್ ಖಾಲಿಮಾಡಿ ರೈಲು ನಿಲ್ದಾಣಕ್ಕೆ ಬಂದರೆ ಅಮರನಾಥ ಅವಳನ್ನು ಬೀಳ್ಕೊಡಲು ರೈಲು ನಿಲ್ದಾಣಕ್ಕೆ ಬರುವುದಾಗಿ ತಿಳಿಸಿದ್ದಾನೆ.

* * *

ಅಂದು ರಾತ್ರಿ ಅಮರನಾಥನ ಮನೆಯಲ್ಲಿ ಅವನ ತಂದೆ ತಾಯಿ ಮತ್ತು ಮಕ್ಕಳು ಊಟಮಾಡಿ ಮನೆಯ ಹೊರಗೆ ಕುಳಿತುಕೊಂಡಿದ್ದರು. ಅಮರನಾಥ ಬೆಳಗ್ಗೆ ಕೃತಿಕಾ ಜೊತೆಗೆ ಹೋದವನು ಇನ್ನೂ ಬಂದಿರಲಿಲ್ಲ. ಇಬ್ಬರು ಮಕ್ಕಳು ಹೊರಗಡೆ ನಿಂತುಕೊಂಡು ನಕ್ಷತ್ರಗಳನ್ನು ವೀಕ್ಷಿಸುತ್ತಿದ್ದಾರೆ.

''ಎಲ್ಲೋ ಇವನು ಇಷ್ಟು ಹೊತ್ತಾದರು ಬರಲಿಲ್ಲ....?ಅಮರನಾಥನ ತಂದೆ ತನ್ನ ಪತ್ನಿಯನ್ನು ಕೇಳಿದರು. ''ಮಕ್ಕಳು ಎಷ್ಟು ಬೇಗನೆ ದೊಡ್ಡವರಾಗಿಬಿಡ್ತಾರೆ ....?'' ಎಂದಳು ಪತ್ನಿ. ಗಂಡನಿಗೆ ಅರ್ಥವಾಗದೆ ''ಏನೇ ಅದು....?'' ಪ್ರಶ್ನಿಸಿದರು. ''ಏನೂ ಇಲ್ಲ . ನೀವು ಅವನಿಗೆ ಬೈಯ್ಯಬಾರದು'' ಗಂಡನಿಗೆ ಕಂಡೀಷನ್ ಹಾಕಿದಳು. ಇನ್ನು ಸ್ವಲ್ಪ ಕುತೂಹಲಗೊಂಡು ''ಅದೇನೊ ಹೇಳೇ....? ನಾನ್ಯಾಕೆ ಬೈತೀನಿ....? ನನಗೇನು ಹುಚ್ಚು ಹಿಡಿದಿದೆಯಾ....? ಸುಮ್ಮ ಸುಮ್ಮನೆ ಬಯ್ಯೊದಕ್ಕೆ.....?'' ತುಸು ಜೋರಾಗಿ ಹೇಳಿದರು.

''ಅವನು ಬೆಳಗ್ಗೆ ಯಾರೊ ಹುಡ್ಗೀನ ಮನೆಗೆ ಕರೆದುಕೊಂಡು ಬಂದಿದ್ದ. ಹುಡುಗಿ ತುಂಬಾ ಲಕ್ಷಣವಾಗಿದ್ದಾಳೆ. ಆ ಹುಡುಗಿ ಬಂದಿದ್ದೆ ಮನೆಯೆಲ್ಲ ಓಡಾಡಿಬಿಟ್ಲು . ಅಡಿಗೆ ಮನೆಗೆ ಬಂದು ನಾನು ದೋಸೆ ಮಾಡ್ತೀನಿ ಆಂಟಿ ಅಂತ ಸೌಟು ತೆಗೆದುಕೊಂಡು ದೋಸೆ ಮಾಡಿದಳು'' ಅಷ್ಟೇಳಿ ಮುಂದಿನ ವಿಷಯ ಹೇಳಲೊ ಬೇಡವೊ ಎಂದು ಸುಮ್ಮನಾದಳು. ''ಅದಕ್ಕೇನು....? ಯಾರೊ ಜೊತೆಯಲ್ಲಿ ಓದೊ ಹುಡುಗೀನ ಕರೆದುಕೊಂಡು ಬಂದಿರ್ತಾನೆ '' ಎಂದರು. ''ನಿಮಗೆ ಅರ್ಥ ಆಗೊದಿಲ್ಲಾರಿ. ನಾಳೆ ಯಾವುದೊ ಒಂದು ಹುಡುಗೀನ ಕರೆದುಕೊಂಡು ಬಂದು ಮದುವೆ ಮಾಡಿಕೊಳ್ತೀನಿ ಅಂತಾನೆ....?'' ಎಂದಳು.

''ಅವನಿಗೆ ಇಷ್ಟವಾದ ಹುಡುಗೀನ ಮದುವೆ ಮಾಡಿಕೊಳ್ತೀನಿ ಅಂದರೆ ಮಾಡಿಕೊಳ್ಳಲಿ ಬಿಡು. ಅದರಲ್ಲೇನಿದೆ ತಪ್ಪು....?'' ಎನ್ನುತ್ತಿದ್ದಂತೆ ''ಅಲ್ಲಾರಿ ಯಾರೊ ಹುಡುಗಿ....? ಅವರಪ್ಪ ಯಾರೊ, ಅವರ ಅಮ್ಮ ಯಾರೊ....? ಗೊತ್ತಿಲ್ಲದೆ ಇರೊ

ಹುಡುಗಿ ಬಂದರೆ ನಮ್ಮ ಮನೆಯಲ್ಲಿ ಇರ್ತಾಳೇನ್ರಿ....?'' ಎಂದಳು. ''ಅವನು ಮದುವೆ ಮಾಡಿಕೊಂಡು ನಮ್ಮ ಮನೆಯಲ್ಲಿ ಇರ್ತಾನೇನೆ....? ಅವನಿಗೆ ಎಲ್ಲಿ ಕೆಲಸ ಸಿಕ್ಕುತ್ತೊ ಅಲ್ಲಿ ಇರ್ತಾನೆ. ಅವರ ಅಮ್ಮ ಅಪ್ಪನಿಂದ ನಮಗೇನು ಬೇಕಾಗಿದೆ....? ಹುಡುಗಿ ಒಳ್ಳೆಯವಳಾದರೆ ಸರಿ'' ಎಂದರು.

ಅಮರನಾಥನ ತಾಯಿ ಕೆಲವು ಕ್ಷಣಗಳು ಸುಮ್ಮನಾದಳು. ''ಸ್ವಲ್ಪ ಎಲೆ ಅಡಿಕೆ ಇದ್ದರೆ ಕೊಡಬಾರದ....?'' ಎಂದಿದ್ದೆ ಪತ್ನಿ ಎದ್ದುಹೋಗಿ ಮನೆಯ ಒಳಗಿಂದ ವೀಳ್ಯದ ಎಲೆಯನ್ನು ತೆಗೆದುಕೊಂಡು ತನ್ನ ಸೀರೆಗೆ ಒರೆಸಿಕೊಂಡು ಸುಣ್ಣ ಹಚ್ಚಿ ಅಡಿಕೆಯನ್ನು ಅದರಲ್ಲಿಟ್ಟು ಮಡಿಚಿ ಗಂಡನಿಗೆ ಕೊಡುತ್ತ , ''ಆ ಹುಡುಗಿ ತಟ್ಟೆಯಲ್ಲಿ ತಿನ್ನುತ್ತಾ ಅಮರನಾಥನ ಬಾಯಿಗೂ ಇಡ್ತಾ ಇದ್ದಳು'' ಎಂದು ಹೇಳಿ ಪಕ್ಕದಲ್ಲಿ ಕುಳಿತುಕೊಂಡಳು. ಈಗ ಸ್ವಲ್ಪ ಗಂಭೀರವಾಗಿ ಯೋಚಿಸುತ್ತಿರುವಂತೆ ಕಂಡ ಗಂಡನ ಮುಖವನ್ನು ನೋಡಿದಳು.

''ಯಾರು ಆ ಹುಡುಗಿ....?'' ಗಂಡನ ಪ್ರಶ್ನೆ ''ತುಂಬಾ ಸುಂದರವಾಗಿದ್ದಾಳೆ. ಏನೊ ಹೆಸರು ಹೇಳಿದಳು....?'' ತಾಯಿ ಯೋಚಿಸುತ್ತಿದ್ದಂತೆ ಆಟ ಆಡುತ್ತಿದ್ದ ಮಗಳು ''ಕೃತಿಕಾ'' ಎಂದಳು. ''ನಿನಗೆ ಹೇಗಮ್ಮ ಗೊತ್ತು.....?'' ತಂದೆಯ ಪ್ರಶ್ನೆ. ''ಅಮ್ಮಾನೆ ತುಂಬಾ ಹೊತ್ತು ಯೋಚಿಸಿ ನನಗೆ ಹೇಳಿದಳು'' ಎಂದಳು ಹುಡುಗಿ. ''ಗುಂಟೂರು.... ಆಂಧ್ರಾನಂತೆ. ಕನ್ನಡ ಚೆನ್ನಾಗಿ ಮಾತನಾಡ್ತಾಳೆ '' ಎಂದಳು.

''ಜೊತೆಯಲ್ಲಿ ಓದೊ ಹುಡುಗಿಯಾದ ಮೇಲೆ ಇನ್ನು ಒಳ್ಳೇದು. ಇಬ್ಬರು ಡಾಕ್ಟರು. ಈಗ ಎಲ್ಲರೂ ಹಾಗೇನೆ. ಹುಡುಗ ಹುಡುಗಿ ಇಬ್ಬರೂ ಡಾಕ್ಟರುಗಳು. ಇಲ್ಲ ಇಂಜಿನಿಯರ್‌ನ ಮದುವೆ ಮಾಡಿಕೊಳ್ತಾರೆ. ಗಂಡನ ಮಾತಿಗೆ ''ಯಾರನ್ನೋ ಮದುವೆ ಮಾಡಿಕೊಂಡರೆ ನಮ್ಮನ್ನ ನೋಡ್ತಾನೇನ್ರಿ....? ಎನ್ನುವ ಪತ್ನಿಯ ಪ್ರಶ್ನೆಗೆ ನಕ್ಕ ಗಂಡ ''ನಾವು ನೋಡಿ ಮದುವೆ ಮಾಡಿದ ಮೇಲೆ ನೋಡ್ತಾರೆ ಅಂತ ಏನು ಗ್ಯಾರಂಟಿ....? ಅವರು ಚೆನ್ನಾಗಿದ್ದರೆ ಸಾಕು'' ಎಂದರು.

ಅಷ್ಟರಲ್ಲಿ ಅಮರನಾಥ ದಪ್.....ದಪ್.....ಎಂದು ಬೂಟುಗಳನ್ನು ತುಳಿಯುತ್ತಾ ಬಂದ. ''ಏನು ಅಮರನಾಥ......? ರಾತ್ರಿಯೆಲ್ಲಾ ಯಾಕೆ ಓಡಾಡ್ತೀಯ ಇದು ಬೆಂಗಳೂರು'' ಎನ್ನುತ್ತಿದ್ದಂತೆ ''ಇಲ್ಲಪ್ಪ ''ಎಂದು ಬೂಟು ಬಿಚ್ಚಿ ಮನೆ ಒಳಗೆ ಹೋದ. ಅವನ ತಾಯಿ ಕುಳಿತೆ ಇರುವುದನ್ನು ಕಂಡು ''ಹೋಗು, ಹೋಗಿ ಅವನಿಗೆ ಊಟ ಇಡು'' ತಂದೆ ಹೇಳಿದರು. ತಾಯಿ ಎದ್ದು ಹೋಗಿ ಊಟ ಇಟ್ಟು ಹೊರಕ್ಕೆ ಬಂದರು..

''ಆ ತರಹದ ಹುಡುಗಿ ನಮ್ಮ ಮನೆಗಳಲ್ಲೆ ಇಲ್ಲಾರಿ''' ಅಮರನಾಥನ ತಾಯಿ

ಗಂಡನಿಗೆ ನಿಧಾನವಾಗಿ ಹೇಳಿದಳು. ಅಷ್ಟರಲ್ಲಿ ಊಟ ಮಾಡಿ ಹೊರಗೆ ಬಂದ ಅಮರನಾಥ ತನ್ನ ತಂದೆಯ ಭುಜದ ಮೇಲೆ ಕೈಗಳನ್ನು ಹಾಕಿಕೊಂಡು ಪಕ್ಕದಲ್ಲಿ ಕುಳಿತುಕೊಂಡ. ತಂದೆಗೆ ಏನೊ ಅಪ್ಯಾಯ ಮೂಡಿ ಒಳಗೊಳಗೆ ಖುಷಿಯಾಗಿ ಆಕಾಶದ ಕಡೆಗೆ ನೋಡಿದರು. ಒಂದೊಂದು ಸಲ ಅಪ್ಪ ಮಗ ಇಬ್ಬರೂ ಒಬ್ಬರ ಮೇಲೆ ಒಬ್ಬರು ಕೈ ಕೈ ಹಾಕಿಕೊಂಡು ಓಡಾಡುವುದನ್ನು ನೋಡಿದ ತಾಯಿ ''ಇವರು ತಂದೆ ಮಗ ಅಲ್ಲ. ಅಣ್ಣ ತಮ್ಮ'' ಎಂದುಕೊಂಡು ನಗುತ್ತಿದ್ದಳು.

''ಏನು ಅಮರನಾಥ ಪರೀಕ್ಷೆ ಹೇಗ್‌ಮಾಡಿದ್ದೀಯಾ....?'' ಎಂದರು. ಫೈಲ್ ಅಂತು ಆಗೊದಿಲ್ಲ ಅಪ್ಪ'' ಎಂದ ಅಮರನಾಥ. ''ಏನು ಅದಕ್ಕೆ ಅರ್ಥ....?'' ತಂದೆಯ ಪ್ರಶ್ನೆ. ''ಪಾಸ್ ಆಗುತ್ತೆ'' ಪಾಸ್ ಎಲ್ಲರೂ ಆಗ್ತಾರೆ'' ''ಅಯ್ಯೋ ಎಷ್ಟು ಅಂತ ಓದುವುದು....? ಓದಿ....ಓದಿ .....ತಲೆ ಕೆಟ್ಟೋಯಿತು. ಸದ್ಯಕ್ಕೆ ಕೋರ್ಸ್ ಮುಗಿಯಿತಲ್ಲ....? ಹೌಸ್ ಸರ್ಜನ್ ಎಲ್ಲಿ ಸಿಕ್ಕಿತ್ತೊ....? ಬೆಂಗಳೂರಿನಲ್ಲಿ ಸಿಕ್ಕಿದರೆ ಚೆನ್ನಾಗಿರುತ್ತೆ'' ಅಮರನಾಥ ಹೇಳಿದ. ''ಯಾಕೆ ಬೆಂಗಳೂರಿನಲ್ಲಿ ಸಿಗುವುದಿಲ್ಲವೇನು....?'' ತಂದೆಯ ಪ್ರಶ್ನೆ. ಗೊತ್ತಿಲ್ಲ. ಇನ್‌ಫ್ಲೂಯನ್ಸ್ ಇಲ್ದೆ ಇದ್ದರೆ ಒಳ್ಳೆ ಆಸ್ಪತ್ರೆಯಲ್ಲಿ ಸಿಗುವುದಿಲ್ಲ'' ಅಮರನಾಥ ಹೇಳಿದ.

''ಹೌದಾ ಯಾರಿಗಾದರು ಹೇಳಿಸಬೇಕಾ....?'' ತಂದೆಯ ಮಾತಿಗೆ ರಿಸಲ್ಟ್ ಬರಲಿ ಆ ಮೇಲೆ ಹೇಳಿಸೋಣ. ನನ್ನ ಫ್ರೆಂಡ್ ಹರ್ಷ ಇದ್ದಾನೆ. ಅವನಿಗೆ ಹೇಳ್ತೀನಿ. ಅಮರನಾಥ ಹೇಳಿದ. ಅವನ ತಂದೆ ಒಳಗೊಳಗೆ ಏನೊ ಯೋಚಿಸುತ್ತಿದ್ದರು. ಅಮರನಾಥ ಅವರ ಕಡೆಗೆ ನೋಡತೊಡಗಿದ. ''ಅಮರನಾಥ ಬಡವರಿಗೆ ಸಹಾಯ ಮಾಡಬೇಕಪ್ಪ. ಹಣವಂತರಿಗೇನು ಎಲ್ಲಿ ಬೇಕಾದರು ದುಡ್ಡು ಬಿಸಾಕಿ ಕಾಯಿಲೆ ವಾಸಿ ಮಾಡಿಕೊಳ್ತಾರೆ. ಬಡವರು ಎಲ್ಲಿಗೋಗುವುದು.....? ಅವರಿಗೆ ಹೊಟ್ಟೆ ಹೊರೆಯುವುದೇ ದೊಡ್ಡ ಕಷ್ಟ. ಎಲ್ಲಾ ಕಷ್ಟಗಳು ಬಡವರ ಪಾಲಾದರೆ ಎಲ್ಲಾ ಸೌಕರ್ಯಗಳು ಹಣವಂತರ ಪಾಲಾಗಿದೆ'' ಎಂದರು.

ಅಮರನಾಥ ತಂದೆಯ ಮಾತುಗಳನ್ನು ಕೇಳುತ್ತ ಬಹುಶಃ ಬಡವರಿಗೆ ಇರುವಷ್ಟು ಪ್ರೀತಿ ಕರುಣೆ ಯಾರಿಗೂ ಇರುವುದಿಲ್ಲ, ದೇವರು ಇದ್ದರೆ ಬಡವರಲ್ಲೆ ಇರ್ತಾನೆ ಎಂದುಕೊಂಡ. ಅಮರನಾಥನ ತಾಯಿ ಇಬ್ಬರ ಮಾತುಗಳನ್ನು ಕೇಳಿಸಿಕೊಳ್ಳುತ್ತಿದ್ದಳು. ಜೊತೆಗೆ ಆಕಾಶದಲ್ಲಿ ನಕ್ಷತ್ರಗಳು ಅವರ ಮಾತುಗಳನ್ನು ಆಲಿಸುತ್ತಿರುವಂತೆ ತೋರುತ್ತಿದ್ದವು.

✲ ✲ ✲

ಮರುದಿನ ರೈಲು ನಿಲ್ದಾಣದಲ್ಲಿ ಅಮರನಾಥನಿಂದ ಬೀಳ್ಕೊಂಡ ಕೃತಿಕಾ ತನ್ನ ಊರು ತಲುಪಿದಳು. ಅವಳು ಬರುವುದನ್ನು ತಿಳಿದುಕೊಂಡಿದ್ದ ಅವಳ ಕುಟುಂಬ ರೈಲು ನಿಲ್ದಾಣದಲ್ಲಿ ಕಾಯುತ್ತಿತ್ತು. ಕೃತಿಕಾ ಮೊದಲಿಗಿಂತಲೂ ಇನ್ನಷ್ಟು ತೆಳ್ಳಗೆ ಬೆಳ್ಳಗೆ ನಾಜೂಕಾಗಿ ಬೊಂಬೆಯಂತೆ ಕಂಡಳು. ಅವಳು ಬೋಗಿಯಿಂದ ಬೇಗನೆ ಇಳಿದು ಬರುತ್ತಿದ್ದಂತೆ ಅವಳ ತಂದೆ ತಾಯಿಗೆ ಅವಳನ್ನು ನೋಡಿ ನಮ್ಮೂರಿನ ಬಿಸಿಲುಗಿಂತ ಬೆಂಗಳೂರಿನ ವಾತಾವರಣ ಮತ್ತು ನೀರು ಅಂತಾದೇನೊ ಎಂದುಕೊಂಡರು. ಕೃತಿಕಾ ಓಡಿಬಂದು ತಂದೆ ತಾಯಿಯನ್ನು ತಬ್ಬಿಕೊಂಡಳು. ಅನಂತರ ಅವಳ ತಂದೆ ಸೂಟ್‌ಕೇಸುಗಳನ್ನು ಕೂಲಿ ಆಳಿಗೆ ತೆಗೆದುಕೊಳ್ಳುವಂತೆ ಹೇಳಿದರು. ''ಏನಮ್ಮ ಪ್ರಯಾಣ ಸುಖವಾಗಿತ್ತಾ....?'' ಎಂದಳು ತಾಯಿ. ''ಚೆನ್ನಾಗಿತ್ತಮ್ಮ ಏನೂ ತೊಂದರೆ ಆಗಲಿಲ್ಲ'' ಎಂದಳು ಕೃತಿಕಾ. ''ಪರೀಕ್ಷೆ ಚೆನ್ನಾಗಿ ಬರೆದಿದ್ದೀಯೇನಮ್ಮ....?'' ತಾಯಿ ಪ್ರಶ್ನೆಗೆ, ''ಚೆನ್ನಾಗಿ ಬರೆದಿದ್ದೀನಮ್ಮ. ಖಂಡಿತ ಪಾಸ್ ಆಗ್ತೀನಿ'' ಎಂದಳು ಕೃತಿಕಾ. ''ನನ್ನ ಮಗಳು ಡಾಕ್ಟರ್ ಆಗಿಬಿಟ್ಟಳು'' ಎಂದರು ಕೃತಿಕಾ ತಂದೆ ಹೆಮ್ಮೆಯಿಂದ. ''ಥ್ಯಾಂಕ್‌ಯು ಪಪ್ಪಾ'' ಎಂದ ಕೃತಿಕಾ ತಂದೆಯ ಕೈ ಹಿಡಿದುಕೊಂಡಳು. ''ನಡಿಯಮ್ಮ ಹೋಗ್ತಾ ಹೋಗ್ತಾ ಮಾತನಾಡಿಕೊಂಡು ಹೋಗೋಣ'' ಎಂದರೆ ತಂದೆ, ''ಮನೆಗೋಗಿ ಚೆನ್ನಾಗಿ ಬಿಸಿ ನೀರಿನಲ್ಲಿ ಸ್ನಾನ ಮಾಡಿಕೊಂಡು ಆರಾಮ ತೆಗೆದುಕೊಳ್ಳುವಿಯಂತೆ ನಡಿಯಮ್ಮ ರೈಲಿನಲ್ಲಿ ಪ್ರಯಾಣ ಮಾಡಿ ಆಯಾಸ ಆಗಿರುತ್ತೆ'' ಎಂದಳು ತಾಯಿ.

ಆಟೊ ಮನೆಕಡೆಗೆ ಧಾವಿಸುತ್ತಿದ್ದಂತೆ ಅವಳ ಹೃದಯ ಮತ್ತೆ ಗೂಡು ಸೇರಿಕೊಳ್ಳುವ ಹಕ್ಕಿಯಂತೆ ಹಾರಾಡುತ್ತಿತ್ತು. ಹೆಣ್ಣು ಮಕ್ಕಳಿಗೆ ತಾವು ಹುಟ್ಟಿದ ಮನೆ ಎಂದರೆ ಎಲ್ಲಿಲ್ಲದ ಪ್ರೀತಿ. ಇಷ್ಟು ಕೋಮಲವಾದ ಹೆಣ್ಣು ತನ್ನ ಮನಸ್ಸು ದೇಹದ ಸಮೇತ ಪ್ರಿಯತಮನ ಮನೆ ತಲುಪಿ ಅಲ್ಲಿ ಗಂಡನಿಗೆ ಪತ್ನಿಯಾಗಿ, ಮಕ್ಕಳಿಗೆ ತಾಯಿಯಾಗಿ ಅತ್ತೆಮಾವಂದಿರಿಗೆ ಸೇವೆ ಮಾಡುತ್ತ ಸುತ್ತ ಮುತ್ತಲಿನ ಸಂಬಂಧಿಗಳ ಆರೈಕೆಯ ಆಸರೆಯಾಗಿ ಸಂಯಮದಿಂದ ಆಲದ ಮರವಾಗಿ ಬಳಲುಬಿಡುತ್ತ ಬೆಳೆಯುವುದು ಒಂದು ಅದ್ಭುತ.

ಕೃತಿಕಾ ಮನೆ ತಲುಪಿದ್ದೆ ಅವಳನ್ನು ನೋಡಿದ ನಾಯಿ ಕುಯ್‌ಗುಡುತ್ತ ಹತ್ತಿರಕ್ಕೆ ಬಂದು, ಅವಳ ಎದುರಿಗೆ ಎರಡು ಕಾಲಿನಲ್ಲಿ ನಿಂತುಕೊಂಡಿತು. ಪೋರ್ಟಿಕೊದಲ್ಲಿ ನಿಂತಿದ್ದ ಕಾರನ್ನು ಓಡಿಹೋಗಿ ಮೃದುವಾಗಿ ತಟ್ಟಿ ಬಂದಳು. ಮನೆಯ ಅಂಗಳದಲ್ಲಿ ಹೂಗಿಡಗಳು ಗಾಳಿಯ ಜೊತೆಗೆ ಆಡಿಕೊಳ್ಳುತ್ತಿದ್ದವು. ಅವಳ ತಮ್ಮ ''ಅಕ್ಕಯ್ಯ....?'' ಎಂದು ಹತ್ತಿರಕ್ಕೆ ಓಡಿಬಂದ. ಆ ಮನೆ ಅವಳನ್ನು ಒಳಕ್ಕೆ ಕರೆದುಕೊಂಡು ತಣ್ಣನೆ ನೆರಳು

ನೀಡಿ ಕೂರಿಸಿಕೊಂಡಿತು. ಗೋಡೆಗಳು ಅವಳ ನಗುವನ್ನು, ಮಾತುಗಳನ್ನು ಆಲಿಸಲು ಅವಳ ಕಡೆಗೆ ತಿರುಗಿ ಕುಳಿತುಕೊಂಡವು.

ಒಂದು ಕಾಲದಲ್ಲಿ ಹೆಣ್ಣುಮಕ್ಕಳು ಮದುವೆ ಮಾಡಿಕೊಂಡು ತನ್ನ ಗಂಡನ ಮನೆಗೆ ಮಾತ್ರ ಹೋಗುತ್ತಿದ್ದರು. ಆದರೆ ಇಂದಿನ ಕಾಲದಲ್ಲಿ ಓದುವುದಕ್ಕೆ, ಓದಿದ ಮೇಲೆ ಉದ್ಯೋಗಕ್ಕಾಗಿ ಬೇರೆ ಬೇರೆ ಕಡೆಗೆ ಹೋಗಬೇಕಾಗುತ್ತದೆ. ಎಷ್ಟೋ ಹೆಣ್ಣುಮಕ್ಕಳು ಊರುಬಿಟ್ಟು ದೂರದ ಊರು, ಪಟ್ಟಣ, ದೇಶಗಳಿಗೂ ಹಾರಿಹೋಗುತ್ತಾರೆ. ಆದರೆ ಅವರಿಗೆ ಅವರು ಹುಟ್ಟಿ ಬೆಳೆದ ಮನೆ ತಂದೆ ತಾಯಿ ಅಕ್ಕ ತಂಗಿ ಅಣ್ಣ ತಮ್ಮ ಸಂಬಂಧಗಳೆಂದರೆ ಎಲ್ಲಿಲ್ಲದ ಪ್ರೀತಿ.

ಕೃತಿಕಾ ಮನೆ ಎಲ್ಲಾ ಓಡಾಡುತ್ತ ಮಾತನಾಡುತ್ತಲೆ ಇದ್ದಳು. ತಂದೆ ಹೊರಗೆ ಹೋಗಿ ಬರುವುದಾಗಿ ಹೊರಟರು. ಸ್ನಾನ ಮಾಡಲು ಬಿಸಿ ನೀರು ಇಟ್ಟಿರುವುದಾಗಿ ಅವಳ ತಾಯಿ ನಾಲ್ಕಾರು ಸಲ ಹೇಳಿ ಅವಳನ್ನು ಸ್ನಾನದ ಕೋಣೆಗೆ ಸಾಗಿಸಿದಳು. ಬಿಸಿ ನೀರಿನಲ್ಲಿ ಸ್ನಾನ ಮಾಡಿ ದೇಹದ ಜೊತೆಗೆ ಮನಸ್ಸನ್ನು ಹಗುರವಾಗಿಸಿಕೊಂಡು ಬಂದ ಕೃತಿಕಾ ಮತ್ತೆ ಮಾತನಾಡ ತೊಡಗಿದಳು. ನಾಲ್ಕು ವರ್ಷಗಳಿಂದ ತನ್ನ ಹೃದಯದಲ್ಲಿ ಅಡಗಿಸಿಟ್ಟುಕೊಂಡಿದ್ದ ವಿಷಯಗಳೆಲ್ಲ ಇಂದು ಎಣೆಯಿಲ್ಲದೆ ಸಾಗಿದ್ದವು. ಕೃತಿಕಾ ತಾಯಿ ಒಂದು ತಟ್ಟೆಯಲ್ಲಿ ಸಾಮ್ರಾಣಿ ಹೊಗೆ ಹಾಕಿಕೊಂಡು ತಂದು ಕೃತಿಕಾ ಮುಂದಿಟ್ಟಳು. ಅನಂತರ ಉಪ್ಪು ಮತ್ತು ಮೆಣಸಿನಕಾಯಿಯನ್ನು ಅವಳ ಮುಂದೆ ನೀವಳಿಸಿ ಬೆಂಕಿಗೆ ಹಾಕಿಬಂದಳು. ಕೃತಿಕಾಳ ತಾಯಿ ಇಂತಹ ಪದ್ಧತಿಗಳನ್ನು ತನ್ನ ತಾಯಿಂದ ಕಲಿತುಕೊಂಡಿದ್ದಳು.

ಕೃತಿಕಾ ತಾಯಿ ವಿಶೇಷವಾದ ಅಡಿಗೆ ಮಾಡಿ ಮಗಳಿಗೆ ಬಡಿಸಿದಳು. ಕೃತಿಕಾ ಊಟ ಚಪ್ಪರಿಸುತ್ತ ''ನಿನ್ನ ಕೈ ಊಟಾನೆ ಊಟ ಅಮ್ಮ'' ಎಂದು ಹೊಗಳುತ್ತಿದ್ದಳು. ಬಹುಶಃ ಎಲ್ಲಾ ಮಕ್ಕಳಿಗೂ ತನ್ನ ತಾಯಿ ಮಾಡಿ ಬಡಿಸುವ ಊಟಕ್ಕಿಂತ ಒಳ್ಳೆರುಚಿ ಇರಲಾರದು. ಅದು ಗಂಜಿಯಾದರು ಸರಿ, ಗೊಜ್ಜಾದರು ಸರಿ, ಅದರ ರುಚಿಯೆ ರುಚಿ. ಅವಳಿಗೆ ಈಗ ಅಮರನಾಥನ ತಾಯಿ ಬಡಿಸಿದ ಊಟದ ಜ್ಞಾಪಕ ಬರುವುದರ ಜೊತೆಗೆ ಅಮರನಾಥನಿಗೆ ತನ್ನ ತಾಯಿ ಮಾಡುವ ಅಡಿಗೆಯನ್ನು ತಿನ್ನಿಸಬೇಕು ಎನ್ನುವ ಯೋಚನೆ ಬಂದಿತು.

ಊಟ ಮಾಡುತ್ತಿರುವ ಕೃತಿಕಾಳನ್ನು ನೋಡುತ್ತಿದ್ದ ಅವಳ ತಾಯಿ, ಮಗಳು ಏನೊ ಯೋಚಿಸುತ್ತಿದ್ದಾಳೆ ಎಂದು ತಿಳಿದುಕೊಂಡಳು. ಕೃತಿಕಾ ಸಣ್ಣಗೆ ನಕ್ಕಳು. ಅದು ಮಾಮೂಲಿ ನಗುವಾಗಿರಲಿಲ್ಲ. ಕುತೂಹಲಗೊಂಡ ತಾಯಿ ''ಏನಮ್ಮ ಏನು

ಜ್ಞಾಪಿಸಿಕೊಂಡೆ.....?'' ಎಂದಳು. ಕೃತಿಕಾ ನಕ್ಕು ಸುಮ್ಮನಾದಳು. ''ಜಾಸ್ತಿ ಓದಿದರೆ ಈಗೇನೆ ಆಗುವುದು'' ಎಂದಳು ತಾಯಿ. ''ಹ.... ಇನ್ನೊಂದು ವಿಷಯ. ನಿಮ್ಮ ಮಾವ ಮೊನ್ನೆ ಮನೆಗೆ ಬಂದೋದರು. ನಿನ್ನನ್ನ ರಾಹುಲ್‌ಗೆ ಕೇಳ್ತಾ ಇದ್ದಾರೆ. ಇನ್ನೂ ಒಂದೆರಡು ಸಂಬಂಧಗಳು ಬಂದಿವೆ '' ಎನ್ನುತ್ತಿದ್ದಂತೆ,

''ನೀವು ಏನು ಹೇಳಿದಿರಿ....?'' ಕೃತಿಕಾ ಪ್ರಶ್ನಿಸಿದಳು. ''ನಿಮ್ಮಪ್ಪ , ನಮ್ಮ ಹುಡುಗಿ ಇನ್ನೂ ಕೋರ್ಸ್ ಮುಗಿಸಿಲ್ಲ. ಅವಳು ಮೊದಲು ಓದು ಮುಗಿಸಲಿ ಆಮೇಲೆ ನೋಡೋಣ. ಅವಳು ಯಾರ್ನ ಇಷ್ಟ ಪಡ್ತಾಳೊ ನೋಡೋಣ ಅಂತ ಇದ್ರು'' ಎಂದಳು. ''ವೆರಿಗುಡ್ ನಮ್ಮಪ್ಪ ನಮ್ಮಪ್ಪಾನೆ....ಅಮ್ಮ ನಾನೆ ಒಬ್ಬ ಒಳ್ಳೆ ಹುಡ್ಗನ್ನ ನೋಡಿ ನಿಮಗೇಳ್ತೀನಿ. ನೀನು ಅಪ್ಪನಿಗೇಳು. ಯಾರೊ ನನಗೆ ಗೊತ್ತಿಲ್ದೆ ಇರೊ ಹುಡ್ಗನ್ನ ಮದುವೆ ಮಾಡಿಕೊಳ್ಳುವುದಕ್ಕಿಂತ ಎಲ್ಲ ಗೊತ್ತಿರೊ ಹುಡ್ಗನ್ನ ಯಾಕೆ ಮದುವೆ ಮಾಡ್ಕೋಬಾರದು ?'' ಕೃತಿಕಾ ಅನಾಯಸವಾಗಿ ತನ್ನ ಗೆಳತಿಗೆ ಹೇಳಿದಂತೆ ಹೇಳಿದಳು.

ಆ ಮಾತು ಕೇಳಿದ ತಾಯಿ ''ಯಾಕೆ ನಿನಗೆ ತಲೆಗಿಲೆ ಕೆಟ್ಹೋಗಿದೆಯೇನು...?'' ಕೋಪಿಸಿಕೊಂಡು ಹೇಳಿದಳು. ಕೃತಿಕಾ ಜೋರಾಗಿ ನಗುತ್ತಾ ಎದ್ದುಬಂದು ತಾಯಿಯನ್ನು ತಬ್ಬಿಕೊಂಡಳು. ಕೃತಿಕಾಳ ಕೈಗಳಿಂದ ಬಿಡಿಸಿಕೊಳ್ಳುತ್ತ ''ಅದಕ್ಕೆ ಹುಡುಗಿಯರ್ನ ಜಾಸ್ತಿ ಓದಿಸಬಾರದು ಅನ್ನೊದು'' ಎನ್ನುತ್ತಿದ್ದಂತೆ ''ಮತ್ತೆ ಯಾಕೆ ಓದಿಸಿದಿರಿ....? ಈಗ ಅನುಭವಿಸಿ'' ಕೃತಿಕಾ ಬಾಯಲ್ಲಿ ಆ ಮಾತುಗಳು ಬಂದುಬಿಟ್ಟದ್ದವು. ತಾಯಿ ಕೃತಿಕಾಳನ್ನು ದುರುಗುಟ್ಟಿ ನೋಡುತ್ತ ಇದ್ದುಬಿಟ್ಟಳು. ಇವಳು ಯಾರೊ ಹುಡ್ಗನ್ನ ಪ್ರೀತಿಸಿಬಿಟ್ಟಳಾ.... ಏನು....? ಕಣ್ಣುಗಳಲ್ಲೆ ಪರೀಕ್ಷಿಸಿದಳು. ಕೃತಿಕಾ ಕೆಲವೊಮ್ಮೆ ತಾಯಿಯನ್ನು ಈ ರೀತಿಯ ಮಾತುಗಳಿಂದ ಗಲಿಬಿಲಿಗೊಳಿಸುತ್ತಿದ್ದಳು. ಆದರೆ ಈ ದಿನ ಹಾಗೆ ಕಾಣಲಿಲ್ಲ. ತಾಯಿಯ ನೋಟವನ್ನು ಎದುರಿಸಲಾರದ ಕೃತಿಕಾ ಹಾಗೆ ಹೇಳಬಾರದಿತ್ತೊ ಏನೊ ಎಂದುಕೊಂಡರು ಯಾವಾಗಲಾದರು ಹೇಳಲೇಬೇಕಲ್ಲ....? ತಡಮಾಡಿದಷ್ಟು ತೊಂದರೆಯೆ ಎಂದು ಆಲೋಚಿಸುತ್ತಿದ್ದಳು.

''ಏನೇ ಏನು ಹೇಳ್ತಾ ಇದೀಯಾ....ನೀನು.....? ನಿಂಬೆಗಿಡಕ್ಕೆ ನೀರು ಎರಚಿದರೆ ಎದ್ದುಬಂದು ಎದೆಗೆ ಹೊಡಿಯಿತಂತೆ. ಯಾರು ಆ ಹುಡುಗ....?'' ಕಣ್ಣುಗಳಲ್ಲೆ ನೂರು ಸಂದೇಹಗಳನ್ನು ತುಂಬಿಕೊಂಡು ಕೇಳಿದಳು. ಇನ್ನೇಕೆ ತಡ ಮಾಡುವುದು....? ''ಅಮ್ಮ ನಾನು ಒಬ್ಬ ಬೆಂಗಳೂರು ಹುಡುಗ್ನ

ಪ್ರೀತಿಸಿಬಿಟ್ಟಿದ್ದೀನಿ. ತುಂಬಾ ಒಳ್ಳೆಯವನು. ನಾನು ಮದುವೆ ಮಾಡಿಕೊಂಡರೆ ಅವನ್ನೇ ಮಾಡಿಕೊಳ್ಳುವುದು. ಅವನೂ ಡಾಕ್ಟರೆ '' ಕೃತಿಕಾ ಅವಳ ತಾಯಿಯ ಕೈಗಳನ್ನು ಹಿಡಿದುಕೊಂಡು ಗಂಭೀರವಾಗಿ ಹೇಳಿಯೇಬಿಟ್ಟಳು. ತಾಯಿಯ ಮನಸ್ಸಿನಲ್ಲಿ ಒಂದು ಬಿರುಗಾಳಿ ಬೀಸಿಹೋಯಿತು.

-ಯಾರೊ ಹುಡುಗ....? ಅವನ ತಂದೆ ತಾಯಿಯೆಂತಹವರೊ ಏನೊ....? ಯಾವ ಜನರೊ....? ಹುಡುಗಿ ಏನೇನು ಕಷ್ಟಗಳನ್ನು ಅನುಭವಿಸುತ್ತಾಳೊ....? ತಾಯಿ, ಮಗಳು ಇಬ್ಬರು ಸುಮಾರು ಹೊತ್ತು ಒಬ್ಬರ ಮುಖಗಳನ್ನೊಬ್ಬರು ನೋಡಿಕೊಳ್ಳುತ್ತಿದ್ದರು. ಅವರು ಮಾತನಾಡಬೇಕಾದ ವಿಷಯಗಳೆಲ್ಲ ಅವರ ಮುಖಗಳ ಮೇಲೆ ಕಾಣಿಸುತ್ತಿದ್ದವು. ಅದೇ ಸಮಯಕ್ಕೆ ಕೃತಿಕಾ ತಂದೆ ಮನೆಯ ಒಳಕ್ಕೆ ಬರುತ್ತ ''ಇದೇನಮ್ಮ ಒಬ್ಬರ ಮುಖ ಒಬ್ಬರು ನೋಡುತ್ತ ಕುಳಿತುಕೊಂಡುಬಿಟ್ಟಿದ್ದೀರಿ....?'' ಎಂದರು. ತಾಯಿ ಎದ್ದು ಅಡಿಗೆ ಮನೆಯ ಒಳಗೆ ಹೋದಳು. ಅಪ್ಪ ಬಂದು ಕೃತಿಕಾ ಪಕ್ಕದಲ್ಲಿ ಕುಳಿತುಕೊಂಡರು.

* * *

ಪೊಲೀಸರು ಇಬ್ಬರು ಹಂತಕರನ್ನು ಕೂರಿಸಿಕೊಂಡು ಅವರು ಮಾತನಾಡಿಕೊಂಡಿರುವುದನ್ನು ಟೇಪ್ ಹಾಕಿ ಅವರಿಗೆ ಕೇಳಿಸಿದ ಮೇಲೆ ತಾವು ಇನ್ನು ಸುಳ್ಳು ಹೇಳಿ ಏನೂ ಪ್ರಯೋಜನವಿಲ್ಲವೆಂದು ಎಲ್ಲವನ್ನು ಕಕ್ಕಿದರು. ಇಲ್ಲಿ ಪೊಲೀಸರು ಎರಡು ರೀತಿಯಲ್ಲಿ ಗೆದ್ದಿದ್ದರು. ಒಂದು ಹಂತಕರನ್ನು ಹಿಡಿಯುವುದರ ಜೊತೆಗೆ ಅವರು ಸುಳ್ಳು ಹೇಳಿ ತಪ್ಪಿಸಿಕೊಳ್ಳದಂತೆ ಮಾಡಿದ್ದರು. ಎರಡು, ಅವರು ಅನುಳ ಭಾವಚಿತ್ರಗಳನ್ನು ನೋಡಿ ತಾವು ಮಾಡಿದ ಕೊಲೆಯ ಬಗ್ಗೆ ಮಾತನಾಡಿಕೊಂಡಿರುವುದನ್ನು ರಿಕಾರ್ಡ್ ಮಾಡಿಕೊಂಡಿದ್ದರು. ಇದರ ಜೊತೆಗೆ ಕೊಲೆಗಾರರಿಗೆ, ರೌಡಿಗಳಿಗೆ, ಕಳ್ಳರಿಗೆ , ಮೋಸಗಾರರಿಗೆ ಪೊಲೀಸರು ಮಾಮೂಲಿಯಾಗಿ ನೀಡುವ ಆತಿಥ್ಯವನ್ನು ಅವರಿಗೆ ನೀಡಿ ಮನಸ್ಸಾ ಇಚ್ಛಾ ಇಗ್ಗಾ ಮುಗ್ಗಾ ಹೊಡೆದಿದ್ದರು. ಬಹುಶಃ ಪ್ರತಿಯೊಬ್ಬ ಕೊಲೆಗಾರನಿಗೂ ಅಷ್ಟು ಮಾತ್ರವಾದರು ಶಿಕ್ಷೆ ಆಗಲೇಬೇಕು.

ನಮ್ಮ ಕಾನೂನಿನಲ್ಲಿ ಇರುವ ಕೆಲವು ಸಡಿಲತೆಗಳಿಂದ ಎಷ್ಟೊ ಕೊಲೆಗಡುಕರು ಶಿಕ್ಷೆಯಿಂದ ನುಸುಳಿಕೊಂಡು ಮತ್ತೆ ಅದೇ ದಂದೆಯನ್ನು ಮುಂದುವರಿಸುತ್ತಾರೆ. ನೂರು ಅಪರಾಧಿಗಳು ಹೊರಗೆ ಉಳಿಯಲಿ, ಆದರೆ ಒಬ್ಬ ನಿರಪರಾಧಿ ಜೈಲು ಒಳಗೆ ಇಬಾರದು ಎನ್ನುತ್ತದೆ ಕಾನೂನು. ಮೊದಲಿಗೆ ಕೊಲೆ ಮಾಡಿದ್ದು ನಾವೆ ಎಂದು

ನೇರವಾಗಿ ಒಪ್ಪಿಕೊಂಡರು, ನಿಮಗೆ ಕೊಲೆ ಮಾಡಲು ಯಾರು ಹೇಳಿದರು ಎನ್ನುವ ಪ್ರಶ್ನೆಗೆ ತುಟಿ ಬಿಚ್ಚಲಿಲ್ಲ. ಕೊಲೆಯ ಹಿಂದೆ ಯಾವುದೊ ಬಾರಿ ಕುಳವೆ ಇರಬೇಕೆಂದು ಮೊದಲಿಗೆ ಸ್ವಲ್ಪ ಹಿಂಜರಿದ ಪೊಲೀಸರು ಹಗುರವಾಗಿ ಇಕ್ಕಿದ್ದರು. ವಿಷಯ ತಿಳಿದ ಸಿ.ಐ. ಪೊಲೀಸರನ್ನು "ತುಃ ನೀವೆಲ್ಲ ಯಾಕ್ರೊ ಪೊಲೀಸ್ ಕೆಲಸ ಮಾಡ್ತೀರಾ....? ಯಾರೊ ಇಬ್ಬರು ಅಡಕಾಸಿ ನನ್ನ ಮಕ್ಕಳು ಕೊಲೆ ಮಾಡಿದ್ದು ನಾವೆ ಅಂತ ಒಪ್ಪಿಕೊಂಡ ಮೇಲೆ, ಯಾರು ಮಾಡಿಸಿದರು ಅಂತ ಅವರ್‍ನ ಬಾಯಿ ಬಿಡಿಸಲಿಲ್ಲ ಅಂದರೆ ಜನ ಏನಂದುಕೊಳ್ತಾರೆ ನಮ್ಮನ್ನ....? ಹೋಗಿ ಎಲ್ಲಾ ಹಿಂದೂ ಮಹಾಸಾಗರದಲ್ಲಿ ಬಿದ್ದು ಸಾಯಿರೊ....?" ಎಂದು ಬೈಯ್ದು ಒಂದೆರಡು ಕ್ಷಣಗಳು ನೆಲವನ್ನು ನೋಡಿದ ಸಿ.ಐ. ಅವರು ಅನಂತರ ತಲೆ ಮೇಲಕ್ಕೆ ಎತ್ತಿ ನೋಡಿ, "ಎಲ್ಲಿದ್ದಾರೊ ಆ ನನ್ನ ಮಕ್ಕಳು....?" ಎಂದು ಕುರ್ಚಿಯಿಂದ ಮೇಲಕ್ಕೆ ಎದ್ದುನಿಂತರು. ಯಾವಾಗ ಕೋರ್ಟಿಗೆ ಒಪ್ಪಿಸಬೇಕು ಅವರ್‍ನ.....?" "ಬರೊ ಸೋಮುವಾರ ಸರ್" ಒಬ್ಬ ಪೇದೆ ಹೇಳಿದ. "ನಡಿಯಿರೊ...." ಸರಿಯಾದ ರೂಲರನ್ನು ಕೈಯಲ್ಲಿ ಹಿಡಿದುಕೊಂಡು ಟಪ್....ಟಪ್..... ಎಂದು ನಡೆಯುತ್ತಿದ್ದಂತೆ ಆಕಾಶದಲ್ಲಿ ಸಿಡಿಲು ಹೊಡೆಯುತ್ತಿರುವಂತೆ ಭಾಸವಾಯಿತು. ಒಬ್ಬ ಪೇದೆ ಹಂತಕರಿದ್ದ ಕೋಣೆಯ ಬೀಗ ತೆರೆದು ಪಕ್ಕಕ್ಕೆ ನಿಂತುಕೊಂಡ. ಇಬ್ಬರು ಪೇದೆಗಳು ಸಿ.ಐ. ಯಾವ ರೀತಿಯ ಆಜ್ಞೆ ನೀಡುತ್ತಾರೊ ನೋಡಬೇಕೆಂದು ಉಸಿರು ಬಿಡಿ ಹಿಡಿದು ನೊಡುತ್ತಿದ್ದಾರೆ. ಸಿ.ಐ. ಇಬ್ಬರನ್ನು ನೋಡುತ್ತ ಗಡ್ಡವನ್ನು ಒಮ್ಮೆ ತಡವಿಕೊಂಡು ಒಳಕ್ಕೆ ನಡೆದುಹೋಗಿ ಇಬ್ಬರು ಹಂತಕರ ಕಡೆಗೆ ದುರುಗುಟ್ಟಿ ನೋಡಿದರು. ಇಬ್ಬರು ಪೇದೆಗಳು ಇನ್ನೇನು ಹಂತಕರ ಮೇಲೆ ನೆಗೆದು ಬೀಳಬೇಕು. ಸಿ.ಐ. ಪೇದೆಗಳ ಕಡೆಗೆ ನೋಟ ಬದಲಿಸಿದರು. ಹಾಗೆ ನೋಡಿದಾಗ ಯಾವುದೊ ಹೊಸ ಉಪಾಯ ಅವರ ತಲೆಗೆ ಏರಿರುತ್ತದೆ ಎನ್ನುವುದನ್ನು ಪೇದೆಗಳೂ ಅರ್ಥಮಾಡಿಕೊಳ್ಳಬೇಕು.

ಬೆಲ್ಟಿನಲ್ಲಿದ್ದ ಪಿಸ್ತೂಲನ್ನು ಸರಕ್ಕನೆ ಕೈಗೆ ತೆಗೆದುಕೊಂಡು "ಬೇಡಿ ಬಿಚ್ಚಿಬಿಡಿರೊ.... ಓಡಿಹೋಗಲಿ ಅವರು..." ಸಿ.ಐ. ಮಾತಿಗೆ ಪೇದೆಗಳು ಸ್ವಲ್ಪ ಎದುರಿದಂತೆ ಕಂಡರು. ದಾರಿಯಿಲ್ಲದೆ ಬೇಡಿಗಳನ್ನು ಬಿಚ್ಚಿಬಿಟ್ಟರು. "ಓಡ್ರೊ.... ಓಡ್ರೊ.....ನನ್ನ ಮಕ್ಕಳಾ..... ಓಡೋಗ್ರೊ....' ಸಿ.ಐ. ಜೋರಾಗಿ ಕಿರಿಚಿದರು. ಹಂತಕರಿಬ್ಬರು ಒಬ್ಬರನ್ನೊಬ್ಬರು ನೋಡಿಕೊಂಡರು. ಓಡಿದರೆ ನಿಜವಾಗಿಯೂ ಶೂಟ್ ಮಾಡಿಬಿಡ್ತಾರೆ. ಓಡದೆ ಇದ್ದರೂ ಶೂಟ್ ಮಾಡಿಬಿಡ್ತಾರೆ....? ಈಗ ಏನು ಮಾಡುವುದು....? ಹಂತಕರಿಬ್ಬರು ಕೆಲವೇ ಕ್ಷಣಗಳಲ್ಲಿ ತೀರ್ಮಾನಿಸಬೇಕಾಗಿತ್ತು. ಪೇದೆಗಳು ಅದೆ ರೀತಿಯಾಗಿ ಯೋಚಿಸುತ್ತಿದ್ದರು. ಯಾವುದಕ್ಕೂ ಸಮಯವಿಲ್ಲ.

ಒಂದು....ಎರಡು....ಮೂರು ಕ್ಷಣಗಳು ಉರುಳುತ್ತಿವೆ. ಸಿ.ಐ. ಹಂತಕರ ಕಡೆಗೆ ನೋಡಿ ''ಒಂದು.....'' ಎಂದು ಪಿಸ್ತುಲನ್ನು ಅವರ ಕಡೆಗೆ ಗುರಿಇಟ್ಟರು. ಮೂರು ಎನ್ನುವುದಕ್ಕೆ ಮಧ್ಯ ಎರಡು ಎನ್ನಬೇಕು. ಹಂತಕರಿಗೆ ಒಮ್ಮೆಲೆ ಉಸಿರು ಕಟ್ಟಿದಂತಾತಿ ಎರಡು ಮೂರು ಅಂದಿದ್ದೆ ಟ್ರಿಗರ್ ಒತ್ತಿಯೆಬಿಟ್ಟರು. ನಿಂತಿದ್ದ ಹಂತಕರು ಕೆಳಕ್ಕೆ ಬಿದ್ದು ಚೀರಿಕೊಂಡುಬಿಟ್ಟರು. ಚೀರಿಕೊಳ್ಳುವ ಸಮಯದಲ್ಲಿ ''ಖಯ್ಯಾಂ. ಖಯ್ಯಾಂ ಹೇಳಿದ್ದು'' ಎಂದುಬಿಟ್ಟರು. ಖಯ್ಯಾಂ ಬೆಂಗಳೂರಿನ ಒಬ್ಬ ಬಾಡಿಗೆ ಕೊಲೆಗಳ ಏಜೆಂಟ್. ಪಿಸ್ತೂಲಿನಿಂದ ಹೊರಬಿದ್ದ ಗುಂಡು ನೆಲಕ್ಕೆ ಪಟ್ಟೆಂದು ಬಡಿದು ತೂರಿಕೊಂಡಿತು.

''ಎಷ್ಟು ತೆಗೆದುಕೊಂಡರೊ....ಇಬ್ಬರೂ ಸೇರಿ....?'' ''ಒಂದು ಲಕ್ಷ'' ''ಖಯ್ಯಾಂ ಎಷ್ಟು ತೆಗೆದುಕೊಂಡ.....?''''ಗೊತ್ತಿಲ್ಲ ಎರಡು ಲಕ್ಷ ಇರಬಹುದು'' ''ಅವನಿಗೆ ಕೊಲೆ ಮಾಡು ಅಂತ ಹಣ ಕೊಟ್ಟವರು ಯಾರು?'' ನಮ್ಮನ್ನ ಮದ್ರಾಸಿಗೆ ಕಳುಹಿಸಿಕೊಟ್ರು ನಾವು ಹೋಗಿ ಮಾತನಾಡಿಕೊಂಡು ಬಂದ್ವಿ'' ''ನೋಡು ಇವನಾ...?'' ಒಂದು ಪೋಟೊ ತೆಗೆದು ತೋರಿಸಿದರು. ಪೋಟೊ ನೋಡಿ, ''ಇವರಲ್ಲ ಹಣ ಕೊಟ್ಟದ್ದು'' ಎಂದರು. ಈಗ ಪೊಲೀಸರಿಗೆ ಇನ್ನಷ್ಟು ತಲೆ ಬಿಸಿಯಾಯಿತು. ಆ ಪೋಟೊದಲ್ಲಿದ್ದವನು ಜನಗನ್ಮೋಹನರಾವ್‌ನ ಮೊದಲನೆ ಹೆಂಡತಿ ಮಗನಾಗಿದ್ದ. ಅವನು ಕೊಲೆ ಮಾಡಿಸಲಿಲ್ಲ ಅಂದರೆ ಇನ್ಯಾರು ಮಾಡಿದ್ದು.....?

''ಲೊ ಇವರ್ನ ಕರೆದುಕೊಂಡೋಗಿ ಎಲ್ಲಾ ಬರೆಸಿಕೊಳ್ಳಿರೊ ಒಂದೂ ಬಿಡದೆ. ನನ್ನ ಮಕ್ಕಳ ಇವೊತ್ತು ನರಿ ಮುಖ ನೋಃಡಿದ್ದರು. ಓಡಿಹೋಗ್ತಾ ಇದ್ದರು ಇಬ್ಬರ್ನೂ ಶೂಟ್ ಮಾಡಿಬಿಟ್ಟವಿ ಅಂದು ಬಿಡ್ತಾ ಇದ್ದಿವಿ. ನನ್ನ ಮಕ್ಕಳಾ ಹೋಗಿ. ಹೋಗಿ....ಹೋಗಿ....ನಿಮ್ಮನ್ನ ನನ್ನ ಮಕ್ಕಳಾ ಅಂತೀನಲ್ಲ ತುಃ ನನ್ನ ನಾಲಿಗೆಗೆ ವಾಕ್....'' ಎಂದು ವಾಕರಿಸಿಕೊಳ್ಳುತ್ತ ಸಿ.ಐ. ಹೊರಟು ಹೋದರು. ವರದಿಯನ್ನು ಬರೆಸಿಕೊಂಡಾದ ಮೇಲೆ ಸಿ.ಐ. ಮತ್ತೆ ಹಿಂದಿರುಗಿ ಬಂದರು.

''ಆ ಹುಡುಗೀನ ಯಾಗ್ ಸಾಯಿಸಿದಿರಿ ಅಂತ ಎಲ್ಲರೂ ಕೇಳಿಸಿಕೊಳ್ಳಿ ಇಲ್ಲಿ ಬಂದು ಕುಳಿತುಕೊಂಡು ಎಲ್ಲಾ ಹೇಳ್ರೊ'' ಎನ್ನುತ್ತಿದ್ದಂತೆ ಹಂತಕರು ನೆಲದಲ್ಲಿ ಕುಳಿತುಕೊಂಡರು. ಸಿ.ಐ. ಚೇರಿನ ಮೇಲೆ ಕುಳಿತುಕೊಂಡು ''ಲೊ ಎಲ್ಲಾರ್ನೂ ಕರಿಯಿರೊ ಎಲ್ಲರೂ ತಿಳಿದುಕೊಳ್ಳಲಿ. ಈ ನನ್ನ ಮಕ್ಕಳು ಏನೇನು ಮಾಡ್ತಾರೆ ಅಂತ'' ಎಂದರು. ಪೇದೆಗಳೆಲ್ಲ ಒಬ್ಬೊಬ್ಬರಾಗಿ ಬಂದು ಸುತ್ತಲು ನಿಂತುಕೊಂಡರು. ''ಈ ಸೂಳೆ

ಮಕ್ಕಳು....? ಲೇ ನೀವು ಮನುಷ್ಯರೊ ರಾಕ್ಷಸರೊ... ಅದ್ಯಾಗೊ ಮನಸ್ಸು ಬರುತ್ತೊ ಹೆಣ್ಣು ಮಕ್ಕಳ್ನ ಸಾಯಿಸುವುದಕ್ಕೆ ....?'' ಸಿ.ಐ. ಬೂಟುಕಾಲಿನಲ್ಲಿ ಕುಳಿತಕಡೆಯಿಂದಲೆ ಮನಸ್ಸಾ ಇಚ್ಛಾ ಇಬ್ಬರನ್ನೂ ಬಿದಲಿಸಿ ಬದಲಿಸಿ ಒದೆಯತೊಡಗಿದರು. ಒದೆಯುವಾಗ ತಪ್ಪಿಸಿಕೊಂಡವರನ್ನು ದೂರ ಹೋಗಬಾರದು, ದೂರ ಹೋದರೆ ಶೂಟ್ ಮಾಡಿಬಿಡ್ತಿನಿ'' ಪಿಸ್ತೂಲು ತೆಗೆದು ಕೈಯಲ್ಲಿ ಹಿಡಿದುಕೊಂಡು ಸುಮಾರು ಹತ್ತು ನಿಮಿಷಗಳ ಕಾಲ ಒಂದೇ ಸಮನೆ ಕುಳಿತುಕೊಂಡು ಬೂಟು ಕಾಲುಗಳಲ್ಲಿ ಒದ್ದಮೇಲೆ ''ಈಗೇಳಿ ನನ್ನ ಮಕ್ಕಳಾ....'' ಸಿ.ಐ. ಆಜ್ಞೆ , ಮಾಡಿದರು. ಹಂತಕರ ಕೈಗಳು, ಕಾಲುಗಳು, ಮುಖಗಳು ಕೆಂಪಗೆ ಬಾತುಕೊಂಡು ಬಿಟ್ಟಿದ್ದವು. ಹಂತಕರು ಅಳುತ್ತಾ ಹೇಳತೊಡಗಿದರು.

''ಇದು ಫಸ್ಟ್ ಮರ್ಡರಾ ನಿಮ್ಮದು....? ಇಲ್ಲ ಮೊದಲೆ ಮಾಡಿದ್ದೀರಾ ....?'' ಇಲ್ಲ ಸಾರ್ ಇದೆ ಮೊದಲು. ಸಣ್ಣ ಪುಟ್ಟ ಕಳ್ಳತನಗಳು ಮಾಡ್ತಾ ಇದ್ದಿವಿ'' ಎಂದರು. ''ನಮ್ಮ ಕಾನೂನು ಸರಿಯಿಲ್ಲ. ನಮಗೆ ಫುಲ್‌ಪವರ್ ಕೊಟ್ಟುಬಿಡಬೇಕು. ಕಳ್ಳರು, ರೌಡಿಗಳು, ಕೊಲೆಗಾರರು, ಯಾರೂ ಇರದಂತೆ ಮಾಡಿಬಿಡ್ತೇವಿ. ಹ್ಣು ಬೊಗಳರೊ ನನ್ನ ಮಕ್ಕಳಾ....?'' ಸಿ.ಐ. ಮುಖ ಒರೆಸಿಕೊಳ್ಳುತ್ತ ಮತ್ತೊಮ್ಮೆ ಹಂತಕರನ್ನು ದಿಟ್ಟಿಸಿದ್ದೆ ಮತ್ತು ಒಡೆಯಲು ಶುರುಮಾಡಿದರೆ ಸತ್ತೆ ಹೋಗುತ್ತೇವೆ ಎಂದು ತಿಳಿದುಕೊಂಡ ಹಂತಕರು, ಬರುತ್ತಿರುವ ದುಃಖವನ್ನು ನುಂಗಿಕೊಂಡು ಹೇಳತೊಡಗಿದರು.

''ನಾವು ರೊಕ್ಕ ತೆಗೆದುಕೊಂಡು ಮೇಲೆ ಆ ಚೊಕ್ರಿ ಮನೆ ನೊಡಿಕೊಂಡ್ವಿ ಆ ಮನೆಯಲ್ಲಿ ಮೂರು ಚೊಕ್ರಿಗಳಿದ್ದವು. ಮೂವರ್ನ ಕೊಲೆ ಮಾಡೊದು ಕಷ್ಟ ಅಂತ ಕಾಯ್ತಾ ಇದ್ದಿವಿ. ಕಾಲೇಜ್ ಚುಟ್ಟಿ ಬಂದ ಮೇಲೆ ಯಾವತ್ತಾದರು ಒಂದು ದಿನ ಆ ಚೊಕ್ರಿ ಒಬ್ಬಳೆ ಸಿಕ್ತಾಳೆ ಅಂತ ಕಾಯ್ತಾ ಇದ್ದಿವಿ. ಒಂದು ಚೊಕ್ರಿ ಊರಿಗೋಗಿ ಎರಡು ಚೊಕ್ರಿಗಳು ಉಳಿದುಕೊಂಡವು. ಎಷ್ಟು ಬೇಗ ಸಾಧ್ಯ ಆಗುತ್ತೊ ಅಷ್ಟುಬೇಗ ನಾವು ಕೊಲೆ ಮಾಡಬೇಕಾಗಿತ್ತು. ಖಯ್ಯಾಂ ನಮಗೆ ಚೊಕ್ರೀನ ಮುಟ್ಟಲೇಬಾರದು. ಆ ಚೊಕ್ರಿ ಕೊಲೇನೆ ಆಗಿಲ್ಲ, ಆ ತರಹ ಸಾಯಿಸಬೇಕು. ಕೊಲೆಯಾದ ಮೇಲೆ ಏನೂ ಸಬೂಬು ಉಳಿಸಬಾರದು. ಕಿಟಕಿ ಬಾಗಿಲುಗಳು ಹಾಕೆ ಇರಬೇಕು ಎಂದರು.

ಆದೇಗೆ....? ಅಂತ ಕೇಳಿದ್ದಕ್ಕೆ ಆದೇಗೊ ನನಗೆ ಗೊತ್ತಿಲ್ಲ ಎಂದಿದ್ದರು. ಆ ಚೊಕ್ರಿಗಳು ಎಲ್ಲಾ ಕಾಲೇಜ್‌ಗೆ ಹೋದಮೇಲೆ ಒಂದು ದಿನ ಟಿವಿ ಕೇಬಲ್ ಚೆಕ್ ಮಾಡೊ ತರಹ ಮನೆ ಸುತ್ತಲು, ಮನೆ ಮೇಲೆ ಎಲ್ಲಾ ನೋಡಿಕೊಂಡು ಬಂದ್ವಿ ಅಡಿಗೆ

ಮನೆ ಮೇಲೆ ಒಂದು ಗ್ಲಾಸಾಕಿದ್ದರು. ಅದನ್ನು ಮತ್ತೊಂದು ದಿನ ಹೋಗಿ ನೀಟಾಗಿ ಕಟ್‌ಮಾಡಿ ಒಂದೆರಡು ಕಡೆ ಹಾಗೆ ಬಿಟ್ಟುಬಂದಿದ್ವಿ. ಆ ಹೊತ್ತು ಬೆಳಗ್ಗೆ ಇನ್ನೊಂದು ಚೊಕ್ರೀನು ಊರಿಗೆ ಹೊರಟೋದಳು. ನಾವು ಆ ರಾತ್ರಿಗಾಗಿ ಬೆಳಗ್ಗೆಯಿಂದಲೇ ಕಾಯ್ತಾ ಕುಳಿತುಕೊಂಡ್ವಿ.

ಸಾಯಂಕಾಲ ಆ ಚೊಕ್ರಿ ಹೋಟಲಿಗೆ ಫೋನ್ ಮಾಡಿ ಊಟ ತರಿಸಿಕೊಂಡಳು. ನಾವು ಸಪ್ಲೇಯರ್ ಹಿಂದೇನೆ ಮನೆ ಒಳಕ್ಕೆ ಹೋಗಿ ಬಚ್ಚಿಟ್ಟುಕೊಂಡುಬಿಟ್ಟವಿ. ಸಪ್ಲೇಯರ್ ಹೊರಟೋದ ಮೇಲೆ ಚೊಕ್ರಿ ಬಾಗಿಲಾಕಿಬಿಟ್ಟಳು. ತಕ್ಷಣವೆ ಹುಡುಗಿಯನ್ನು ಹಿಂದಿನಿಂದ ಇಬ್ಬರು ಉಸಿರು ಹಿಡಿದು ಸಾಯಿಸಿ ಮಂಚದ ಮೇಲೆ ನೇಣಾಕಿದಂತೆ ನಿಲ್ಲಿಸಿ ಗ್ಲಾಸನ್ನು ನಿಧಾನವಾಗಿ ಒಡೆದು ಪಕ್ಕಕ್ಕಿಟ್ಟು ಹೊರಟುಹೋದವಿ''

ಎಲ್ಲರೂ ಅವರನ್ನೇ ನೋಡುತ್ತಿದ್ದರು. ''ಲೊ ಈ ನನ್ನ ಮಕ್ಕಳ್ನ ಕರೆದುಕೊಂಡೋಗಿ ಒಳಗಾಕಿರೊ'' ಎಂದ ಸಿ.ಐ. ತನ್ನ ಕೋಣೆಯ ಕಡೆಗೆ ಹೊರಟು ಹೊದರು. ಮತ್ತೆ ಹಿಂದಕ್ಕೆ ಬಂದ ಸಿ.ಐ. '' ಲೊ ಎಲ್ಲರೂ ಸೇರಿಕೊಂಡು ಚೆನ್ನಾಗಿ ಒದಿಯಿರೊ, ಈ ಸೂವ್ವರ್ ನನ್ನ ಮಕ್ಕಳು ಇನ್ನೊಂದು ಸಲ ಯಾರ ತಂಟೆಗೂ ಹೋಗಬಾರದು'' ಎಂದೇಳಿ ಎಸ್.ಐ.ನ್ನು ಹಿಂದೆಯೆ ಬರುವಂತೆ ತಿಳಿಸಿದರು. ''ನೋಡ್ರಿ ಅವನು ಯಾವನೊ ಮದ್ರಾಸಿನಲ್ಲಿ ಇದ್ದುಕೊಂಡೆ ಕೊಲೆ ಮಾಡಿಸಿದ್ದಾನೆ. ನೀವು ಪೇದೆ ಒನ್‌ಪೋರ್‌ತ್ರೀನ ಕರೆದುಕೊಂಡು ಏನೇನು ಡಾಕ್ಯುಮೆಂಟ್ಸ್ ಬೇಕೊ ಎಲ್ಲಾ ತೆಗೆದುಕೊಂಡೋಗಿ ಮದ್ರಾಸಿನಲ್ಲಿ ಪೊಲೀಸರ್ನ ನೋಡಿ ವಿಚಾರಿಸಿಕೊಂಡು ಬನ್ನಿ. ನನಗೆ ಇನ್ನೂ ಜಗನ್ಮೋಹನರಾವ್ ಮಗನೆ ಕೊಲೆ ಮಾಡಿಸಿದ್ದು ಅನಿಸುತ್ತೆ. ಅವನು ಪಿಚ್ಚರನಲ್ಲಿ ಬರದೇನೆ ಬೇರೆಯವರ ಮೂಲಕ ಎಲ್ಲಾ ಮಾಡಿಸಿದ್ದಾನೆ. ಖಯ್ಯಾಂನ ನಾನು ನೋಡಿಕೋಳ್ತಿನಿ'' ಎಂದರು.

* * *

ಅಂತಿಮ ವರ್ಷದ ವೈದ್ಯಕೀಯ ಫಲಿತಾಂಶಗಳು ಬಂದು ಒಂದು ತಿಂಗಳಾಗಿತ್ತು. ಅಮರನಾಥ ಮತ್ತು ಗೆಳೆಯರು, ಕೃತಿಕಾ ಮತ್ತು ಗೆಳತಿಯರು ಎಲ್ಲರೂ ಪಾಸಾಗಿದ್ದರು. ಪಾಸಾದ ಒಂದು ತಿಂಗಳಲ್ಲಿ ಅವರನ್ನೆಲ್ಲ ಹೌಸ್ ಸರ್ಜನ್ನರಾಗಿ ಬೇರೆ ಬೇರೆ ಆಸ್ಪತ್ರೆಗಳಲ್ಲಿ ಪೋಸ್ಟಿಂಗ್ ಮಾಡಿದ್ದು , ಎಲ್ಲರೂ ಬೆಂಗಳೂರಿನಲ್ಲೆ ಇದ್ದರು. ಕೃತಿಕಾ ಮತ್ತು ರೂಪ ಮತ್ತೆ ಬೆಂಗಳೂರಿನಲ್ಲಿ ಒಂದು ಸಣ್ಣ ಮನೆ ತೆಗೆದುಕೊಂಡು ಹೌಸ್ ಸರ್ಜನ್ ಮುಗಿಸುತ್ತಿದ್ದರು.

ಈ ನಡುವೆ ಒಂದು ಕಡೆ ಅಮರನಾಥನ ಮನೆಯಲ್ಲಿ, ಇನ್ನೊಂದು ಕಡೆ ಕೃತಿಕಾಳ ಮನೆಯಲ್ಲಿ ಅವರ ಮದುವೆ ಬಗ್ಗೆ ಬೆಂಕಿ ಉರಿಯುತ್ತ ಹೊಗೆಯಾಡುತ್ತಿತ್ತು. ಎರಡು ಮನೆಗಳಲ್ಲೂ ಬೆಂಕಿ ಹೊತ್ತಿಸಿದ್ದ ಅಮರನಾಥ ಮತ್ತು ಕೃತಿಕಾ ತಮಗೆ ಏನೂ ಗೊತ್ತೆ ಇಲ್ಲ ಎನ್ನುವಂತೆ ಖುಷಿ ಖುಷಿಯಾಗಿ ಬೆಂಗಳೂರೆಲ್ಲ ಮತ್ತೆ ಕೈ ಕೈ ಹಿಡಿದುಕೊಂಡು ಓಡಾಡುತ್ತಿದ್ದರು.

ಅಮರನಾಥನ ಮನೆ ಪ್ರವೇಶಿಸಿದ್ದ ಕೃತಿಕಾ ಅವನ ತಾಯಿಯನ್ನು ಒಂದೇ ದಿನದಲ್ಲಿ ತನ್ನ ಬುಟ್ಟಿಗೆ ಹಾಕಿಕೊಂಡುಬಿಟ್ಟಿದ್ದಳು. ಅಮರನಾಥನ ತಾಯಿ ಹುಡುಗಿಯನ್ನು ತಿಂಗಳುಗಟ್ಟಲೆ ಹೊಗಳುವುದರಲ್ಲಿ ತೊಡಗಿದ್ದಳು. ತಮ್ಮ ಕುಟುಂಬದಲ್ಲಿ ಒಬ್ಬ ಹುಡುಗ ಓದಿ ವೈದ್ಯನಾಗುವುದನ್ನು ಕನಸಿನಲ್ಲಿ ಕೂಡ ಕಾಣದ ಆಕೆ ತನಗೆ ವೈದ್ಯಕೀಯ ವಿಜ್ಞಾನ ಓದಿದ ಸೊಸೆ ಬರುವುದರ ಬಗ್ಗೆ ಉಬ್ಬಿಹೋಗಿದ್ದಳು. ಆದರೆ ಇನ್ನೊಂದು ಕಡೆ ಮನೆಯ ಕೆಲಸ ಮಾಡುವುದು ನನಗಂತು ತಪ್ಪಿಲ್ಲ ಎಂದುಕೊಂಡಳು. ಅವನಿಗೆ ಕೆಲಸ ಸಿಕ್ಕಿದ ಮೇಲೆ ಅವನು ಎಲ್ಲೆಲ್ಲಿ ಇರುತ್ತಾನೊ ಏನೊ....? ಸೊಸೆಯು ಅವನ ಜೊತೆಯಲ್ಲೆ ಇರುತ್ತಾಳೆ. ಹಾಗಿದ್ದಾಗ ಅವಳು ಮನೆ ಕೆಲಸ ಮಾಡುವ ವಿಷಯವೆಲ್ಲಿ....? ಎಲ್ಲಿದ್ದರು ಮಗನು ಚೆನ್ನಾಗಿರಲಿ ಎಂದು ಒಳಗೊಳಗೆ ಯೋಚಿಸುತ್ತಿದ್ದಳು.

ಅಮರನಾಥನ ತಂದೆ, ಓದಿದ ಹುಡುಗ, ಎದೆ ಮೀರಿ ಬೆಳೆದ ಹುಡುಗ ಅವನ ಇಷ್ಟದಂತೆ ನಡೆಯಲಿ. ಹುಡುಗ, ಹುಡುಗಿ ಚೆನ್ನಾಗಿದ್ದಾರೆ ಸಾಕು ಎಂದೇ ತೀರ್ಮಾನಿಸಿದ್ದರು. ಕೃತಿಕಾಳ ತಂದೆ ಮತ್ತು ತಾಯಿ ಮೊದಲಿಗೆ ಸ್ವಲ್ಪ ಚಿಂತಾಕ್ರಾಂತರಾದರು ಅನಂತರ ಅವಳ ಇಚ್ಛೆಯಂತೆ ನಡೆಯಲಿ ಎಂದು ಒಪ್ಪಿಕೊಳ್ಳಬೇಕಾಯಿತು. ಹುಡುಗಿಯನ್ನು ಮೊದಲಿಂದಲೂ ಗಂಡು ಹುಡುಗನಂತೆ ಬೆಳೆಸಿ ಎಲ್ಲಾ ರೀತಿಯ ಸ್ವಾತಂತ್ರ್ಯವನ್ನು ಕೊಟ್ಟಮೇಲೆ ಈ ವಿಷಯದಲ್ಲಿ ಮಾತ್ರ ಏಕೆ ಅವಳಿಗೆ ನೋವು ಮಾಡಬೇಕು....? ಎಲ್ಲವು ದೈವ ಇಚ್ಛೆಯಂತೆ ಆಗಲಿ ಎಂದುಕೊಂಡರು. ಕೃತಿಕಾ ಹೌಸ್ ಸರ್ಜನ್ ಅಭ್ಯಾಸಿಸಲು ಬೆಂಗಳೂರಿಗೆ ಬಂದಾಗ, ''ನಾನು ಮದುವೆ ಮಾಡಿಕೊಂಡರೆ ಅಮರನಾಥನನ್ನೇ ಮಾಡಿಕೊಳ್ಳುತ್ತೇನೆ. ನೀವು ಯಾವುದೆ ರೀತಿಯ ಪ್ರಯತ್ನವನ್ನು ಮಾಡಬೇಡಿ ಎಂದು ಕಡಾಖಂಡಿತವಾಗಿ ಹೇಳಿಬಂದಿದ್ದಳು. ಮೊದಲಿಂದ ಹಟವಾದಿಯಾದ ಅವಳನ್ನು ನಾವು ಬದಲಾಯಿಸುವುದು ಸಾಧ್ಯವಿಲ್ಲ ಎಂದು ಅವಳ ತಂದೆ ತಾಯಿ ನಿಶ್ಚಯಿಸಿಕೊಂಡರು.

✲ ✲ ✲

ಹೌಸ್ ಸರ್ಜನ್ ತರಬೇತಿ ನಡೆಯುತ್ತಿದ್ದಂತೆ ಅಮರನಾಥ ಮತ್ತು ಕೃತಿಕಾಳ ಮದುವೆ ಮುಗಿದುಹೋಯಿತು. ಬೆಂಗಳೂರಿನಲ್ಲಿ ನಡೆದ ಮದುವೆಗೆ ಗುಂಟೂರಿನಿಂದ ಎರಡು ಬಸ್ಸುಗಳಲ್ಲಿ ಕೃತಿಕಾಳ ಸಂಬಂಧಿಗಳು ಮತ್ತು ಬಂಧು ಮಿತ್ರರು ಬಂದುಹೋಗಿದ್ದರು. ಎರಡು ಮನೆಯವರು ಕೊಡುವುದರಲ್ಲಿ ತೆಗೆದುಕೊಳ್ಳುವುದರಲ್ಲಿ ಯಾವುದೇ ಕಟ್ಟುನಿಟ್ಟುಗಳಿಲ್ಲದೆ ಸರಾಗವಾಗಿ ಮದುವೆ ಮಾಡಿ ಮುಗಿಸಿದ್ದರು. ಕೃತಿಕಾಳ ತಂದೆ ಮೊದಲಿಗೆ ಮದುವೆ ಗುಂಟೂರಿನಲ್ಲಿ ನಡೆಯಬೇಕೆಂದರೆ, ಅಮರನಾಥನ ತಂದೆಯ ಇಷ್ಟದಂತೆ ಬೆಂಗಳೂರಿನಲ್ಲೆ ನಡೆದಿತ್ತು. ಅದಕ್ಕೆ ಕೃತಿಕಾಳ ಇಷ್ಟವು ಇತ್ತು.

ಕೃತಿಕಾಳ ತಂದೆ ಮದುವೆಗೆ ಮುಂಚೆಯೆ ಮದುವೆಗೆ ಬೇಕಾದಷ್ಟು ಹಣವನ್ನು ಕೊಟ್ಟು ಸಾಕಾಗದೆ ಹೋದರೆ ಮತ್ತೆ ದಯವಿಟ್ಟು ಕೇಳಿ ತೆಗೆದುಕೊಳ್ಳಿ ಎಂದು ಹೇಳಿದ್ದರು. ಕೃತಿಕಾಗೆ ಬೇಕಾದಷ್ಟು ಒಡವೆ ವಸ್ತ್ರಗಳನ್ನು ಕೊಡಿಸಿದ್ದರು. ಹುಡುಗನ ಕಡೆಯವರು ಬೇಡ ಬೇಡವೆಂದರು ಸೂಟು, ಬೂಟು, ಉಂಗುರ, ಚೈನು ಹಾಕಿದ್ದರು. ಕೃತಿಕಾ ಮತ್ತು ಅಮರನಾಥನ ಗೆಳೆಯ ಮತ್ತು ಗೆಳತಿಯರು ಅವರ ಮದುವೆಗೆ ಬಂದು ಹುರಪಿನಿಂದ ಭಾಗವಹಿಸಿ ಹೋಗಿದ್ದರು.

ಬೆಂಗಳೂರಿನಲ್ಲಿ ಒಂದೆರಡು ದಿನ, ಗುಂಟೂರಿನಲ್ಲಿ ಒಂದೆರಡು ದಿನ ಕಳೆದ ಅವರು ಮತ್ತೆ ಬೆಂಗಳೂರಿಗೆ ಬಂದಿದ್ದರು. ಅಂದು ಒಂದು ಹೋಟಲಿನಲ್ಲಿ ಅವರಿಗೆ ಮೊದಲ ರಾತ್ರಿಯನ್ನು ಏರ್ಪಡಿಸಿದ್ದರು. ಕೃತಿಕಾ ಮತ್ತು ಅಮರನಾಥ ತನ್ನ ಕೆಲವೇ ಆಪ್ತ ಗೆಳೆಯರನ್ನು ಮತ್ತು ತಮ್ಮ ಕುಟುಂಬದವರ್ನು ಆಹ್ವಾನಿಸಿ ಹೋಟಲಿನಲ್ಲಿ ವಿಶೇಷ ಔತಣವನ್ನು ಏರ್ಪಡಿಸಿದ್ದರು. ಕೃತಿಕಾ ಮತ್ತು ಅಮರನಾಥನ ತಂದೆ ತಾಯಿ, ತಮ್ಮ, ತಂಗಿ ಕೃತಿಕಾಳ ಅಕ್ಕ ಮತ್ತು ತಮ್ಮ ಗೆಳೆಯರಾದ ನಿತಿನ್, ಸವ್ಯ, ಹರ್ಷ, ರೂಪ ಮತ್ತು ಕಮಲಾಳನ್ನು ವಿಶೇಷವಾಗಿ ಆಹ್ವಾನಿಸಿದ್ದರು. ಎಲ್ಲರೂ ಔತಣ ಮುಗಿಸಿಕೊಂಡು ಹೋಟಲಿನವರೆ ವಿಶೇಷವಾಗಿ ಸಜ್ಜುಗೊಳಿಸಿದ್ದ ಕೋಣೆಯ ಒಳಕ್ಕೆ ಇಣುಕಿ ನೋಡಿ ದಂಗಾಗಿ ಹೋಗಿದ್ದರು. ಸ್ಟಾರ್ ಹೋಟಲ್‌ಗಳಲ್ಲಿ ನಡೆಯುವ ಮೊದಲ ರಾತ್ರಿಯ ಕೋಣೆಯನ್ನು ಅವರ್‍ಯಾರು ಅದುವರೆಗೂ ನೋಡಿರಲಿಲ್ಲ.

ಔತಣಕ್ಕೆ ಬಂದಿದ್ದವರೆಲ್ಲ ಕೃತಿಕಾ ಮತ್ತು ಅಮರನಾಥನನ್ನು ಮತ್ತೆ ಮತ್ತೆ ಅಭಿನಂದಿಸಿ ಮಾತನಾಡುತ್ತಿದ್ದರು. ಸಮಯ ರಾತ್ರಿ ಹತ್ತುಗಂಟೆ ಆಗುತ್ತಾ ಬರುತ್ತಿದ್ದು ತಮಗೆ ಅಲ್ಲಿ ಇನ್ನೇನು ಕೆಲಸವಿಲ್ಲ ಎಂದು ತಿಳಿದುಕೊಂಡ ಎಲ್ಲರೂ ಒಬ್ಬೊಬ್ಬರಾಗಿ ವಧು ವರನಿಗೆ ವಿದಾಯ ಹೇಳಿ ಹೊರಡುತ್ತಿದ್ದರು. ಕೃತಿಕಾಳ ತಾಯಿ, ಕೃತಿಕಾಳನ್ನು ಮಂಚದ ಮೇಲೆ ಕೂರಿಸಿಕೊಂಡು ಮೃದುವಾಗಿ ಕಿವಿಯಲ್ಲಿ ಏನೊ ಹೇಳುತ್ತಿದ್ದಳು.

ಅವರು ಹೇಳಿ ಮುಗಿಸಿದ ಮೇಲೆ ಅಮರನಾಥನ ತಾಯಿ ಹೋಗಿ ವಧು, ವರ ಇಬ್ಬರಿಗೂ ಏನೊ ಹೇಳಿಬಂದರು. ಅನಂತರ ಎಲ್ಲರೂ ಒಟ್ಟಾಗಿ ಕೈಬೀಸಿ ಹೊರಟುನಿಂತರು.

ಕೃತಿಕಾ ಮತ್ತು ಅಮರನಾಥ ಮಾತ್ರ ಈಗ ಆ ಕೋಣೆಯಲ್ಲಿ ಇದ್ದಾರೆ.

ಮದುವೆಗಳು ಸ್ವರ್ಗದಲ್ಲಿ ನಡೆಯುತ್ತವೆ ಎನ್ನುತ್ತದೆ - ಇಂಗ್ಲೀಷ್ ಗಾದೆಯೊಂದು. ಮಹಾತ್ಮಗಾಂಧಿಯವರು ಹೇಳುವಂತೆ ವಿವಾಹದ ಗುರಿ ದೈಹಿಕ ಸುಖದ ಮೂಲಕ ಆತ್ಮ ಸೌಖ್ಯವನ್ನು ಸಾಧಿಸುವುದು. ಇಬ್ಬರೂ ಶೃಂಗರಿಸಿದ ವಿಶೇಷ ಇಮ್ಮಡಿ ಪಲ್ಲಂಗದ ಹತ್ತಿರಕ್ಕೆ ಬಂದು ನಿಂತುಕೊಂಡರು. ಸುವಾಸನೆ ಆ ಕೋಣೆಯನ್ನು ಆವರಿಸಿಕೊಂಡಿದೆ. ಕೋಣೆಯ ಒಳಗೆ ಹೋಗುವ ಮುನ್ನ ಏಸಿ ಬೇಕಾದರೆ ಆನ್ ಮಾಡಿಕೊಳ್ಳಿ ಎಂದು ಹೋಟಲಿನವರು ತಿಳಿಸಿದ್ದರು. ಹಾಗೆಯೆ ತಣ್ಣಗಿರುವ ಕೋಣೆಯಲ್ಲಿ ಏಸಿ ಅವಶ್ಯಕತೆಯೆ ಇರಲಿಲ್ಲ. ಆ ಮಾತುಗಳು ಅವರಿಗೆ ಕೇಳಿಸಲೇ ಇಲ್ಲ. ಈಗ ಅವರ ಮನಸ್ಸಿನಲ್ಲಿ ಯಾವುದೇ ಸಂದೇಹ ಮತ್ತು ಸಂಕೋಚದ ಆಲೋಚನೆಗಳು ಉಳಿದಿರಲಿಲ್ಲ. ಅವರು ಮದುವೆಯಾಗಿ ಒಂದಾಗಿ ಹೋಗಿದ್ದೆ ಇದಕ್ಕೆ ಕಾರಣ. ಆದರೆ ಮುಂದಿನ ಕ್ಷಣಗಳನ್ನು ಹೇಗೆ ಉಪಯೋಗಿಸಿಕೊಳ್ಳಬೇಕು ಎನ್ನುವ ಆತಂಕ, ಆತುರತೆ ಅವರ ಕಣ್ಣುಗಳಲ್ಲಿ ತುಂಬಿಕೊಂಡಿತ್ತು.

ಇಮ್ಮಡಿ ಪಲ್ಲಂಗದ ಮೇಲೆ ಹಾಸಿದ್ದ ಬೆಡ್‌ಶೀಟಿನ ಮೇಲೆ ದುಶ್ಯಂತ ಮತ್ತು ಶಕುಂತಲೆ ಒಬ್ಬರನ್ನೊಬ್ಬರು ನೋಡುತ್ತ ಮೈಮರೆತಿರುವ ಬಣ್ಣ ಬಣ್ಣದ ಚಿತ್ರವಿದೆ. ಚಿಗುರೆಗಳು ಹುಲ್ಲು ಮೇಯುವುದನ್ನು ಬಿಟ್ಟು ಅವರ ಸುತ್ತಲು ನಿಂತು ನೋಡುತ್ತಿವೆ. ಗೋಡೆಗಳ ಮೇಲೆ ಹಲವು ಆಕಾರದ ಬಲ್ಬುಗಳು ಅವರ ಮೇಲೆ ಪ್ರೀತಿಯ ಬಣ್ಣ ಬಣ್ಣದ ಕಿರಣಗಳನ್ನು ತಣ್ಣಗೆ ಚೆಲ್ಲುತ್ತಿವೆ. ಕೋಣೆಯ ಮೂಲೆಗಳಲ್ಲಿ ಕುಂಡಗಳಲ್ಲಿರುವ ಚಿತ್ರವಿಚಿತ್ರ ಗಿಡಗಳು ಹೂವುಗಳೊಂದಿಗೆ ಅವರನ್ನು ನೋಡಿ ನಗುತ್ತಿವೆ. ಮೇಜಿನ ಮೇಲೆ ಹಾಲು ನೀರು ಜ್ಯೂಸ್, ಕೋಲ್ಡ್ ಕಾಫಿ, ಗ್ಲಾಸುಗಳಿವೆ. ಜೊತೆಗೆ ಹಲವು ಹಣ್ಣುಗಳು ಕಾಯುತ್ತಿವೆ. ವಿಶೇಷವಾಗಿ ಆಪಲ್‌ಗಳು ಕೆನ್ನೆಗಳನ್ನು ಕೆಂಪಗೆ ಮಾಡಿಕೊಂಡು ಕುಳಿತಿವೆ. ಸಿಹಿ ತಿಂಡಿಗಳು ಲೆಕ್ಕವೇ ಇಲ್ಲ. ಒಂದೇ ಮಾತಿನಲ್ಲಿ ಹೇಳಬೇಕಾದರೆ ಆ ಕೋಣೆ ಪೂರ್ಣವಾಗಿ ಸಜ್ಜಾಗಿ ಅವರ ಮಿಲನವನ್ನೇ ಎದುರು ನೋಡುತ್ತಿದೆ.

ಸಾಯಂಕಾಲದಿಂದ ಅಮರನಾಥ ವಿಶೇಷ ಸೂಟು, ಬೂಟು, ಟೈ, ಕೃತಿಕಾ ವಿಶೇಷ ಉಡುಗೆಯ ಜೊತೆಗೆ ಚಿನ್ನದ ಒಡವೆಗಳನ್ನು ಧರಿಸಿ ತಮ್ಮನ್ನು ತಾವೆ

ಬಿಗಿದುಕೊಂಡು ಓಡಾಡಿದ್ದಾರೆ. ಸ್ವಲ್ಪ ಹೊತ್ತು ಮಂಚದ ಮೇಲೆ ಕುಳಿತುಕೊಂಡು ಒಬ್ಬರ ಕಣ್ಣುಗಳ ಒಳಕ್ಕೆ ಒಬ್ಬರು ನೋಡುತ್ತಿದ್ದಂತೆ ಸಮಯ ಪೋಲಾಗುತ್ತಿದೆ ಎನ್ನುವ ಆತಂಕದ ಅಲೆಗಳು ಅವರನ್ನು ಎಚ್ಚರಿಸಿದವು. ಇಬ್ಬರೂ ಹತ್ತಿರಕ್ಕೆ ಸರಿದು ಸ್ಪರ್ಶದ ಕಿರಣಗಳನ್ನು ಚೆಲ್ಲಿಕೊಂಡರು. ಅಮರನಾಥ ಕೃತಿಕಾಳ ಕೈಗಳನ್ನು ಹಿಡಿದು ತನ್ನ ಭುಜಗಳ ಮೇಲಕ್ಕೆ ಹಾಕಿಕೊಂಡ. ಅಷ್ಟೆ . ಅವರು ತುಟಿಗಳು ದೀರ್ಘವಾದ ಚುಂಬನಕ್ಕೆ ಸಿಲುಕಿಕೊಂಡವು. ಅವರಿಬ್ಬರ ಆತ್ಮ-ದೇಹಗಳು ಒಂದಾಗಿ ಹೋದವು.

ಅನಂತರ ನಿಧಾನವಾಗಿ ಅವರು ಧರಿಸಿದ್ದ ಮೇಲಿನ ಉಡುಗೆ ತೊಡುಗೆಗಳು ಒಂದೊಂದಾಗಿ ದೂರವಾದವು. ಚಿನ್ನದ ಆಭರಣಗಳು ಹೊನಲು ಬೆಳಕಿನ ನಡುವೆ ಪಳಪಳನೆ ಹೊಳೆಯುತ್ತ ಕೃತಿಕಾ ಮೈ ಮೇಲಿಂದ ಇಳಿದು ಬಂದು ಎದುರಿಗೆ ಕುಳಿತುಕೊಂಡವು. ಕೃತಿಕಾ, ಅಮರನಾಥನನ್ನು ನಾಲ್ಕು ವರ್ಷಗಳಿಂದ ನೋಡಿದ್ದರು, ಇಂದು ಅವಳು ಹಾಗಾಗ ಅವನನ್ನು ನೋಡುತ್ತ ತಲೆ ಬಗ್ಗಿಸಿಕೊಳ್ಳುತ್ತಿದ್ದಳು. ಅಮರನಾಥನ ಪರಿಸ್ಥಿತಿಯೂ ಅದೆ ಆಗಿತ್ತು. ಅವರು ನಾಲ್ಕು ವರ್ಷಗಳಿಂದ ಸಾವಿರಾರು ಮಾತುಗಳನ್ನು ಎದುರುಬದುರಾಗಿ ಕುಳಿತುಕೊಂಡು ಮಾತನಾಡಿದಾರೆ, ಮನಬಿಚ್ಚಿ ನಗಾಡಿದ್ದಾರೆ, ಕೋಪಿಸಿ ಕೊಂಡಿದ್ದಾರೆ, ಒಬ್ಬರನ್ನೊಬ್ಬರು ದುರುಗುಟ್ಟಿ ನೋಡಿದ್ದಾರೆ.

-ನಾನು ಗಂಡು, ನೀನು ಹೆಣ್ಣು ಎನ್ನುವ ಭೇದಭಾವಗಳಿಲ್ಲದೆ ಏಕವಚನದಲ್ಲಿ ಬೈಯ್ದಾಡಿದ್ದಾರೆ. ಆದರೆ ಮದುವೆಯಾದ ಮೂರು ದಿನಗಳಿಂದ ಕೃತಿಕಾ ತನಗೆ ತಾನೆ ಪದಗಳನ್ನು ನಿಗ್ರಹಿಸಿಕೊಂಡು, ಅಮರನಾಥನನ್ನು ಬಹುವಚನದಲ್ಲಿ ಮಾತನಾಡಿಸುತ್ತಿರುವುದು ಅಮರನಾಥನಿಗೆ ಬಿಡಿಸಲಾಗದ ಗಂಟಾಗಿದೆ. ಮದುವೆ ಆಗುವುದಕ್ಕೆ ಮುಂಚೆ ''ಲೋ ನಾನು ಮದುವೆಯಾದರು ನಿನ್ನನ್ನ ಬಾರೊ ಹೋಗೊ ಅಂತಾನೆ ಕರಿತೀನಿ ಅದು ನನ್ನ ಮೊದಲ ಕಂಡೀಷನ್ ಅಂದಿದ್ದಳು. ಈಗ ಬಾಲ ಕತ್ತರಿಸಿಕೊಂಡ ನಾಯಿ ಮರಿಯಂತೆ ಅವನ ಸುತ್ತಲು ಕುಯ್‌ಗುಡುತ್ತಾ ಓಡಾಡುತ್ತಿದ್ದಾಳೆ.

ಬಹುಶಃ ನಮ್ಮ ಸಂಸ್ಕೃತಿಯ ಪ್ರತೀಕ, ಹೆಣ್ಣಿನ ಕೋಮಲತೆ, ಅದಾಗಿದೆಯೊ ಅಥವಾ ಗಂಡು ಸಮೂಹ ತಲೆ ತಲಾಂತರದಿಂದ ಹೆಣ್ಣನ್ನು ಆ ರೀತಿ ಪಳಗಿಸಿ ಬಿಟ್ಟಿದ್ದಾನೊ..... ಗೊತ್ತಾಗಲಿಲ್ಲ. ಅಮರನಾಥ ಅವಳ ಮೈ ಮೇಲೆ ಕೈ ಹಾಕಿದಾಗ ಕಣ್ಣುಗಳನ್ನು ಮುಚ್ಚಿಕೊಂಡ ಕೃತಿಕಾ ಅವನ ಎದೆಯ ಮೇಲೆ ಒರಗಿಹೋದಳು. ಎದುರಿಗಿದ್ದ ಹಾಲು ಕಾಫಿ ಜ್ಯೂಸ್, ಸಿಹಿ ತಿಂಡಿ, ಹಣ್ಣು ಹಂಪಲಗಳು ಯಾವುವು

ಅವರ ಗಮನಕ್ಕೆ ಬರಲೇ ಇಲ್ಲ. ಆದರೆ ಏಸಿ ಮಾತ್ರ ಆಗಲೆ ಕೋಣೆಯನ್ನು ತಣ್ಣಗಾಗಿಸುತ್ತ ಮೃದುವಾಗಿ ಕಂಪಿಸುತ್ತಿದೆ.

ಕೃತಿಕಾ, ಅಮರನಾಥನ ಅಪ್ಪುಗೆಯಿಂದ ಬಿಡಿಸಿಕೊಂಡು ಸೂಟ್‌ಕೇಸಿನಲ್ಲಿದ್ದ ಒಂದು ಡ್ರಸ್ಸನ್ನು ತೆಗೆದುಕೊಂಡು ಬಾಥ್‌ರೂಮಿನ ಒಳಕ್ಕೆ ಹೋದಳು. ಅಮರನಾಥ ಅವಳನ್ನೇ ಹಿಂಬಾಲಿಸಿದ. ''ಪ್ಲೀಸ್ ನೀನು ಅಲ್ಲೆ ಇರು'' ಎಂದು ಬಾಗಿಲನ್ನು ಮುಚ್ಚಿಕೊಂಡಳು. ಒಳಗೆ ಹೋದವಳು ಕನ್ನಡಿಯ ಮುಂದೆ ನಿಂತುಕೊಂಡಳು. ಲಂಗಾ ಬ್ಲೌಸಿನಲ್ಲಿ ಅವಳು ಅಪ್ಸರೆಯಂತೆ ಕಾಣಿಸುತ್ತಿದ್ದು, ನಾನು ಇಷ್ಟೊಂದು ಸುಂದರವಾಗಿದ್ದೇನೆಯೇ......? ನಾಚಿಕೆ, ಪ್ರೀತಿ, ಕುತೂಹಲ ಎಲ್ಲವೂ ಅವಳ ಮುಖದಲ್ಲಿ ತುಂಬಿಕೊಂಡಿತು. ಸೀರೆ ಮತ್ತು ಬ್ಲೌಸನ್ನು ಬಿಚ್ಚಿ ಪಕ್ಕಕ್ಕಿಟ್ಟು ಕೈಯಲ್ಲಿಡಿದುಕೊಂಡು ಬಂದಿದ್ದ ವಿಶೇಷ ಅಪ್ಪಟ ಚಿನ್ನದ ಬಣ್ಣದ ನೈಟಿಯನ್ನು ಧರಿಸಿದ ಕೃತಿಕಾ ಮತ್ತೊಮ್ಮೆ ಕನ್ನಡಿಯಲ್ಲಿ ನೋಡಿಕೊಂಡಳು. ಈಗಲೂ ಅವಳ ಕಿವಿಯಲ್ಲಿ ಓಲೆ ಜುಮುಕಿ, ಮೂಗಿನಲ್ಲಿ ಡೈಮಂಡ್ ಮೂಗುತಿ, ಕೊರಳಲ್ಲಿ ಮಾಂಗಲ್ಯ ಸರವಿದ್ದು, ಯಾವುದೊ ವಿಶೇಷ ಕಳೆ ಅವಳನ್ನು ಆವರಿಸಿಕೊಂಡಿದೆ.

ಅಮರನಾಥ ಬಾಗಿಲಿನ ಆ ಕಡೆ ತುಡಿಯುತ್ತಿದ್ದಾನೆ. ಕೃತಿಕಾ ಒಂದೆರಡು ಸಲ ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡು, ಬಾಗಿಲು ತೆಗೆದು ಹೊರಗೆ ಬಂದಳು. ಅವಳು ತೊಟ್ಟಿದ್ದ ನೈಟಿ ಬಣ್ಣ ಅವಳ ದೇಹವೆ ಆಗಿಹೋಗಿತ್ತು. ಅಮರನಾಥ ಅವಳನ್ನು ಅನಾಮತ್ತಾಗಿ ಎತ್ತಿಕೊಂಡೋಗಿ ಮಂಚದ ಮೇಲೆ ನಿಧಾನವಾಗಿ ಇಳಿಸಿದ. ಇಳಿಸುತ್ತ ಅವಳ ಏರುತಗ್ಗುಗಳನ್ನು ಆಶ್ಚರ್ಯದಿಂದ ನೋಡುತ್ತ ಇದ್ದುಬಿಟ್ಟ. ಅವರ ನಡುವಿನ ಸ್ಪರ್ಶ ಭೂಮಿ ಆಕಾಶದಂತೆ, ನದಿಯೊಂದು ಸಮುದ್ರವನ್ನು ಸೇರಿದಂತೆ, ಮರವೊಂದನ್ನು ತಣ್ಣನೆ ಗಾಳಿ ಮೈತಡವಿದಂತೆ, ಮಳೆಯ ಹನಿಗಳು ಕಾದ ನೆಲದ ಮೇಲೆ ದಾಳಿ ಮಾಡಿದಂತಿತ್ತು. ಎರಡು ಹೃದಯಗಳು ಈಗ ಬಡಿತದ ವೇಗವನ್ನು ಹೆಚ್ಚಿಸಿಕೊಂಡಿದ್ದವು. ಕೃತಿಕಾ ಸಾವರಿಸಿಕೊಂಡು, ನಾಚಿಕೊಳ್ಳುತ್ತ ವಿದ್ಯುತ್ ದೀಪಗಳನ್ನು ಆಫ್ ಮಾಡುವಂತೆ ಸಜ್ಞೆ ಮಾಡಿದಳು. ಅಮರನಾಥ ಸುಮ್ಮನೆ ಇದ್ದ. ಬಣ್ಣ ಬಣ್ಣದ ಬೆಳಕಿನ ಕಿರಣಗಳು ಅವರ ಮೇಲೆ ದಾಳಿ ಮಾಡಿದ್ದವು. ಎರಡು ದೇಹಗಳು ಕಾಮನ ಬಣ್ಣಗಳನ್ನು ಹೊತ್ತಿಕೊಂಡು ಉರಿಯುತ್ತಿದ್ದವು. ಅವರ ದೇಹಗಳ ಅಣು ಅಣುಗಳು ಕ್ರಿಯೆಯಲ್ಲಿ ತೊಡಗಿಕೊಳ್ಳಲು ಸಜ್ಜಾಗುತ್ತದ್ದಂತೆ ಬೆಳಕಿನ ಕಿರಣಗಳನ್ನು ಚೆಲ್ಲುತ್ತಿದ್ದ ದೀಪದ ಸ್ವಿಚ್ಚುಗಳನ್ನೊತ್ತಿ ಕಿರಣಗಳ ಕುತೂಹಲಕ್ಕೆ ತಣ್ಣೀರು ಎರೆಚಿಬಿಟ್ಟರು. ಕತ್ತಲು ಬೆಳಕಿನ ನಡುವೆ ಅವರ ದೇಹಗಳು ಎಷ್ಟೊ ಹೊತ್ತು ತೃಪ್ತಿಯ ಸಾಗರದಲ್ಲಿ

ತೇಲಾಡಿದವು. ಹಿಮಾಲಯದ ಶಿಖರಗಳಿಂದ ಬೋರ್ಗರೆದು ಇಳಿದುಬರುವ ನದಿಗಳಂತೆ ಅಂತಿಮವಾಗಿ ಇಬ್ಬರೂ ಸಮುದ್ರ ಸೇರಿಕೊಂಡರು. ಇಬ್ಬರೂ ಮಾತನಾಡದೆ ಸುಮಾರು ಹೊತ್ತು ಮೆತ್ತನೆಯ ನವಿಲುಗರಿಗಳಂತಹ ಹಾಸಿಗೆ ಮೇಲೆ ಹಾಗೆ ಮಲಗಿಕೊಂಡರು. ಇಬ್ಬರಿಗೂ ಏನೂ ಮಾತನಾಡಬೇಕೊ.....? ಯಾವ ಪದಗಳನ್ನು ಉಪಯೋಗಿಸಬೇಕೊ ಅರ್ಥವಾಗಲಿಲ್ಲ . ಅವರಿಗಾದ ತೃಪ್ತಿಯನ್ನು ಮಾತುಗಳಲ್ಲಿ ಹೇಳಿಕೊಳ್ಳಲು ಅವರಿಂದ ಆಗಲಿಲ್ಲ.

* * *

ಮೂರು ದಿನಗಳಿಂದ ಅದೇ ಹೋಟಲಿನ ಕೋಣೆಯಲ್ಲಿ ಅವರು ಮನಸ್ಸು ಮತ್ತು ದೇಹಗಳ ನಡುವೆ ಬಳಲಿ ಹೋಗಿದ್ದರು. ಪ್ರೀತಿ ಎಂದರೆ ಎರಡು ಶರೀರಗಳಲ್ಲಿ ವಾಸಿಸುತ್ತಿರುವ ಒಂದೇ ಆತ್ಮ ಎನ್ನುತ್ತದೆ ಒಂದು ನುಡಿಮುತ್ತು. ಪ್ರೀತಿ ಎಂಬುದು ದಡ್ಡನ ಬುದ್ಧಿವಂತಿಕೆ, ಜಾಣನ ದಡ್ಡತನ ಎಂದಿದ್ದಾನೆ ವಿಲಿಯಂ ಕುಕ್ ಎಂಬ ಮಹಾಶಯ. ಶಾಂತ ಸಾಗರ, ಮೌನದ ನಿದ್ದೆಯಲ್ಲಿದ್ದಾಗ ಉಲ್ಕಾ ಶಿಲೆಯೊಂದು ದುಢಂ ಎಂದು ಬಿದ್ದಂತೆ ಅಮರನಾಥನ ತುಟಿಗಳಿಂದ ''ಕೃತಿಕಾ'' ಎಂಬ ಪದ ಹೊರಗೆಬಿದ್ದಿತು.

ಅರೆನಿದ್ದೆ , ಅರೆ ಜೊಂಪು, ಅರೆ ಆಯಾಸದ ನಡುವೆ ಓಲಾಡುತ್ತಿದ್ದ ಕೃತಿಕಾ ''ಹು.....ಏನು.....?'' ಎಂದಳು. ''ನಾವು ಒಬ್ಬರ್ನೊಬ್ಬರು ಪ್ರೀತಿಸಿದೆವು. ಮದುವೆಯಾದೆವು. ಮುಂದೆ ಏನು.....?'' ಅಮರನಾಥ ಪ್ರಶ್ನಿಸಿದ. ಜೊಂಪಿನಲ್ಲಿದ್ದ ಕೃತಿಕಾ ತಲೆ ಕೊಡವಿಕೊಂಡು ಎದ್ದು ಕುಳಿತು ಅವನ ಕಡೆಗೆ ಕಣ್ಣುಬಿಟ್ಟು ನೋಡಿದಳು. ಅವನ ಮುಖ ಯಾವುದೇ ಉದ್ವೇಗವಿಲ್ಲದೆ ಪ್ರಸನ್ನವಾಗಿತ್ತು. ''ಮುಂದೆ ಏನು ಕೆಲಸಕ್ಕೆ ಸೇರಿಕೊಳ್ತೀವಿ.....? ಇಲ್ಲ ಒಂದು ನರ್ಸಿಂಗ್ ಹೋಂ ಇಟ್ಟುಕೊಳ್ತೀವಿ. ಹಣ ಸಂಪಾದಿಸ್ತೀವಿ. ನಮಗೆ ಮಕ್ಕಳಾಗುತ್ತೆ. ಪಪ್ಪಾ ! ಮಮ್ಮಿ ! ಅಂತ ನಮ್ಮ ಸುತ್ತಲು ಓಡಾಡ್ತವೆ. ದೊಡ್ಡವರಾಗ್ತಾರೆ ಅವರ್ನ ನೋಡಿ ಆನಂದಿಸ್ತೀವಿ'' ಕೃತಿಕಾ ಹೇಳುತ್ತಿದ್ದಂತೆ ''ಅನಂತರ....?'' ಅಮರನಾಥ ಮತ್ತೆ ಪ್ರಶ್ನಿಸಿದ. ಕೃತಿಕಾ ಈಗ ಇನ್ನಷ್ಟು ಕುತೂಹಲವಾಗಿ ಅವನ ಮುಖವನ್ನೇ ನೋಡಿದಳು. ಅವನು ಈಗಲೂ ಪ್ರಸನ್ನನಾಗಿಯೆ ಇದ್ದಾನೆ.

''ಅಮರ್ ಆರ್‌ಯು ಆಲ್‌ರೈಟ್.....?'' ಅವನ ಹಣೆ ಮೈಯನ್ನು ಮುಟ್ಟಿನೋಡಿ ಕೇಳಿದಳು. ಅಮರನಾಥ ಸಣ್ಣದಾಗಿ ನಕ್ಕ. ''ಯಾಕ್ ನಗ್ತಾ ಇದ್ದೀಯಾ....?'' ಗಾಬರಿಯಿಂದ ಕೇಳಿದಳು. ''ಎಲ್ಲರೂ ಹುಟ್ಟುತ್ತಾರೆ, ಎಲ್ಲರೂ

ಸತ್ತೊಗ್ತಾರೆ. ಅವರ ಪೋಟೊಗಳ್ನ ಜಾಸ್ತಿಯೆಂದರೆ ಅವರು ಮನೆಗಳಲ್ಲಿ ನೇತಾಕ್ತಾರೆ. ಕೆಲವು ದಿನಗಳಾದ ಮೇಲೆ ಅವುಗಳ್ನ ತೆಗೆದು ಬಿಸಾಕ್ತಾರೆ'' ಅಮರನಾಥನ ಮಾತುಗಳಿಂದ ಇನ್ನಷ್ಟು ಗಾಬರಿಗೊಂಡ ಕೃತಿಕಾ ''ನೀನು ಏನು ಹೇಳಬೇಕೆಂದಿದ್ದೀಯೊ ಅದನ್ನ ದಯವಿಟ್ಟು ನೇರವಾಗಿ ಹೇಳು'' ಎಂದಳು. ''ನಾವಿಬ್ಬರು ಹಳ್ಳಿಗಳ ಕಡೆ ಹೋಗಿ ಬಡವರ ಸೇವೆ ಯಾಕ್ ಮಾಡಬಾರದು.....?'' 'ವ್ಹಾಟ್.....? ಹಳ್ಳಿಗಳ ಕಡೆಗೆ.....? ನೋಡು ಏನೇನೊ ಯೋಚಿಸಬೇಡ. ಇದನ್ನೆಲ್ಲ ನೀನು ನನ್ನನ್ನ ಮದುವೆ ಮಾಡಿಕೊಳ್ಳುವುದಕ್ಕಿಂತ ಮುಂಚೆ ಯೋಚಿಸಬೇಕಾಗಿತ್ತು. ಹಳ್ಳಿಗಳ ಕಡೆ ಹೋಗಿ ಸೇವೆ ಮಾಡ್ತೀಯಾ....? ಏನಿದೆ ಹಳ್ಳಿಗಳಲ್ಲಿ.....? ''ಏನಿಲ್ಲ ಹಳ್ಳಿಗಳಲ್ಲಿ....? ನೀನು ನಾನು ಇವೊತ್ತು ಕುಳಿತುಕೊಂಡು ತಿನ್ನಬೇಕಾದರೆ ಅದೆಲ್ಲ ಹಳ್ಳಿಗಳಿಂದಾನೆ ಬರ್ತಾ ಇರುವುದು'' ಎಂದ ಅಮರನಾಥನ ಮಾತಿಗೆ ''ನಾವು ಅದಕ್ಕೆ ಹಣ ಕೋಡ್ತಿವಿ. ಅದಕ್ಕಾಗಿ ನಾವೋಗಿ ಹಳ್ಳಿಗಳಲ್ಲಿ ದುಡಿಯಬೇಕಾಗಿಲ್ಲ '' ಎಂದಳು ಕೃತಿಕಾ. ಈಗ ಅಮರನಾಥ ಮತ್ತು ಕೃತಿಕಾ ಇಬ್ಬರೂ ಸುಮ್ಮನಾದರು. ಅವರ ಮೂರು ದಿನಗಳ ತಣ್ಣನೆಯ ಹೋಟಲ್ ವಾಸ ಈಗ ಬಿಸಿಯಾಗಿ ಮಾರ್ಪಡುತ್ತಿತ್ತು.

* * *

ಸಿ.ಐ. ಅವರು ಖಯ್ಯಾಂನನನ್ನು ಹಿಡಿದು ತಂದು ವಿಚಾರಿಸಿದಾಗ ಮದ್ರಾಸಿನ ಸಂಬಂಧವನ್ನು ಅಲ್ಲಗಳೆದ. ಇದರ ಆಧಾರದಿಂದ ಅಂತು ಕೊನೆಗೆ ಜಗನ್ಮೋಹನರಾವ್ ಅವರ ಸ್ವತ್ತನ್ನು ತಾನೆ ಪೂರ್ಣವಾಗಿ ಹೊಡೆಯಬೇಕೆಂದು ಅವರ ಮೊದಲನೆ ಪತ್ನಿಯ ಮಗ, ಅನುಳನ್ನು ಕೊಲೆ ಮಾಡಿಸಿದ್ದಾಗಿ ಒಪ್ಪಿಕೊಂಡ. ಜಗನ್ಮೋಹನರಾವ್ ಅವರ ಎರಡನೆ ಪತ್ನಿಯ ಏಕೈಕ ವಾರಸುದಾರಳಾದ ಅನುಳನ್ನು ತೆಗೆದುಬಿಟ್ಟರೆ ಎಲ್ಲವು ಸುಗಮವೆಂದು ತಿಳಿದುಕೊಂಡಿದ್ದ. ಅವನ ತಾಯಿಯನ್ನು ಜಗನ್ಮೋಹನರಾವ್ ಮೊದಲು ಮದುವೆ ಮಾಡಿಕೊಂಡಿದ್ದರು ಜಗನ್ಮೋಹನರಾವ್ ಮನೆಯವರು ಅವನ ತಾಯಿಯನ್ನು ಮನೆಗೆ ಬರದಂತೆ ನೋಡಿಕೊಂಡಿದ್ದರು.

ಈಗ ಜಗನ್ಮೋಹನರಾವ್ ಮತ್ತು ಅವರ ಸ್ವತ್ತಿನ ಮಧ್ಯ ನಿಂತುಕೊಂಡಿದ್ದ ಅವರ ಏಕೈಕ ಮಗಳಾದ ಅನುಳನ್ನು ಮುಗಿಸಿಬಿಟ್ಟರೆ ಒಂದಲ್ಲ ಒಂದು ದಿನ ಆ ಸ್ವತ್ತೆಲ್ಲ ತನಗೆ ಬಂದೇ ಬರುತ್ತದೆಂದು ಯೋಚಿಸಿ ಈ ಕೊಲೆಯನ್ನು ಮಾಡಿಸಿದ್ದ. ಅವನು ಮದ್ರಾಸಿನ ಕೊಲೆಗಡುಕರನ್ನು ಹಿಡಿದು ಅವರ ಮೂಲಕ ಬೆಂಗಳೂರಿನ ಖಯ್ಯಾಂನನ್ನು ಸಂಪರ್ಕಿಸಿದ್ದ. ಖಯ್ಯಾಂ, ಇಬ್ಬರು ಹೊಸಬರನ್ನು ಈ ಕೆಲಸಕ್ಕೆ ನೇಮಿಸಿ ಅನುಳನ್ನು ಕೊಲೆಗೈಸಿದ್ದ. ಈಗ ಎಲ್ಲವೂ ಬಯಲಿಗೆ ಬಂದಿತು. ಪೊಲೀಸರು ಎಲ್ಲರನ್ನು ಚೆನ್ನಾಗಿ

ತದಿಕಿ, ನ್ಯಾಯಾಲಯಕ್ಕೆ ಒಪ್ಪಿಸಿದರು. ಈಗ ಎಲ್ಲರೂ ಜೈಲಿನಲ್ಲಿ ಕಂಬಿಗಳನ್ನು ಎಣಿಸುತ್ತಾ ಅಂತಿಮ ತೀರ್ಪಿಗಾಗಿ ಕಾಯುತ್ತಿದ್ದರು. ಖಯ್ಯಾಂ ಈ ಮೊದಲು ಎಷ್ಟೋ ಕೊಲೆಗಳಲ್ಲಿ ಕೈವಾಡ ನಡೆಸಿ ಚಾಕಚಕ್ಯತೆಯಿಂದ ತಪ್ಪಿಸಿಕೊಂಡಿದ್ದ. ಆದೆ ಈ ಕೊಲೆಯಲ್ಲಿ ನೇರವಾಗಿ ಅವನ ಕೈವಾಡ ಇರುವುದನ್ನು ಪೊಲೀಸರು ನಿರೂಪಿಸಿದ್ದರು. ಎಲ್ಲರಿಗೂ ಅವರವರು ಮಾಡಿರುವ ಅಪರಾಧಕ್ಕೆ ತಕ್ಕಂತೆ ದಂಡನೆ ದೊರಕುವುದು ಗ್ಯಾರಂಟಿಯಾಗಿತ್ತು.

ವಿಷಯ ತಿಳಿದ ಜಗನ್ಮೋಹನರಾವ್ ಮತ್ತು ಅವರ ಎರಡನೆ ಹೆಂಡತಿಯಾದ ಅನುಳ ತಾಯಿ ದಿಗ್ಮೂಢರಾಗಿದ್ದರು. ಜಗನ್ಮೋಹನರಾವ್ ಯಾವ ಜನ್ಮದಲ್ಲಿ ಏನು ಕರ್ಮ ಮಾಡಿದ್ದನೊ ತನ್ನ ಮಗನೆ ಮಗಳನ್ನು ಕೊಲ್ಲಿಸಿದ್ದ. ಸ್ವತ್ತಿಗಾಗಿ ದಾಯಾದಿಗಳು ಮಹಾಭಾರತದ ಕಾಲದಿಂದ ಇಂದಿನವರೆಗೂ ಒಬ್ಬರನ್ನೊಬ್ಬರು ಸಾಯಿಸುತ್ತಾ ಬಂದಿದ್ದಾರೆ. ಆದರೆ ಇಲ್ಲಿ ಅಣ್ಣ ತಂಗಿಯರನ್ನು ಕೊಲೆ ಮಾಡಿಸಿದ್ದ. ಜೊತೆಗೆ ಅಂತಹ ಒಂದು ಪ್ರಸಂಗ ಜಗನ್ಮೋಹನರಾವ್ ಅವರ ರಕ್ತ ಹಂಚಿಕೊಂಡು ಹುಟ್ಟಿದ್ದ ಮಗನೆ ಮಗಳನ್ನು ಕೊಲೆ ಮಾಡಿಸಿದ್ದ. ಜಗನ್ಮೋಹನರಾವ್, ಅನು ಸತ್ತೋದಳು ಎಂದು ಮೊದಲ ಬಾರಿಗೆ ತಿಳಿದಾಗಲು ಇಷ್ಟೊಂದು ನೋವನ್ನು ಅನುಭವಿಸಿರಲಿಲ್ಲ. ಜನನ್ಮೋಹನರಾವ್ ಮತ್ತು ಅವರ ಮೊದಲನೆ ಹೆಂಡತಿಯ ಸಂಬಂಧ ಅಲ್ಲಿಗೆ ಕಡಿದುಬಿದ್ದಿತು. ಜಗನ್ಮೋಹನರಾವ್ ತನ್ನ ಸ್ವತ್ತನ್ನು ತಾನು ಮತ್ತು ತನ್ನ ಪತ್ನಿಯ ಮರಣದ ನಂತರ ಒಂದು ಅನಾಥ ಆಶ್ರಮಕ್ಕೆ ಉಯಿಲು ಬರೆದು ಇಟ್ಟುಬಿಟ್ಟರು.

* * *

ಅಮರನಾಥ ಮತ್ತು ಕೃತಿಕಾಳ ಹೌಸ್ ಸರ್ಜನ್ ತರಬೇತಿ ಮುಗಿದುಹೋಗಿ ಸ್ವಂತವಾಗಿ ವೈದ್ಯ ವೃತ್ತಿಯನ್ನು ನಡೆಸಲು ಪರವಾನಗಿ ಪಡೆದುಕೊಂಡಿದ್ದರು. ಕೃತಿಕಾಳ ತಂದೆ ಬೆಂಗಳೂರಿನ ಒಂದು ಹೊಸ ಬಡಾವಣೆಯಲ್ಲಿ ಎರಡು ಅಂತಸ್ತಿನ ಸುಸಜ್ಜಿತ ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ಅದನ್ನು ಸಣ್ಣ ನರ್ಸಿಂಗ್ ಹೋಂ ಆಗಿ ಪರಿವರ್ತಿಸಿದ್ದರು. ಅಮರನಾಥ ಮತ್ತು ಕೃತಿಕಾ ನರ್ಸಿಂಗ್ ಹೋಂ ನೋಡಿಕೊಂಡು ಬೆಂಗಳೂರಿನಲ್ಲಿ ನೆಲೆಯೂರಲು ಕೃತಿಕಾ ತಂದೆ ಈ ನರ್ಸಿಂಗ್ ಹೋಂನ್ನು ಸ್ಥಾಪಿಸಿದ್ದರು.

ಅಮರನಾಥನಿಗೆ, ಕೃತಿಕಾ ತಂದೆ ಹಣಹೂಡಿ ಮಾಡಿದ ಈ ನರ್ಸಿಂಗ್ ಹೋಂನಲ್ಲಿ ಕೆಲಸ ಮಾಡಲು ಇಷ್ಟವಾಗಲಿಲ್ಲ. ಕೃತಿಕಾಳನ್ನು ಮದುವೆಯಾದಾಗಿನಿಂದ ಇದನ್ನು ಒಂದಲ್ಲ ಒಂದು ರೀತಿಯಲ್ಲಿ ಅವನು ವಿರೋಧಿಸುತ್ತಲೆ ಬಂದಿದ್ದ. ಕೃತಿಕಾ ಇಷ್ಟಕ್ಕೂ ಇದರಲ್ಲಿ ತಪ್ಪೇನಿದೆ.....?ಯಾರದೊ ನರ್ಸಿಂಗ್ ಹೋಂನಲ್ಲಿ ಪ್ರಾಕ್ಟೀಸ್ ಮಾಡುವುದೊ,,, ಇಲ್ಲ ಯಾವುದೊ ಸರ್ಕಾರಿ ಆಸ್ಪತ್ರೆಯಲ್ಲಿ ಉದ್ಯೋಗ

ಮಾಡುವುದಕ್ಕಿಂತ ಇದು ಒಳ್ಳೆಯದಲ್ಲವೆ....? ಎಂದರೆ ಅಮರನಾಥ ನಿಮ್ಮ ತಂದೆ ಹಣ ಹೂಡಿದ ನರ್ಸಿಂಗ್ ಹೋಂನಲ್ಲಿ ನೀನು ಬೇಕಾದರೆ ಕೆಲಸ ಮಾಡು. ಆದರೆ ನಾನು ಮಾತ್ರ ಅದರಲ್ಲಿ ಪ್ರಾಕ್ಟೀಸ್ ಮಾಡುವುದಿಲ್ಲ ಎಂದು ಹೇಳುತ್ತಲೆ ಬಂದಿದ್ದ. ಅಮರನಾಥನ ಈ ಧೋರಣೆಯಿಂದ ಕೃತಿಕಾ ಮೊದಮೊದಲು ಈ ವಿಷಯದಲ್ಲಿ ಶಾಕ್ ಹೊಡೆಸಿಕೊಂಡರು ಅಮರನಾಥನನ್ನು, ನಾನು ಪ್ರೀತಿಯಿಂದ ಒಪ್ಪಿಸಬಲ್ಲೆ ಎಂದು ತಿಳಿದುಕೊಂಡಿದ್ದಳು. ಈ ವಿಷಯದಲ್ಲಿ ಅಮರನಾಥನ ತಂದೆ ತಾಯಿ ಏನೂ ಹೇಳದೆ ತಟಸ್ಥರಾಗಿದ್ದರು.

ನಮ್ಮ ತಂದೆ ನನಗೆ ನೀಡಿರುವ ಈ ಉಡುಗೊರೆ ನಮ್ಮಿಬ್ಬರಿಗೂ ಸೇರುವುದಿಲ್ಲವೆ....? ಎಂದು ಕೃತಿಕಾ ಕೇಳಿದ್ದಳು. ಈ ಗೊಂದಲಗಳ ನಡುವೆ ಅಮರನಾಥ ಮತ್ತು ಕೃತಿಕಾ ಹೌಸಿಂಗ್ ಮುಗಿಸಿದ ಮೇಲೆ ಕೆಲವು ದಿನಗಳು ಅಮರನಾಥನ ಮನೆಯಲ್ಲಿ ವಾಸ್ತವ್ಯ ಹೂಡಿದ್ದರು. ಅಮರನಾಥನ ತಂದೆ ತಾಯಿ ಅವರಿಗೆ ಇದ್ದ ಮನೆಯಲ್ಲೇ ಒಂದು ಸಣ್ಣ ಕೋಣೆಯನ್ನು ವಿಶೇಷ ಮುತುವರ್ಜಿಯಿಂದ ಸಜ್ಜುಗೊಳಿಸಿ ಬಿಟ್ಟುಕೊಟ್ಟಿದ್ದರು. ಕೃತಿಕಾಳನ್ನು ಮನೆಯ ಎಲ್ಲರೂ ವಿಶೇಷವಾಗಿ ನೋಡಿಕೊಳ್ಳತೊಡಗಿದರು. ಕೃತಿಕಾ ಕೂಡ ಪ್ರೀತಿಯಿಂದಲೆ ಎಲ್ಲರ ನಡುವೆ ಬೆರೆತು ಹೋಗಿದ್ದಳು. ಆದರೆ ಅವಳಿಗೆ ತನ್ನ ಮನೆಯಲ್ಲಿ ಇದ್ದ ಐಷಾರಾಮ ಜೀವನವಿರಲಿಲ್ಲ.

ಹೊಸದಾಗಿ ಮದುವೆಯಾದ ಗಂಡ ಹೆಂಡತಿಗೆ ಪ್ರತ್ಯೇಕ ಕೋಣೆ ಇದ್ದರು ಆ ಮನೆಯಲ್ಲಿ ಪ್ರೈವೆಸಿ ಇರಲಿಲ್ಲ. ರಾತ್ರಿ ಹನ್ನೊಂದು ಗಂಟೆಯವರೆಗೂ ಯಾರದು ಯಾವ ಕೋಣೆ ಎಂಬುದೇ ಗೊತ್ತಾಗುತ್ತಿರಲಿಲ್ಲ . ಕೃತಿಕಾ, ಅಮರನಾಥನ ಜೊತೆಗೆ ಪ್ರವೆಸಿಯಾಗಿ ಮಾತನಾಡಬೇಕಾದರೆ ಹನ್ನೊಂದು ಗಂಟೆ ರಾತ್ರಿಯವರೆಗೂ ಕಾಯಬೇಕಾಗಿತ್ತು. ಅನಂತರವು ಮೃದುವಾಗಿ ಮಾತನಾಡಿದರು ಎಲ್ಲರಿಗೂ ಕೇಳಿಸುತ್ತಿತ್ತು. ಹೊಸದಾಗಿ ಮದುವೆಯಾದವರು ಹೀಗೆ ಜೀವನ ನಡೆಸುವುದೆಂದರೆ ಹೇಗೆ.....? ಕೃತಿಕಾ ಯೋಚಿಸತೊಡಗಿದಳು. ಆದರೆ ಅಮರನಾಥನಿಗೆ ಇದು ಯಾವುದೂ ಸಮಸ್ಯೆಯೇ ಅಲ್ಲ . ಮನೆಯ ಯಾವುದೊ ಒಂದು ಸ್ಥಳದಲ್ಲಿ ಕುಳಿತು ಹರಟೆ ಹೊಡೆಯುತ್ತಿದ್ದ. ಹಗಲು ರಾತ್ರಿಯನ್ನದೇ ಯಾವುದೊ ಒಂದು ಸ್ಥಳದಲ್ಲಿ ಮಲಗಿ ನಿದ್ದೆ ಹೊಡೆಯುತ್ತಿದ್ದ. ಈ ಗೊಂದಲಗಳ ನಡುವೆಯೆ ಕೃತಿಕಾಳ ತಂದೆ ನರ್ಸಿಂಗ್ ಹೋಂನ ಒಂದು ಭಾಗವನ್ನು ಮನೆಯಾಗಿ ಪರಿವರ್ತಿಸಿದ್ದರು.

ಅಮರನಾಥನಿಗೆ ಯಾಕೊ ಏನೊ ಬೆಂಕಿಯ ಬಲೆಯಲ್ಲಿ ಬಿದ್ದುಬಿಟ್ಟನೊ ಏನೊ ಎನ್ನುವ ಯೋಚನೆ ಬರತೊಡಗಿತು. ಹಣವಂತರ ಸಹವಾಸ ಇಷ್ಟು ತೀವ್ರವಾಗಿ

ಮನುಷ್ಯನ ಸ್ವತಂತ್ರ್ಯವನ್ನು ಹಾಳುಮಾಡಿಬಿಡುತ್ತದೆ ಎಂದುಕೊಂಡಿರಲಿಲ್ಲ. ಆದರೆ ಕೃತಿಕಾ ನನ್ನನ್ನು ಪ್ರೀತಿಸಿ ಮದುವೆಯಾದವಳು. ಅವಳ ಯೋಚನೆಯೂ ಸರಿ ಇರಬಹುದು. ತಂದೆಗೆ ಇರುವ ಹೇರಳ ಸ್ವತ್ತಿನಲ್ಲಿ ಸ್ವಲ್ಪ ಭಾಗವನ್ನು ತನ್ನ ಮಗಳಿಗೆ ತಾವೆ ಕೊಟ್ಟಿದ್ದಾರೆ. ಅದರಲ್ಲಿ ತಪ್ಪೇನಿದೆ.....? ಆದರೆ, ನಾನು ಅವಳಿಗೆ ಗಂಡನಾದ ಮಟ್ಟಿಗೆ ಇದೆಲ್ಲವನ್ನು ಅನುಭವಿಸಲು ಯೋಗ್ಯನೆ......?

ಇಷ್ಟಕ್ಕೂ ನನ್ನ ಮುಂದಿನ ಬದುಕಿಗೆ ಅರ್ಥವಿದೆಯೆ.....? ಆಲೋಚನೆಯಲ್ಲಿ ಬಿದ್ದುಬಿಟ್ಟ. ಅಮರನಾಥ ಮತ್ತು ಕೃತಿಕಾ ನರ್ಸಿಂಗ್ ಹೋಂನ ಇನ್ನೊಂದು ಭಾಗದಲ್ಲಿದ್ದ ಮನೆಯಲ್ಲಿ ಹೊಸದಾಗಿ ಜೀವನ ಪ್ರಾರಂಭಿಸಿದರು. ಅಮರನಾಥನ ತಂದೆ, ತಾಯಿ ಗಂಡು ಮಗು ಮನೆಬಿಟ್ಟು ಹೋಗಿಬಿಟ್ಟನಲ್ಲ ಎಂದು ಯೋಚಿಸತೊಡಗಿದರು. ಇದನ್ನು ನುಂಗಿಕೊಳ್ಳಲು ಮನೆಬಿಟ್ಟು ಹೋಗಿಬಿಟ್ಟನಲ್ಲ ಎನ್ನುವುದಕ್ಕಿಂತ ಕೆಲಸ ಸಿಕ್ಕಿ ಬೇರೆ ಊರಿಗೆ ಹೋಗಿದ್ದಾನೆ ಎಂದುಕೊಳ್ಳುತ್ತಿದ್ದರು. ಒಂದೇ ಒಂದು ಸಮಾಧಾನವೆಂದರೆ ಅಮರನಾಥ ಬೆಂಗಳೂರಿನಲ್ಲೇ ಇದ್ದಾನೆ ಎನ್ನುವುದು. ಅಮರನಾಥ ದಿನಕ್ಕೆ ಒಂದು ಸಲವಾದರು ಮನೆಗೆ ಬಂದು ತಂದೆ ತಾಯಿ ತಮ್ಮ ತಂಗಿಯನ್ನು ನೋಡಿಕೊಂಡು ಹೋಗುತ್ತಿದ್ದ . ಕೃತಿಕಾ ಕೂಡ ಆಗಾಗ ಅಮರನಾಥನ ಜೊತೆಗೆ ಬಂದುಹೋಗುತ್ತಿದ್ದಳು.

ಕೃತಿಕಾಳ ಮನೆಯಲ್ಲಿ ಕೃತಿಕಾ ಮತ್ತು ಅಮರನಾಥ ಬೆಂಗಳೂರಿನಲ್ಲಿ ಚೆನ್ನಾಗಿ ದುಡಿದು ಐಶ್ವರ್ಯ ಮತ್ತು ಆರೋಗ್ಯದಿಂದ ತುಂಬಿ ತುಳುಕಾಡಲಿ ಎಂದು ಆಲೋಚಿಸುತ್ತಿದ್ದರು. ಕೃತಿಕಾಳ ಪ್ರೀತಿ ಅಮರನಾಥನನ್ನು ಕಟ್ಟಾಕಿ ಅವಳ ಜೊತೆಗೆ ಕೊಂಡೊಯ್ದಿತ್ತು. ಅಮರನಾಥನ ಸ್ಫೂರ್ತಿಯಿಲ್ಲದ ಮುಖವನ್ನು ನೋಡುತ್ತಿದ್ದ ಕೃತಿಕಾಳ ಎದೆಯಲ್ಲಿ ಯಾವುದೋ ಭಯ ತುಂಬಿಕೊಳ್ಳುತ್ತಿತ್ತು. ಇವನು ಯಾಕಾದರು ನನ್ನನ್ನ ಅರ್ಥಮಾಡಿಕೊಳ್ಳುತ್ತಿಲ್ಲ....? ಇಷ್ಟಕ್ಕೂ ನಾನು ಏನು ತಪ್ಪು ಮಾಡಿದೆ ಎಂದು ಆಗಾಗಾ ಜೋರಾಗಿಯೆ ಕೇಳತೊಡಗಿದಳು. ಅಮರನಾಥ ಅವಳ ಮನಸ್ಸಿಗೆ ನೋವಾಗಬಾರದೆಂದು ಮೇಲೆ ಮೇಲೆ ನಗುನಗುತ್ತಾ ಅವಳ ಜೊತೆಗೆ ಮಾತನಾಡುತ್ತಿದ್ದ, ಆದರೆ ಒಳಗೊಳಗೆ ಅವಳಿಂದ ದೂರವಾಗುತ್ತಿದ್ದ .

❋ ❋ ❋

ನಗರದ ದೈನಂದಿನ ಜೀವನದಲ್ಲಿ ಹೊಸ ಹೊಸ ರೋಗಗಳು ಕಾಣಿಸಿಕೊಳ್ಳುತ್ತಿದ್ದವು. ವೈದ್ಯರು ಪ್ರತಿಯೊಂದು ಕಾಯಿಲೆಗೂ ಹೊಸ ಹೊಸ ಔಷಧಿಗಳನ್ನು ಕಂಡಿಡಿದು ಮಾರುಕಟ್ಟೆಗೆ ಬಿಡುತ್ತಿದ್ದರು. ಜನರಲ್ಲಿ ಆರೋಗ್ಯದ ಬಗ್ಗೆ ಜಾಗರೂಕತೆ ಮೂಡಿ ವೈದ್ಯರಿಂದ ಸಲಹೆ ಪಡೆಯುವುದು ಹೆಚ್ಚಾಗುತ್ತಿತ್ತು. ಕೃತಿಕಾ

ನಡೆಸುತ್ತಿದ್ದ ನರ್ಸಿಂಗ್ ಹೋಂ ಒಂದು ದೊಡ್ಡ ಬಡಾವಣೆಯಲ್ಲಿದ್ದು ರೋಗಿಗಳು ಹೆಚ್ಚು ಬರತೊಡಗಿದರು. ಕೆಲವು ವಿಶೇಷ ತಜ್ಞರನ್ನು ಸಾಯಂಕಾಲದ ಹೊತ್ತು ಕೃತಿಕಾ ತನ್ನ ನರ್ಸಿಂಗ್ ಹೋಂಗೆ ಕರೆಸಿಕೊಂಡು ತಪಾಸಣೆ ನಡೆಸುತ್ತಿದ್ದಳು. ರಕ್ತ ಮೂತ್ರಗಳನ್ನು ಸಂಗ್ರಹಿಸಿ ಹತ್ತಿರದ ಲ್ಯಾಬ್‌ಗಳಿಗೆ ಕಳುಹಿಸಿ ಫಲಿತಾಂಶಗಳನ್ನು ಪಡೆಯುತ್ತಿದ್ದಳು. ನರ್ಸಿಂಗ್ ಹೋಂನಲ್ಲಿ ಹತ್ತು ಹಾಸಿಗೆಗಳಿದ್ದು ಹೆಚ್ಚು ಕಡಿಮೆ ಎಲ್ಲಾ ದಿನಗಳಲ್ಲೂ ರೋಗಿಗಳು ಇರುತ್ತಿದ್ದರು. ಸಣ್ಣ ಪುಟ್ಟ ಶಸ್ತ್ರ ಚಿಕಿತ್ಸೆಗಳನ್ನು ಅಲ್ಲೆ ನಡೆಸಲಾಗುತ್ತಿತ್ತು. ಒಟ್ಟಿನಲ್ಲಿ ನರ್ಸಿಂಗ್ ಹೋಂ ನಿಧಾನವಾಗಿ ಹೆಸರು ಗಳಿಸಿಕೊಳ್ಳುತ್ತಿತ್ತು.

ಈ ನಡುವೆ ಆಗಾಗ ಕೃತಿಕಾಳ ತಂದೆ, ತಾಯಿ ಬೆಂಗಳೂರಿಗೆ ಬಂದು ಮಗಳು, ಅಳಿಯ ಮತ್ತು ನರ್ಸಿಂಗ್ ಹೋಂ ನೋಡಿಕೊಂಡು ಹೋಗುತ್ತಿದ್ದರು. ಹೋಗುವಾಗ ''ನೋಡಮ್ಮ ನಿನ್ನನ್ನ ಓದಿಸಿದ್ದಕ್ಕೆ ಐದಾರು ಲಕ್ಷ ರೂಪಾಯಿ ಖರ್ಚಾಗಿದೆ. ಈ ಮನೆ ಕೊಂಡುಕೊಂಡದ್ದು, ಅದರಲ್ಲಿ ನರ್ಸಿಂಗ್ ಹೋಂ ಇಟ್ಟಿದ್ದಕ್ಕೆ ಇಪ್ಪತ್ತು ಲಕ್ಷ, ಮದುವೆಗೆ ಐದು ಲಕ್ಷ ಒಟ್ಟು ಮೂವತ್ತು ನಲವತ್ತು ಲಕ್ಷ ರೂಪಾಯಿ ಖರ್ಚಾಗಿದೆ. ಅದೆಲ್ಲಾ ದುಡಿಯಬೇಕು.'' ಎಂದು ಕೃತಿಕಾಗೆ ಹೇಳಿ ಹೋಗುತ್ತಿದ್ದರು.

'' ನನಗಾಗಿ ನಮ್ಮ ತಂದೆ, ತಾಯಿ ಇಷ್ಟು ಹಣ ಖರ್ಚುಮಾಡಿದ್ದಾರಾ....? ಹೇಗಾದರು ಮಾಡಿ ಈ ಹಣವನ್ನೆಲ್ಲಾ ದುಡಿಯಬೇಕು'' ಎಂದುಕೊಳ್ಳುತ್ತಿದ್ದಳು ಕೃತಿಕಾ. ಬೆಂಗಳೂರಿನ ಇತರ ನರ್ಸಿಂಗ್ ಹೋಂಗಳು ಯಾವ ಯಾವ ರೀತಿ ರೋಗಿಗಳನ್ನು ಮರಳುಗೊಳಿಸುತ್ತಿದ್ದರು ಎನ್ನುವದನ್ನೆಲ್ಲ ನಿಧಾನವಾಗಿ ತಿಳಿದುಕೊಳ್ಳುತ್ತಿದ್ದಳು. ಹಾಗೆ ಅದನ್ನು ಒಂದೊಂದಾಗಿ ಚಾಕಚಕ್ಯತೆಯಿಂದ ತಾನು ತನ್ನ ನರ್ಸಿಂಗ್ ಹೋಂನಲ್ಲಿ ಕಾರ್ಯರೂಪಕ್ಕೆ ತರುತ್ತಿದ್ದಳು.

ಇದನ್ನೆಲ್ಲ ಗಮನಿಸುತ್ತಿದ್ದ ಅಮರನಾಥನಿಗೆ ತಲೆ ಚಿಟ್ಟು ಹಿಡಿದುಹೋಗುತ್ತಿತ್ತು. ಅವನು ಆಗಲೆ ಒಂದೆರಡು ನರ್ಸಿಂಗ್ ಹೋಂಗಳಲ್ಲಿ ಕೆಲಸ ನಿರ್ವಹಿಸಿ ಅಲ್ಲಿ ನಡೆಯುವ ಅವ್ಯವಹಾರಗಳನ್ನು ನೋಡಿ ಹೊರ ನಡೆದಿದ್ದ. ಕೃತಿಕಾ, ಅಮರನಾಥನನ್ನು ತಮ್ಮ ನರ್ಸಿಂಗ್‌ಹೋಂನಲ್ಲಿ ಕೆಲಸ ನಿರ್ವಹಿಸುವಂತೆ ಎಷ್ಟೇ ಬೇಡಿಕೊಂಡರು ಅವನು ಕೇಳಲಿಲ್ಲ. ಇದೇ ವಿಷಯಕ್ಕೆ ಅವರಿಬ್ಬರ ನಡುವೆ ಮಾತಿಗೆ ಮಾತು ಬೆಳೆದು ಆಗಾಗ ಜಗಳವು ಆಗುತ್ತಿತ್ತು. ಹಗಲು ಮಾತನಾಡಿದರೆ, ರಾತ್ರಿ, ರಾತ್ರಿ ಮಾತನಾಡಿದರೆ ಹಗಲು ಮುನಿಸಿಕೊಳ್ಳುತ್ತಿದ್ದರು.

ಅಮರನಾಥನಿಗೆ ತಾನು ಸುಮ್ಮನೆ ಕುಳಿತುಕೊಂಡು ಕೃತಿಕಾಳ ಶ್ರಮದಲ್ಲಿ ತಿನ್ನುತ್ತಿರುವಂತೆ ತೋರುತ್ತಿತ್ತು. ಸರಕಾರದ ಉದ್ಯೋಗ ಅವನಿಗೆ ದೊರಕಲಿಲ್ಲ, ಇಷ್ಟವು

ಇಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗ ನಿರ್ವಹಿಸುವ ಅವಕಾಶ ದೊರಕಿದರು ಕೃತಿಕಾಳ ವಿರೋಧದಿಂದ ಅಮರನಾಥನಿಗೆ ಬೆಂಗಳೂರು ಬಿಡಲು ಆಗಲಿಲ್ಲ . ಅಮರನಾಥ ಮತ್ತು ಕೃತಿಕಾಳ ನಡುವೆ ನಡೆಯುತ್ತಿದ್ದ ಈ ಶೀತಲ ಸಮರವನ್ನು ಗಮನಿಸುತ್ತಿದ್ದ ಎರಡು ಕುಟುಂಬಗಳು ಒಂದೆರಡು ಸಲ ಅಮರನಾಥನಿಗೆ ಅದೇ ನರ್ಸಿಂಗ್ ಹೋಂನಲ್ಲಿ ಕಾರ್ಯ ನಿರ್ವಹಿಸಿದರೆ ಒಳಿತೆಂದು ತಿಳಿಹೇಳಿದ್ದರು. ಅಮರನಾಥನ ತಂದೆ ತಾಯಿ ''ನೀನೇ ಬೇರೆ ನರ್ಸಿಂಗ್ ಹೋಂ ತೆಗೆಯಬೇಕಾದರೆ ಸಾಕಷ್ಟು ಹಣ ಬೇಕಾಗುತ್ತದೆ. ಇರುವ ನರ್ಸಿಂಗ್ ಹೋಂನಲ್ಲೆ ಯಾಕೆ ಕೆಲಸ ಮಾಡಬಾರದು....?'' ಎಂದರು.

ಅಮರನಾಥ, ''ನರ್ಸಂಗ್ ಹೋಂ ತೆಗೆಯಲು ಇಷ್ಟವಿಲ್ಲ. ಅದರಲ್ಲಿ ಕೆಲಸ ಮಾಡಲು ಇಷ್ಟವಿಲ್ಲ'' ಎಂದುಬಿಟ್ಟ . ಕೃತಿಕಾಳ ತಂದೆ ತಾಯಿಗೂ ಇದೆ ಮಾತನ್ನು ಹೇಳಿದ್ದ ಅಮರನಾಥನನ್ನು , ಕೃತಿಕಾ ಮಾತ್ರ ಹೇಗಾದರು ಮಾಡಿ ಒಪ್ಪಿಸಲು ಸಾಧ್ಯವೆಂದು ಎರಡು ಮನೆಯವರು ಕೃತಿಕಾ ಹಿಂದೆ ಬಿದ್ದಿದ್ದರು. ಪ್ರೀತಿಯಿಂದ ಏನಾದರು ಸಾಧಿಸಬಹುದು ಎನ್ನುವ ಮಾತುಗಳು ಈಗ ಕೃತಿಕಾಗೆ ಬಾಲಿಶವಾಗಿ ತೋರುತ್ತಿದ್ದವು. ಇಷ್ಟೆಲ್ಲ ನಡೆಯುತ್ತಿದ್ದರು ಕೃತಿಕಾ ಅಮರನಾಥನನ್ನು ಪ್ರೀತಿಯಿಂದಲೆ ನೋಡಿಕೊಳ್ಳುತ್ತಿದ್ದಳು. ಪೊಲೀಸರು ಮತ್ತು ಗಡಿಯಲ್ಲಿರುವ ಯೋಧರಂತೆ ವೈದ್ಯರು ಕೂಡ ಇಪ್ಪತ್ನಾಲ್ಕು ಗಂಟೆ ತಯಾರಾಗಿಯೆ ಇರಬೇಕು ಎನ್ನುವುದು ಕೃತಿಕಾಗೆ ಈಗೀಗ ಗೊತ್ತಾಗುತ್ತಿತ್ತು. ನರ್ಸಿಂಗ್ ಹೋಂನಲ್ಲಿ ಕೃತಿಕಾ ಜೊತೆಗೆ ಕೆಲಸ ಮಾಡುತ್ತಿದ್ದ ಮಹಿಳಾ ವೈದ್ಯೆ ಹೆರಿಗೆ ಕೇಸುಗಳನ್ನು ನೋಡಿಕೊಳ್ಳುತ್ತಿದ್ದಳು. ಕೃತಿಕಾ ಆ ಮಹಿಳಾ ವೈದ್ಯಳ ಜೊತೆಗೆ ಪ್ರತಿಯೊಂದನ್ನು ಗಮನಿಸುತ್ತ ಕೆಲಸ ಕಲಿತುಕೊಳ್ಳುತ್ತಿದ್ದಳು. ಈ ನಡುವೆ ನರ್ಸಿಂಗ್ ಹೋಂನಲ್ಲಿ ಒಂದು ಘಟನೆ ನಡೆದುಹೋಗಿತ್ತು.

ಅದೇ ಬಡಾವಣೆಯ ಮಹಿಳೆಯೊಬ್ಬಳನ್ನು ಹೆರಿಗೆಗಾಗಿ ನರ್ಸಿಂಗ್ ಹೋಂನಲ್ಲಿ ದಾಖಲಿಸಲಾಯಿತು. ಗರ್ಭಿಣಿಯ ತಪಾಸಣೆ ನಡೆಸಿದ ವೈದ್ಯರು ನೋವು ಬರುವ ಚುಚ್ಚುಮದ್ದು ನೀಡಿ ಹೆರಿಗೆಗಾಗಿ ಕಾಯತೊಡಗಿದರು. ಗರ್ಭಿಣಿಗೆ ತಡೆಯಲಾರದ ನೋವು ಕಾಣಿಸಿಕೊಂಡಿತು. ಎರಡು ಮೂರು ಗಂಟೆಗಳಾದರು ಹೆರಿಗೆ ಆಗಲಿಲ್ಲ . ಅನಂತರ ತಿಳಿದು ಬಂದ ವಿಷಯವೆಂದರೆ ಮಗು ಪುಷ್ಟಿಯಾಗಿ ಬೆಳೆದಿದ್ದರ ಜೊತೆಗೆ ಗರ್ಭದಲ್ಲಿ ಮಗು ತಿರುಗು ಮರುಗಾಗಿ ಬಿಟ್ಟಿತು. ಮಗುವನ್ನು ಹೊಟ್ಟೆಯಲ್ಲಿ ನೇರವಾಗಿಸಿ ಹೆರಿಗೆ ಮಾಡಿಸುವ ಪರಿಣತಿ ಮತ್ತು ನರ್ಸಿಂಗ್ ಹೋಂನಲ್ಲಿ ಸೌಕರ್ಯಗಳಿಲ್ಲದ ಕಾರಣದಿಂದ ಕೃತಿಕಾ ಮತ್ತು ಅವಳ ಸಹಪಾಟಿ ವೈದ್ಯರು ಸಂಕಟದಲ್ಲಿ ಸಿಲುಕಿಕೊಂಡರು.

"ಮಗು ಗರ್ಭದಲ್ಲಿ ತಿರುಗಿಕೊಂಡುಬಿಟ್ಟಿದೆ. ದಯವಿಟ್ಟು ಬೇರೆ ಆಸ್ಪತ್ರೆಗೆ ಈಗಲೆ ಕರೆದುಕೊಂಡು ಹೋಗಿಬಿಡಿ. ಇಲ್ಲವೆಂದರೆ ತಾಯಿ ಮತ್ತು ಮಗುವಿನ ಪ್ರಾಣಕ್ಕೆ ಅಪಾಯ" ಎಂದು ಗರ್ಭಿಣಿಯ ಕುಟುಂಬದವರಿಗೆ ತಿಳಿಸಿದರು. ಕೆಂಡಮಂಡಲವಾದ ಗರ್ಭಿಣಿ ಮನೆಯವರು ಕೃತಿಕಾ ಮತ್ತು ಅವಳ ಸಹಪಾಟಿಯನ್ನು ತರಾಟೆಗೆ ತೆಗೆದುಕೊಂಡರು.

"ನಿಮಗೆ ಯೋಗ್ಯತೆ ಇಲ್ಲದಿದ್ದರೆ ಮೊದಲೆ ತಿಳಿಸಿಬಿಡಬೇಕಾಗಿತ್ತು. ಇಡೀ ದಿನ ನರ್ಸಿಂಗ್ ಹೋಂನಲ್ಲಿ ಇಟ್ಟುಕೊಂಡು ಎಲ್ಲವೂ ಸರಿಯಾಗಿದೆ, ಸುಗಮವಾಗಿ ನಡೆಯುತ್ತೆ ಅಂತ ತಿಳಿಸಿ, ಈಗ ಕೊನೆ ಘಳಿಗೆಯಲ್ಲಿ ಬೇರೆ ಆಸ್ಪತ್ರೆ ನೋಡಿಕೊಳ್ಳಿ ಅಂತೀರಲ್ಲ....? ಏನಾದರು ಹೆಚ್ಚು ಕಡಿಮೆಯಾದರೆ ನಿಮ್ಮ ನರ್ಸಿಂಗ್ ಹೋಂ ಇರುವುದಿಲ್ಲ" ಎಂದು ದಮಿಕಿ ಹಾಕಿದ್ದರು. ಮೊದಲಿಗೆ ಎಲ್ಲವು ಸುಗಮವಾಗಿ ನಡೆಯುತ್ತದೆಂದು ತಿಳಿಸಿ, ಅನಂತರ ಶಸ್ತ್ರಚಿಕಿತ್ಸೆ ಮಾಡಬೇಕಾಗುತ್ತದೆ ಎಂದಿದ್ದರು. ಕೊನೆಗೆ ನಮ್ಮಿಂದ ಆಗುವುದಿಲ್ಲ ಎಂದಿದ್ದರು. ಈ ನಡುವೆ ಮೊದಲಿಗೆ ಐದು ಸಾವಿರ, ಅನಂತರ ಹತ್ತು ಸಾವಿರ ಹಣವನ್ನು ಅಡ್ವಾನ್ಸ್ ಆಗಿ ತೆಗೆದುಕೊಂಡಿದ್ದರು.

ರಾತ್ರಿ ಹತ್ತುಗಂಟೆ, ಗರ್ಭಿಣಿ ಹೆಂಗಸು ತೀವ್ರ ನೋವನ್ನು ಅನುಭವಿಸುತ್ತಿದ್ದಾಳೆ. ಅವಳ ಮನೆಯವರು ಅಷ್ಟೊತ್ತಿನಲ್ಲಿ ಗರ್ಭಿಣಿ ಹೆಂಗಸನ್ನು ಯಾವ ಆಸ್ಪತ್ರೆಗೆ ತೆಗೆದುಕೊಂಡು ಹೋಗುವುದು ಎಂದು ಯೋಚಿಸುತ್ತಿದ್ದಾರೆ. ದಾರಿಯಲ್ಲಿ ಏನಾದರು ಹೆಚ್ಚು ಕಡಿಮೆಯಾದರೆ....? ಕೃತಿಕಾ ಮತ್ತು ಅವಳ ಸಹ ಪಾಟಿ ಆದಷ್ಟು ಬೇಗ ಗರ್ಭಿಣಿಯನ್ನು ನರ್ಸಿಂಗ್ ಹೋಂನಿಂದ ಹೊರಗಾಕಲು ಹಾತೊರೆಯುತ್ತಿದ್ದಾರೆ. ಗರ್ಭಿಣಿ ಹೆಂಗಸಿನ ಮನೆಯವರು, ತೆಗೆದುಕೊಂಡಿರುವ ಹಣವನ್ನೆಲ್ಲ ವಾಪಸ್‌ಕೊಡಿ ಬೇರೆ ಆಸ್ಪತ್ರೆಗೆ ಹೋಗುತ್ತೇವೆ ಇಲ್ಲವೆಂದರೆ ಪೊಲೀಸ್‌ಗೆ ದೂರು ಕೊಡುತ್ತೇವೆ ಎಂದು ಕೃತಿಕಾ ಮೇಲೆ ರೇಗಾಡುತ್ತಿದ್ದಾರೆ.

ಶಸ್ತ್ರಚಿಕಿತ್ಸೆಗೆ ತೆಗೆದುಕೊಂಡಿರುವ ಹಣವನ್ನು ಮಾತ್ರ ವಾಪಸ್ ಕೊಡುತ್ತೇವೆ ಮಿಕ್ಕಿದ್ದು ಕೊಡುವುದಕ್ಕೆ ಆಗುವುದಿಲ್ಲ ಎಂದು ಕೃತಿಕಾ ವಾದಿಸುತ್ತಿದ್ದಾಳೆ. ಗರ್ಭಿಣಿ ಮಹಿಳೆಯ ಮನೆಯವರು ಕೆಲವರು ಆಕೆಯನ್ನು ಬೇರೆ ಆಸ್ಪತ್ರೆಗೆ ತೆಗೆದುಕೊಂಡು ಹೊರಟರೆ, ಉಳಿದ ಕೆಲವರು ಕೃತಿಕಾಳನ್ನು ಚೆನ್ನಾಗಿ ತರಾಟೆಗೆ ತೆಗೆದುಕೊಳ್ಳುತ್ತಿದ್ದಾರೆ. "ಈಗೇನಿದೆ....? ತಾಯಿ ಮಗುವಿಗೆ ಏನಾದರು ಆಗಲಿ ಆಮೇಲೆ ಗೊತ್ತಾಗುತ್ತೆ.....?ನಾವ್ಯರೆಂದು" ಎಂದು ಕೆಟ್ಟ ಮಾತುಗಳಲ್ಲಿ ಬೈಯ್ಯುತ್ತಿದ್ದಾರೆ. ಅದು ಏನಾದರು ಆಗಲಿ ಸದ್ಯಕ್ಕೆ ಗರ್ಭಿಣಿ ಮಹಿಳೆಯನ್ನು ನರ್ಸಿಂಗ್ ಹೋಂನಿಂದ ಕರೆದುಕೊಂಡು ಹೋದರಲ್ಲ ಎಂದು ಕೃತಿಕಾಗೆ ತುಸು ಸಮಾಧಾನವಾಯಿತು.

ಸುಮಾರು ಅರ್ಧಗಂಟೆಯಿಂದ ದೂರದಲ್ಲಿ ನಿಂತು ನೋಡುತ್ತಿದ್ದ ಅಮರನಾಥ ತನಗೆ ಏನೂ ಗೊತ್ತೆ ಇಲ್ಲ ಎನ್ನುವಂತೆ ಮತ್ತೆ ಮನೆಗೆ ಹೋಗಿ ಮಲಗಿಬಿಟ್ಟ. ಕೃತಿಕಾ ಬೆವರು ಒರೆಸಿಕೊಳ್ಳುತ್ತ ದೇವರೆ ತಾಯಿ ಮಗುವಿಗೆ ಏನೂ ತೊಂದರೆ ನಡೆಯಬಾರದು ಎಂದು ಬೇಡಿಕೊಳ್ಳುತ್ತ, ಬೆಳಗಿನ ಜಾವ ಮೂರು ಗಂಟೆಗೆ ಹೋಗಿ ಅಮರನಾಥನ ಪಕ್ಕದಲ್ಲಿ ಮಲಗಿಕೊಂಡಳು. ಅಮರನಾಥ ನಿದ್ದೆ ಮಾಡುತ್ತಿಲ್ಲ ಎನ್ನುವುದು ಅವಳಿಗೆ ಅರ್ಥವಾಗಿತ್ತು. ಇಬ್ಬರು ಉಳಿದ ರಾತ್ರಿ ಯಾವ ಮಾತುಗಳಿಲ್ಲದೆ ಕಣ್ಣುಮುಚ್ಚಿ ಮಲಗಿಕೊಂಡರು.

ಗರ್ಭಿಣಿ ಹೆಂಗಸನ್ನು ನರ್ಸಿಂಗ್ ಹೋಂನಿಂದ ಸರಕಾರಿ ಆಸ್ಪತ್ರೆಗೆ ರಾತ್ರೋರಾತ್ರಿ ಬದಲಾಯಿಸಿದ್ದರು. ಸರ್ಕಾರಿ ಆಸ್ಪತ್ರೆಯಲ್ಲಿ ಮಹಿಳಾ ವೈದ್ಯರು ವಿಷಯ ತಿಳಿದುಕೊಂಡು ಒಂದೆರಡು ಚುಚ್ಚುಮದ್ದುಗಳನ್ನು ನೀಡಿ ಗರ್ಭದಲ್ಲಿ ತಿರುಗುಮರುಗಾಗಿದ್ದ ಶಿಶುವನ್ನು ಸುಸೂತ್ರವಾಗಿ ತಾಯಿಯ ಗರ್ಭದಿಂದ ಶಸ್ತ್ರಚಿಕಿತ್ಸೆ ಇಲ್ಲದೆ ಬೇರ್ಪಡಿಸಿದ್ದರು.

ಎಲ್ಲವು ಸುಸೂತ್ರವಾಗಿ ನಡೆದ ಮೇಲೆ ಬೆಳಗ್ಗೆ ಮತ್ತೆ ನರ್ಸಿಂಗ್ ಹೋಂಗೆ ಬಂದ ಜನರು ''ಯಾರೊ ಒಳ್ಳೆಯವರ ಮುಖ ನೋಡಿದ್ದಿರಿ ನೆನ್ನೆ. ತಾಯಿ ಮಗುವಿಗೆ ಏನಾದರು ಹೆಚ್ಚು ಕಡಿಮೆಯಾಗಿದ್ದರೆ ಇಷ್ಟೊತ್ತಿಗೆ ನೀವು ಇರ್‍ತಾ ಇರಲಿಲ್ಲ. ನಿಮ್ಮ ನರ್ಸಿಂಗ್ ಹೋಂ ಇರ್‍ತಾ ಇರಲಿಲ್ಲ. ಯೋಗ್ಯತೆ ಇಲ್ಲದೆ ಇದ್ದರೆ ಯಾಕ್ರಿ ನರ್ಸಿಂಗ್ ಹೋಂ ಇಟ್ಟುಕೊಂಡಿದ್ದೀರಿ....? ಹೋಗಿ ಒಂದು ಮಟನ್ ಸ್ಟಾಲ್ ಇಟ್ಟುಕೋಳ್ಳಿ'' ಹೀಗೆ ಯದ್ವಾತದ್ವಾ ಬೈಯ್ದು ಹೊರಟುಹೋದರು. ರಾತ್ರಿ ಮತ್ತು ಬೆಳಗ್ಗೆ ಇಷ್ಟೆಲ್ಲ ಗಲಾಟೆಗಳಾದರು ಅಮರನಾಥ ಒಂದು ಮಾತೂ ಆಡದೆ ಹೋಗಿದ್ದಕ್ಕೆ ಕೃತಿಕಾಗೆ ಅಮರನಾಥನ ಮೇಲೆ ಆಗಾಧ ಕೋಪಬಂದಿತ್ತು.

ಗಂಡನಾದವನು, ತನ್ನ ಎದುರಗೆ ತನ್ನ ಪತ್ನಿಗೆ ಇಷ್ಟೆಲ್ಲ ಅಪಮಾನವಾಗುತ್ತಿದ್ದರು ಒಂದೂ ಮಾತು ಆಡಲಿಲ್ಲವಲ್ಲ....? ಅವಳಿಗೆ ಏನು ಮಾಡಬೇಕೊ ಒಂದು ಅರ್ಥವಾಗಲಿಲ್ಲ. ಅವಳನ್ನು ಜನರು ಬೈಯ್ದು ಆ ಕಡೆಗೆ ಹೋಗುತ್ತಿದ್ದಂತೆ ದುಃಖ, ಅಪಮಾನದಿಂದ ತುಂಬಿಹೋದ ಕೃತಿಕಾ ನೇರವಾಗಿ ಅಮರನಾಥನ ಹತ್ತಿರಕ್ಕೆ ಹೋಗಿ ಅವನ ಬಟ್ಟೆಗಳನ್ನೆಲ್ಲ ಸಿಗುಳಿ, ಎಳೆದಾಡುತ್ತ ಬಾಯಿಗೆ ಬಂದಿದ್ದನ್ನೆಲ್ಲ ಕಿರುಚಾಡಿದಳು.

''ನೀನೊಬ್ಬ ದ್ರೋಹಿ....., ನಯವಂಚಕ, ಕೆಲಸಕ್ಕೆ ಬಾರದವನು. ನಿನ್ನನ್ನ ಪ್ರೀತಿಸಿ ಮದುವೆ ಆಗಿದ್ದಕ್ಕೆ ನನಗೆ ಸರಿಯಾಗಿ ಪಾಠಕಲಿಸಿದೆ. ಪಾಠ ಕಲಿಯುವುದಕ್ಕೆ ಇನ್ನು ಏನಿದೆ.....? ನನ್ನ ಜೀವನಾನೆ ನರಕ ಆಗಿಬಿಟ್ಟಿತು. ನಂಬಿಸಿ ದ್ರೋಹಮಾಡಿದೆ.

ನೀನು ನನ್ನ ಗಂಡ ಆಗೊದಕ್ಕೆ ಲಾಯಕ್ಕು ಇಲ್ಲದವನು.'' ಹೀಗೆ ಬಾಯಿಗೆ ಬಂದದ್ದನ್ನೆಲ್ಲ ಬೈಯ್ಯುತ್ತಿದ್ದಳು. ಅಮರನಾಥ ಏನೂ ಮಾತನಾಡದೆ ಹಾಗೆ ಕುಳಿತಿದ್ದ. ಕೃತಿಕಾ ಇನ್ನಷ್ಟು ಮತ್ತಷ್ಟು ರೊಚ್ಚಿಗೇಳುತ್ತಿದ್ದಳು.

ಕೊನೆಯದಾಗಿ ಎದ್ದುನಿಂತ ಅಮರನಾಥ ಅವಳ ಕೆನ್ನೆಗೆ ಬಲವಾಗಿ ಬಾರಿಸಿಬಿಟ್ಟ. ಕೃತಿಕಾ ಅವನ ಒರಟು ಕೈ ಹೊಡೆತಕ್ಕೆ ಒಮ್ಮೆಲೆ ಹಕ್ಕಿಯಂತೆ ಕುಸಿದು ಕುಳಿತು ಮಾತುಗಳನ್ನು ಕಳೆದುಕೊಂಡುಬಿಟ್ಟಳು. ಅಮರನಾಥ ಮಹಡಿ ಮನೆಯಿಂದ ಬಿರುಬಿರನೆ ಇಳಿಯತೊಡಗಿದ. ಮೆಟ್ಟಿಲಿಳಿಯುವಾಗ ಕೃತಿಕಾ ತಂದೆ ಕೊಡಿಸಿದ್ದ ದ್ವಿಚಕ್ರವಾಹನ ಎದುರಿಗೆ ಇರುವುದನ್ನು ನೋಡಿ ಕಾಲಿನಲ್ಲಿ ಅದನ್ನು ಒಮ್ಮೆ ಒದ್ದು ಅಲ್ಲಿಂದ ಇನ್ನಷ್ಟು ಜೋರಾಗಿ ತನ್ನ ತಂದೆಯ ಮನೆಯ ಕಡೆಗೆ ನಡೆಯತೊಡಗಿದ.

* * *

ಅಮರನಾಥ ಗಾಡಿಯಿಲ್ಲದೆ ಮನೆಗೆ ಬಂದಿರುವುದನ್ನು ನೋಡಿದ ಅವನ ತಾಯಿ ಯಾಕಪ್ಪ ಗಾಡಿ ಎಲ್ಲಿ....? ಏನಾಯಿತು....? ಎಂದು ಗಾಬರಿಯಿಂದ ಕೇಳಿದಳು. ಅಮರನಾಥ ಏನೂ ಮಾತನಾಡದೆ ಸುಮ್ಮನೆ ಇರುವುದನ್ನು ಗಮನಿಸಿದ ಅವನ ತಾಯಿಗೆ ಇನ್ನಷ್ಟು ಗಾಬರಿಯಾಗಿ ಅವನ ಮುಖವನ್ನೇ ನೋಡಿದಳು. ಅಮರನಾಥ ಸಪ್ಪಗೆ ಇರುವುದನ್ನು ಗಮನಿಸಿದ ಅವನ ತಾಯಿ ಎದ್ದು ಹತ್ತಿರಕ್ಕೆ ಬಂದು, ''ಏನಪ್ಪ ಅಮರನಾಥ ಏನಾಯಿತು....?'' ಎಂದು ಅವನ ಕೈಯಿಗಳನ್ನು ತಡುವುತ್ತ ಕೇಳಿದಳು. ಸುಮ್ಮನಿದ್ದರೆ ಅವನ ತಾಯಿ ಅತ್ತೆ ಬಿಡುತ್ತಾಳೆ ಎಂದುಕೊಂಡ ಅಮರನಾಥ ''ಏನೂ ಇಲ್ಲ ಬಿಡಮ್ಮ ಗಾಡೀನ ರಿಪೇರಿಗೆ ಬಿಟ್ಟುಬಂದಿದ್ದೀನಿ'' ಎಂದ. ಅವನು ಹೇಳುವ ರೀತಿಯಿಂದಲೆ ಅಮರನಾಥ ಸುಳ್ಳು ಹೇಳುತ್ತಿದ್ದಾನೆಂದು ತಿಳಿದುಕೊಂಡು ''ಇಲ್ಲ ನೀನು ಸುಳ್ಳು ಹೇಳ್ತಾ ಇದ್ದೀಯಾ....? ಏನಾಯಿತು ಹೇಳಪ್ಪ ಅಮರನಾಥ '' ಎಂದು ಗಾಬರಿಯಾಗಿ ಕೇಳತೊಡಗಿದಳು.

ಅಮರನಾಥ ನಿಧಾನವಾಗಿ ಎಲ್ಲವನ್ನು ಹೇಳಿ ಮುಗಿಸಿದ. ಈಗ ಅಮರನಾಥ ಮತ್ತು ಅವನ ತಾಯಿ ಸೂಜಿ ಸುಚ್ಚಿಕೊಂಡು ನೆಲಕ್ಕೆ ಬಿದ್ದುಕೊಂಡ ಬೆಲೂನುಗಳಂತೆ ಮುಖಗಳನ್ನು ಇಟ್ಟುಕೊಂಡು ಕುಳಿತಿದ್ದರು. ಸ್ವಲ್ಪ ಹೊತ್ತು ಸುಧಾರಿಸಿಕೊಂಡ ಅಮರನಾಥನ ತಾಯಿ ''ನೀನು ಮಾಡಿದ್ದು ಸರಿಯಲ್ಲ ಕಣೊ.... ನಿನ್ನ ಎದುರಿಗೇನೆ ಬೇರೆಯವರು ಅವಳ್ನ ಬೈಯ್ತಾ ಇದ್ದರೆ ನಿನ್ಯಾಗೆ ಸುಮ್ಮನೆ ಇದ್ದೆ....? ನೀನು ಸುಮ್ಮನೆ ಇದ್ದಿದ್ದಕ್ಕೆ ಅವಳಿಗೆ ಕೋಪ ಬಂದಿರಬೇಕು. ಹೆಂಡತಿ ಗಂಡನ್ನ , ಗಂಡ ಹೆಂಡತೀನ ಬೈಯ್ದೆ ಇದ್ದರೆ ಇನ್ಯಾರು ಬೈಯ್ತಾರೆ....? ನಾನು ನಿಮ್ಮಪ್ಪ ಜಗಳ ಆಡುವುದಿಲ್ಲವೆ....?

ನಾನು ಬೈಯ್ದರೆ ನಿಮ್ಮಪ್ಪ ಮನೆಬಿಟ್ಟು ಹೋಗಿಬಿಡ್ತಾರಾ....? ಇಲ್ಲ ಅವರು ನನ್ನನ್ನ ಒಂದೇಟು ಹೊಡೆದರೆ ನಾನು ಮನೆಬಿಟ್ಟು ಹೋಗಿಬಿಡ್ತೀನಾ....? ಅದೆಲ್ಲಾ ಸಹಜ. ನೀನು ಹೋಗಿ ಅವಳ್ನ ಸಮಾಧಾನ ಮಾಡು'' ಅಮರನಾಥನ ತಾಯಿ ಅವನಿಗೆ ತಿಳಿ ಹೇಳಿದಳು.

ಅಮರನಾಥ ''ಅವಳಿಗೆ ಹಣದ ವ್ಯಾಮೋಹ ಬಿಡಮ್ಮ. ತಾನು, ತನ್ನಪ್ಪ ಹಣವಂತರು ಅಂತ ಅಹಂಕಾರ. ನಾನು, ಅವಳ ಜೊತೆ ಅವಳ ಮನೆಯಲ್ಲಿ ಇರೊದಕ್ಕೆ ಸಾಧ್ಯಯಿಲ್ಲ ಬಿಡಮ್ಮ. ಅವಳೆ ಇಲ್ಲಿಗೆ ಬಂದರೆ ಬರ್ಲಿ. ಇಲ್ಲ ಅಂದರೆ ಹೋಗ್ಲಿ ಬಿಡಮ್ಮ'' ಅಮರನಾಥನ ಮಾತುಗಳಿಗೆ ಗಾಬರಿಗೊಂಡ ಅವನ ತಾಯಿ, ''ಲೋ.... ಅಮರನಾಥ ಹಾಗೆಲ್ಲ ಮಾತನಾಡಬೇಡ, ಬಿಡ್ತು ಅನ್ನು. ಅವಳು ನರ್ಸಿಂಗ್ ಹೋಂ ಬಿಟ್ಟುಬಂದು ಇಲ್ಲಿ ಇರೊದಕ್ಕ ಅದೆಲ್ಲಾ ಮಾಡಿದ್ದು....'' ಎನ್ನುತ್ತಿದ್ದಂತೆ ಅಮರನಾಥ ''ಮ್ಹೊ ಅಮ್ಮ ನಿನಗೆ ಗೊತ್ತಿಲ್ಲ ಸುಮ್ಮನೆ ಇರಮ್ಮ'' ಎಂದ. ಅಮರನಾಥನ ತಾಯಿ ಪೆಚ್ಚುಮೋರೆ ಹಾಕಿಕೊಂಡು ಅವನನ್ನೇ ನೋಡಿದಳು. ಮದುವೆಯಾಗಿ ಸರಿಯಾಗಿ ಒಂದು ವರ್ಷ ಆಗಿಲ್ಲ . ಹಾಗ್ಲೇನೆ ಇಬ್ಬರು ಬೇರೆ ಬೇರೆ ಆಗಿಬಿಟ್ಟರೆ ಹೇಗೆ....? ಎನ್ನುವ ಯೋಚನೆ ಅವಳನ್ನು ಕಾಡತೊಡಗಿತು. ಅಮರನಾಥನ ತಾಯಿ ಎಷ್ಟೇ ಬೇಡಿಕೊಂಡರು ಅವನು ಊಟ ಮಾಡದೆ ಹಾಗೆ ಮಲಗಿಕೊಂಡುಬಿಟ್ಟ.

ಜೀವನದಲ್ಲಿ ಮೊದಲಬಾರಿಗೆ ಕೆನ್ನೆಗೆ ಏಟು ತಿಂದಿದ್ದ ಕೃತಿಕಾ ತನ್ನ ಕೆನ್ನೆಯ ಮೇಲೆ ಕೈ ಇಟ್ಟುಕೊಂಡು ಕಣ್ಣೀರು ಸುರಿಸುತ್ತಿದ್ದಳು. ಎಲ್ಲಕ್ಕಿಂತ ದುಃಖವಾದ ಸಂಗತಿ ಎಂದರೆ ಅವಳನ್ನು ಸಮಾಧಾನ ಪಡಿಸಲು ಮನೆಯಲ್ಲಿ ಯಾರೂ ಇಲ್ಲದೆ ಇರುವುದು. ಒಬ್ಬಳೆ ದುಃಖಿಸಿ ದುಃಖಿಸಿ ಅಳುತ್ತಾ ಕೆನ್ನೆಯನ್ನು ಮುಟ್ಟಿಮುಟ್ಟಿ ನೋಡಿಕೊಳ್ಳುತ್ತಿದ್ದಳು. ಅಮರನಾಥನನ್ನು ಕಾಲೇಜಿನಲ್ಲಿ ಮೊದಲು ನೋಡಿದಾಗಿನಿಂದ ಇಂದಿನವರೆಗೆ ನಡೆದ ಎಲ್ಲಾ ಘಟನೆಗಳು ಒಂದೊಂದಾಗಿ ಅವಳ ಕಣ್ಣುಗಳ ಮುಂದೆ ಹಾದುಹೋಗುತ್ತಿವೆ. ಅನಂತರ ತನ್ನ ತಾಯಿ ತಂದೆಯನ್ನು ನೆನೆದುಕೊಂಡಳು. ಅವರಿಗಾದರು ಫೋನ್ ಮಾಡಿ ಎಲ್ಲವನ್ನು ಹೇಳಿ ದುಃಖವನ್ನು ಮರೆಯೋಣ ಎನ್ನುವ ಯೋಚನೆ ಬಂದರು ಅವಳು ತನ್ನ ತಂದೆ ತಾಯಿಗೆ ಫೋನ್ ಮಾಡದೆ ಹೋದಳು. ಈಗ ಅವಳಿಗೆ ಇದ್ದ ಒಂದೇ ದಾರಿ ಎಂದರೆ ತಾನು ಇನ್ನಷ್ಟು ಅತ್ತು ಸಮಾಧಾನ ಮಾಡಿಕೊಳ್ಳುವುದು.

ಅಮರನಾಥ ಮತ್ತು ಕೃತಿಕಾ ಇಬ್ಬರೂ ಬೆಂಗಳೂರಿನ ಎರಡು ಮೂಲೆಗಳಲ್ಲಿ ಕುಳಿತು ಬೇರೆ ಬೇರೆ ರೀತಿಯಾಗಿ ಯೋಚಿಸುತ್ತಿದ್ದರು. ಅಮರನಾಥ, ಅವಳೆ ಬಂದು ನನ್ನದು ತಪ್ಪಾಯಿತು ಎಂದು ಕೇಳಿಕೊಳ್ಳಲಿ ಎಂದು ಯೋಚಿಸಿದರೆ, ಕೃತಿಕಾ ಕೂಡ ಅವನೆ ಬಂದು ತಪ್ಪಾಯಿತು ಎಂದು ಕೇಳಿಕೊಳ್ಳಲಿ ಎಂದು ಯೋಚಿಸುತ್ತಿದ್ದಳು. ಅವಳೆ

ಬಂದು ತಪ್ಪಾಯಿತು ಎಂದು ಬೇಡಿಕೊಂಡರು ಅವಳ ಮನೆಯ ಒಳಗೆ ಹೆಜ್ಜೆ ಹಾಕಬಾರದು. ಏನಿದ್ದರು ಅವಳು ಇಲ್ಲಿಗೆ ಬಂದು ನನ್ನ ಜೊತೆಯಲ್ಲಿದ್ದರೆ ಸರಿ. ಅವಳ ಮನೆಯ ಕಡೆಗೆ ಯಾವುದೇ ಕಾರಣಕ್ಕೂ ಹೋಗಲೆಬಾರದು ಎಂದು ಅಮರನಾಥ ತೀರ್ಮಾನಿಸಿಬಿಟ್ಟಿದ್ದ. ಕೃತಿಕಾ, ನಾನು ಮಾಡಿದ ತಪ್ಪಾದರು ಏನು....? ಕೋಪ ಬಂದಾಗ ನನ್ನ ಗಂಡನ ಬಟ್ಟೆ ಹರಿದದ್ದು ತಪ್ಪೆ....? ಕೋಪದಲ್ಲಿ ಗಂಡನ್ನು ಬೈಯ್ಯುವುದು ತಪ್ಪೆ....? ಇನ್ನು ಯಾರನ್ನು ಬೈಯ್ಯುವುದು.....? ನನ್ನದೆ ತಪ್ಪಾಯಿತು ಎಂದು ಅಮರನಾಥ ಇಲ್ಲಗೆ ಬರಲಿ ಅಲ್ಲಿಯವರೆಗೂ ನಾನು ಎಲ್ಲಿಗೂ ಹೋಗುವುದಿಲ್ಲ ಎಂದು ಕೃತಿಕಾ ತೀರ್ಮಾರ್ನನಿಸಿಬಿಟ್ಟಿದ್ದಳು.

* * *

ಮಾನವ ಮೌಲ್ಯಗಳ ನಡುವೆ ಹಣ ಬಹುದೊಡ್ಡ ಶತ್ರು. ಹಣ, ಐಶ್ವರ್ಯ ಮನುಷ್ಯರ ಸಂಬಂಧಗಳನ್ನು ದುರ್ಬಲಗೊಳಿಸಿದ್ದೆ ಹೆಚ್ಚು. ಈ ಎರಡೂ ಮನುಷ್ಯನನ್ನು ಅಹಂಕಾರದ ಕೂಪಕ್ಕೆ ತಳ್ಳಿಬಿಡುತ್ತವೆ. ಅಮರನಾಥ, ತಾನು ಬೆಂಗಳೂರಿನಲ್ಲಿದ್ದರೆ ನನ್ನ ತಲೆ ಕೆಟ್ಟುಹೋಗುತ್ತದೆ. ಮತ್ತೆ ಮತ್ತೆ ಕೃತಿಕಾಳ ಜೊತೆಗೆ ಜಗಳವಾಡಬೇಕಾಗುತ್ತದೆ. ತಾನು ಬೆಂಗಳೂರು ಬಿಡುವುದರ ಬಗ್ಗೆ ಗಂಭೀರವಾಗಿ ಯೋಚಿಸತೊಡಗಿದ. ಈ ಯೋಚನೆ ಇಂದಿನದಲ್ಲ. ಅವನು ವೈದ್ಯಕೀಯಕ್ಕೆ ಸೇರಿದಾಗಿನಿಂದ ಅವನ ತಲೆಯಲ್ಲಿ ಈ ರೀತಿಯ ಯೋಚನೆ ಸಣ್ಣಗೆ ಕೊರೆಯುತ್ತಿತ್ತು. ಅದು ವೈದ್ಯಕೀಯ ಡಿಗ್ರಿಯನ್ನು ಮುಗಿಸುವುದರೊಳಗೆ ಹೆಮ್ಮರವಾಗಿ ಬೆಳೆದುನಿಂತಿತ್ತು. ಆದರೆ ಇದರ ನಡುವೆ ಕೃತಿಕಾ ಜೊತೆಗೆ ಪ್ರೀತಿ ಅಂಕುರಿಸಿ ಮದುವೆಯೂ ನಡೆದುಹೋಗಿತ್ತು. ಅಮರನಾಥ ಎರಡು ಮೂರು ದಿನಗಳು ತನ್ನ ತಂದೆ ತಾಯಿಯನ್ನು ಕಾಡಿ ಬೇಡಿ ಅವರನ್ನು ಒಪ್ಪಿಸಿ ಮನೆ ಬಿಟ್ಟು ಹಳ್ಳಿಗಳ ಕಡೆಗೆ ಹೊರಟು ಹೋಗಿದ್ದ. ಹೋಗುವ ಮುಂಚೆ ಒಂದು ಸಣ್ಣದಾದ ಪತ್ರವನ್ನು ಬರೆದು ಕೃತಿಕಾಗೆ ತಲುಪಿಸಿದ್ದ. ಆ ಪತ್ರದಲ್ಲಿ ಹೀಗೆ ಬರೆಯಲಾಗಿತ್ತು.

-ನನ್ನ ಪ್ರೀತಿಯ ಕೃತಿ,

ನಮ್ಮ ನಡುವೆ ಹೆಬ್ಬಂಡೆಯಾಗಿ ಬೆಳೆದು ನಿಂತಿರುವ ಐಶ್ವರ್ಯ ನಮ್ಮಿಬ್ಬರನ್ನು ಸಂತೋಷವಾಗಿರಲು ಬಿಡುವುದಿಲ್ಲ. ಮಾನವ ಸೇವೆಯೆ ಮಾದವ ಸೇವೆ. ಅಂತಹ ಒಂದು ಕೆಲಸವನ್ನು ನಾವಿಬ್ಬರು ಸೇರಿ ಮಾಡಬಹುದಾಗಿದೆ. ಪ್ರೀತಿ, ಸ್ನೇಹ, ನಂಬಿಕೆಗಳು ಇನ್ನು ಸ್ವಲ್ಪ ಮಟ್ಟಿಗೆ ಉಳಿದಿರುವ ನಮ್ಮ ಹಳ್ಳಿಗಳ ಕಡೆಗೆ ನಾನು ಹೊರಟಿದ್ದೇನೆ. ನನ್ನ ಬದುಕಿನ ಮಹತ್ವಕಾಂಕ್ಷೆಯ ಈ ಕೆಲಸದಲ್ಲಿ ನೀನು ಕೈ ಜೋಡಿಸುವುದಾದರೆ ನಿನಗೆ ನನ್ನ ಆಧರದ ಸ್ವಾಗತ ಇದ್ದೆ ಇದೆ. ಮನುಷ್ಯನಿಗೆ ಊಟ,

ಬಟ್ಟೆ , ಜಾಸ್ತಿಯೆಂದರೆ ಒಂದು ಪುಟ್ಟ ಮನೆ ಬೇಕು. ಅದಕ್ಕಿಂತ ಮುಖ್ಯವಾಗಿ ಮನುಷ್ಯನಿಗೆ ತಾನು ಮಾಡುವ ಕೆಲಸದಲ್ಲಿ ನೆಮ್ಮದಿ, ಸಂತೋಷ ದೊರಕಬೇಕು. ಎಂದಾದರು ಒಂದು ದಿನ ನನ್ನ ಮಾತುಗಳನ್ನು ಅರ್ಥಮಾಡಿಕೊಂಡು ನನ್ನ ಜೊತೆಗೆ ಕೈ ಜೋಡಿಸುತ್ತೀಯ ಎನ್ನುವ ನಂಬಿಕೆಯೊಂದಿಗೆ ಈ ಪತ್ರವನ್ನು ಬರೆದಿದ್ದೇನೆ. ನಿನ್ನಲ್ಲಿ ಕ್ಷಮೆ ಕೋರುತ್ತ ನಿನಗಾಗಿ ಎದುರುನೋಡುವ "-ನಿನ್ನ ಅಮರನಾಥ.

ಪತ್ರವನ್ನು ಓದುತ್ತಿದ್ದಂತೆ ಕೃತಿಕಾಗೆ ತನ್ನ ದೇಹ ತಣ್ಣನೆಯ ಐಸ್‌ಗಡ್ಡೆಯಾಗತೊಡಗಿತು. ಕೃತಿಕಾಳ ತಂದೆ ತಾಯಿಗೆ ವಿಷಯ ತಿಳಿದು ಗುಂಟೂರಿನಿಂದ ಬೆಂಗಳೂರಿಗೆ ಧಾವಿಸಿ ಬಂದಿದ್ದರು. ಅಮರನಾಥನ ತಂದೆ ತಾಯಿ ನಡೆದ ವಿಷಯವನ್ನೆಲ್ಲ ಅವರಿಗೆ ತಿಳಿಸಿದರು. ಆದರೆ ವಿಷಯ ಆಗಲೆ ಕೈಮೀರಿಹೋಗಿತ್ತು. ಈಗ ಅಮರನಾಥ ಎಲ್ಲಿರುತ್ತಾನೆ....? ಎಂಬ ಪ್ರಶ್ನೆಗೆ ಉತ್ತರ ಅವನ ತಂದೆ ತಾಯಿಗೂ ಗೊತ್ತಿರಲಿಲ್ಲ. ಅಮರನಾಥನನ್ನು ಹುಡುಕಿ ಹಿಂದಕ್ಕೆ ಕರೆದು ತರಬೇಕೆ....? ಇಲ್ಲ ಕೃತಿಕಾ ಅವನ್ನು ಹುಡುಕಿಕೊಂಡು ಹೊರಡಬೇಕೆ.....? ಎನ್ನುವ ಪ್ರಶ್ನೆಗಳು ಎಲ್ಲರನ್ನು ಕಾಡತೊಡಗಿದವು.

ಕೃತಿಕಾಳನ್ನು ಮಗುವಿನಿಂದಲೂ ಹೂವುಗಳಲ್ಲಿ ಇಟ್ಟು ಸಾಕಿರುವ ಅವಳ ಪೋಷಕರಿಗೆ ಇದೊಂದು ಶಾಕ್ ಹಾಗಿ ಪರಿಣಮಿಸಿತ್ತು. ಮದುವೆ ನಡೆದು ಸರಿಯಾಗಿ ಒಂದು ವರ್ಷವು ಕಳೆದಿಲ್ಲ. ಆಗಲೆ ಇಬ್ಬರೂ ಉತ್ತರ ಮತ್ತು ದಕ್ಷಿಣ ಧ್ರುವಗಳಂತೆ ದೂರವಾಗಿಬಿಟ್ಟರಲ್ಲ ಎನ್ನುವ ನೋವು ಅವರನ್ನು ಕಾಡತೊಡಗಿತು. ಈಗ ಏನು ಮಾಡುವುದು....? ಇಷ್ಟು ದಿನಗಳು ಕೃತಿಕಾಗೆ ಯಾವ ನೋವು ತೊಂದರೆಯನ್ನು ನೀಡದ ಅವಳ ತಂದೆ ತಾಯಿ, ಕೃತಿಕಾಳನ್ನು ಶ್ರೀರಾಮನ ಹಿಂದೆ ಕಾಡಿಗೆ ವನವಾಸ ಹೋದ ಸೀತೆಯಂತೆ ಹಿಂದೆಯೆ ಹೋಗು ಎನ್ನಬೇಕೆ.....? ಹಾಗೆ ಹೇಳಿದರೆ ಅವಳು ಹೋಗುತ್ತಾಳೆಯೆ....? ಕರೆದರೆ ಅಮರನಾಥ ಹಿಂದಕ್ಕೆ ಬರುತ್ತಾನೆಯೆ.....? ಹೀಗೆ ಎರಡು ಕುಟುಂಬಗಳು ಗಾಢವಾದ ಯೋಚನೆಗಳಲ್ಲಿ ಸಿಲುಕಿಕೊಂಡುಬಿಟ್ಟವು. ನೀವು ಅಮರನಾಥನನ್ನು ಹೇಗಾದರು ಮಾಡಿ ತಡೆದಿರಬೇಕಿತ್ತು , ಎಂದು ಅಮರನಾಥನ ತಂದೆ ತಾಯಿಗೆ ಕೃತಿಕಾಳ ತಂದೆ ತಾಯಿ ಹೇಳಿದರು. ಆದರೆ ಅವರಲ್ಲಿ ಆ ಪ್ರಶ್ನೆಗೆ ಉತ್ತರವಿರಲಿಲ್ಲ.

ಕೃತಿಕಾಗೆ ಏನು ಹೇಳಿ ಸಮಾಧಾನ ಮಾಡಬೇಕೊ ಯಾರಿಗೂ ಗೊತ್ತಾಗಲಿಲ್ಲ. ಕೃತಿಕಾ ತನ್ನ ಜೀವನದಲ್ಲಿ ಪ್ರಥಮ ಬಾರಿಗೆ ಎಲ್ಲವನ್ನು ಕಳೆದುಕೊಂಡಂತೆ ನಿರುತ್ಸಾಹಿಯಾಗಿ, ಫೇಲವವಾಗಿ ಭೂಮಿಗೆ ಇಳಿದುಹೋಗಿದ್ದಳು. ಅವಳ

ಮುಖವನ್ನು ನೋಡಲು ಯಾರಿಂದಲೂ ಆಗಲಿಲ್ಲ. ಅವಳಿಗೂ ಏನು ಮಾಡಬೇಕೊ ಅರ್ಥವಾಗಲಿಲ್ಲ.

* * *

ಅಮರನಾಥ ಒಂದು ಬ್ಯಾಗನ್ನು ಭುಜಕ್ಕೆ ನೇತಾಕಿಕೊಂಡು ನೇರವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿಗಳ ಕಛೇರಿ ತಲುಪಿದ. ಅವನ ಬ್ಯಾಗಿನಲ್ಲಿ ಅವನ ಬಟ್ಟೆಗಳು, ಜೊತೆಗೆ ಡಿಗ್ರಿ ಸರ್ಟಿಫಿಕೆಟ್ ಮತ್ತು ಸ್ಟ್ಯಾತಾಸ್ಕೋಪ್ ಮಾತ್ರ ಇದ್ದವು. ಜಿಲ್ಲಾಧಿಕಾರಿಗಳು ಆ ದಿನ ಕಛೇರಿಯಲ್ಲಿ ಉಪಸ್ಥಿತರಿಲ್ಲ ಎಂದು ತಿಳಿದ ಮೇಲೆ ಅಸಿಸ್ಟೆಂಟ್ ಕಮೀಷನರ್ ಅವರನ್ನು ಸಂಧಿಸಲು ಹೊರಟ. ತನ್ನ ಹೆಸರನ್ನು ಒಂದು ಚೀಟಿಯಲ್ಲಿ ಬರೆದು ಜವಾನನ ಮೂಲಕ ಕೊಟ್ಟು ಕಳುಹಿಸಿದ. ಅಸಿಸ್ಟೆಂಟ್ ಕಮೀಷನರ್ ಅವರು ಡಾ॥ ಅಮರನಾಥ್ ಹೆಸರನ್ನು ಓದಿದ್ದೆ ಒಳಗೆ ಬರಮಾಡಿಕೊಂಡರು.

ಅಮರನಾಥ ಒಳಗೆ ಹೋಗಿದ್ದೆ "ಡಾ॥ಅಮರನಾಥ....?" ಎನ್ನುತ್ತ ಅಮರನಾಥನ ಮುಖವನ್ನು ದಿಟ್ಟಿಸಿ ನೋಡಿದರು. ಅಮರನಾಥನು ಅಧಿಕಾರಿಯನ್ನು ನೋಡಿದ. ಅಧಿಕಾರಿ "ಅರೆ ಲೋ....ಅಮರನಾಥ....?" ಎನ್ನುತ್ತಿದ್ದಂತೆ, ಅಮರನಾಥನು "ಏನು ಗುರು...?" ಎಂದು ಅಧಿಕಾರಿ ಅಮರನಾಥನ ಕೈ ಕುಲುಕಿ ಕುರ್ಚಿಗೆ ಆಹ್ವಾನಿಸಿದರು. "ನಿಮ್ಮ ಕ್ಯಾಂಪಸ್‌ನಲ್ಲಿ ನೋಡಿದ್ದು. ಅನಂತರ ನೋಡೆ ಇಲ್ಲ. ಮೂರು ವರ್ಷ ಆಯಿತು ಗುರು" ಅಮರನಾಥ ಹೇಳಿದ. "ಹೌದು ಈಗ ಎಲ್ಲಿದ್ದೀಯಾ....?" "ಎಲ್ಲೂ ಇಲ್ಲ. ಎಲ್ಲಾದರು ಇರೋಣ ಅಂತಾನೆ ಇಲ್ಲಿಗೆ ಬಂದಿದ್ದು. ಒಳ್ಳೆದಾಯಿತು ನೀನು ಸಿಕ್ಕಿದ್ದು. ಯಾವುದಾದರು ತುಂಬಾ ಹಿಂದುಳಿದ ಪ್ರದೇಶಕ್ಕೋಗಿ ಜನರ ಸೇವೆ ಮಾಡೋಣ ಅಂತ ತೀರ್ಮಾನಿಸಿದ್ದೀನಿ. ನನಗೆ ಇರೊದಕ್ಕೆ ಒಂದು ಸ್ಥಳ ಬೇಕು ಅಷ್ಟೆ. ಸರ್ಕಾರದ ಕೆಲಸಾನು ಬೇಡ, ಸಂಬಳಾನು ಬೇಡ. ಸಾಧ್ಯ ಆದರೆ ನಿಮ್ಮ ಕಡೆಯಿಂದ ಒಂದಷ್ಟು ಸಹಾಯಬೇಕು" "ಯಾವ ರೀತಿ ಸಹಾಯ....?" ಅಧಿಕಾರಿ ಪ್ರಶ್ನಿಸಿದರು. "ನಾನು ಇರೊದಕ್ಕೆ ಒಂದು ಸ್ಥಳ ಸೂಚಿಸಿ. ಆದರೆ ಅತಿಥಿಗೃಹ, ವಿಶ್ರಾಮಗೃಹ ಬೇಡ. ಸಾರ್ವಜನಿಕ ಸಂಘಟನೆಗಳು ಅಥವಾ ಸರಕಾರದ ಮೂಲಕ ಔಷಧಿಗಳು ಸಿಕ್ಕಿದರೆ ಅದನ್ನ ನಾನು ಜನರಿಗೆ ಕೊಡಬಹುದು" ಅಮರನಾಥ ಹೇಳಿದ. ಅಧಿಕಾರಿ ಮುಖವನ್ನು ಪ್ರಶ್ನಾರ್ಥಕವಾಗಿ ಮಾಡಿಕೊಂಡು ಅಮರನಾಥನ ಮಾತುಗಳನ್ನೇ ಕೇಳುತ್ತಿದ್ದರು.

"ಮದುವೆ ಆಯಿತಾ ಇಲ್ಲವಾ...?" ಅಧಿಕಾರಿ ಪ್ರಶ್ನಿಸಿದರು. ಅಮರನಾಥ ಸ್ವಲ್ಪ

ಗಂಭೀರವಾಗಿ ''ಮದುವೆ ಆಗಿದೆ. ಅವಳೂ ವೈದ್ಯೆ. ನಾನು ಸ್ವಲ್ಪ ಸೆಟಲ್ ಆದಮೇಲೆ ಅವಳೂ ಕೂಡ ನನ್ನ ಜೊತೆ ಸೇರಿಕೊಳ್ತಾಳೆ.'' ಎಂದ. ಹಾಗೆ ಹೇಳುವಾಗ ಅವನ ಮುಖ ಪ್ರಶ್ನಾರ್ಥಕವಾಗಿ ಕಾಣಿಸಿಕೊಂಡಿತು. ''ಓ ಮೇಡ್ ಫಾರ್ ಈಚ್ ಅದರ್ ಅನ್ನು. ನಿಮ್ಮಿಬ್ಬರ ಉದ್ದೇಶ ಒಂದೇ ಆದರೆ ಈ ಲೈನ್‌ನಲ್ಲಿ ನೀವು ತುಂಬಾ ಸಕ್ಸಸ್‌ಫುಲ್ ಕಪಲ್ ಆಗ್ತೀರ. ಒಳ್ಳೆ ಮಾರ್ವಲಸ್ ಕೆಲಸ ಮಾಡಬಹುದು. ನಮಗೆ ಈ ಹೊತ್ತು ಬೇಕಾಗಿರುವುದು ನಿಮ್ಮಂತವರೆ'' ಅಧಿಕಾರಿ ಹೇಳಿದ.

ಅಮರನಾಥ ಅವರ ಮಾತುಗಳಿಗೆ ಏನೂ ಹೇಳಲಾಗದೆ ಒಳಗೊಳಗೆ ಉಗುಳುನುಂಗಿದ. ''ತುಂಬಾ ಸಂತೋಷ. ನೀವಿಬ್ಬರು ಸರಕಾರಿ ಕೆಲಸದಲ್ಲಿ ಸೇರಿಕೊಂಡು ಅದೇ ಹಳ್ಳಿಗಳಲ್ಲಿ ಯಾಕೆ ಕೆಲಸ ಬಾಡಬಾರದು....?'' ''ಇಲ್ಲಾ ಗುರು, ಸರಕಾರಿ ಕೆಲಸದಲ್ಲಿ ಸೇರಿಕೊಂಡರೆ ಅದಕ್ಕೆ ತನ್ನದೇ ನೀತಿ ನಿಯಮಗಳು ಶುರುವಾಗಿಬಿಡ್ತವೆ. ಆಗ ನಾವು ಸರಕಾರ ಹೇಳಿದ ರೀತಿಯಲ್ಲಿ ಕೆಲಸ ಮಾಡಬೇಕಾಗುತ್ತೆ. ಅದು ನಮಗೆ ಇಷ್ಟ ಇಲ್ಲ. ನಮ್ಮ ಕೈಯಲ್ಲಿ ಆದ ರೀತಿಯಲ್ಲಿ ನಾವು ಸೇವೆ ಮಾಡಬೇಕು. ನಮಗೆ ಇನ್ನೊಬ್ಬರ ಕೆಳಗೆ ಕೆಲಸ ಮಾಡೊದಕ್ಕೆ ಇಷ್ಟ ಇಲ್ಲ. ನಮಗೆ ಒಂದಷ್ಟು ಸಹಾಯ ಬೇಕು ಅಷ್ಟೆ.''

''ನಿಮಗೆ ಊಟ ಬಟ್ಟೆಗಾದರು ಹಣ ಬೇಕಲ್ಲವೆ....?'' ಅಧಿಕಾರಿ ಕುತೂಹಲವಾಗಿ ಪ್ರಶ್ನಿಸಿದ. ''ನಾವು ಒಬ್ಬರಿಗೆ ಸಹಾಯ ಮಾಡಿದರೆ ಇನ್ನೊಬ್ಬರು ನಮಗೆ ಸಹಾಯ ಮಾಡ್ತಾರೆ ಅನ್ನೊ ನಂಬಿಕೆ ನಮಗಿದೆ. ಒಂದಷ್ಟು ಊಟ ಯಾರಾದರು ಹಾಕ್ತಾರೆ. ಡಿಲ್ಲಿಯಲ್ಲಿದ್ದರೆ ಡಿಲ್ಲಿಯವನಾಗಿರಬೇಕು, ಹಳ್ಳಿಯಲ್ಲಿದ್ದರೆ ಹಳ್ಳಿಯವನಾಗಿರಬೇಕು'' ಅಮರನಾಥ ಹೇಳಿದ.

''ಓಕೆ ಈಗ ನೀವು ಯಾವ ಪ್ರದೇಶಾನ ಆಯ್ಕೆ ಮಾಡಿಕೊಳ್ತೀರಾ....?'' ಎದ್ದುನಿಂತ ಅಧಿಕಾರಿ ಗೋಡೆಗೆ ನೇತಾಕಿದ್ದ ಬೆಂಗಳೂರಿನ ಗ್ರಾಮೀಣ ಜಿಲ್ಲೆಯ ನಕ್ಷೆಯ ಕಡೆಗೆ ನೋಡುತ್ತಾ ಆ ಪ್ರದೇಶಗಳಲ್ಲಿ ವಾಸಿಸುವ ಜನರ ಬಗ್ಗೆ ವಿವರಿಸತೊಡಗಿದರು. ಮುಂದಕ್ಕೆ ಸಾಗಿ ಪಕ್ಕದ ಜಿಲ್ಲೆಗಳ ಬಗ್ಗೆಯೂ ವಿವರಿಸಿದರು. ಈ ನಡುವೆ ಅಸಿಸ್ಟೆಂಟ್ ಕಮೀಷನರ್ ಅವರು ಜವಾನನ ಮೂಲಕ ಬಂದವರಿಗೆಲ್ಲ ಮೀಟಿಂಗ್‌ನಲ್ಲಿದ್ದಾರೆ ಆ ಮೇಲೆ ಬನ್ನಿ ಎಂದು ಹೇಳಿ ಕಳುಹಿಸಿದ್ದರು. ಜೊತೆಗೆ ಒಂದೆರಡು ಸಲ ಚಹಾ ಕಾಫಿ ನಡೆದಿತ್ತು. ಅಂತಿಮವಾಗಿ ಅಸಿಸ್ಟೆಂಟ್ ಕಮೀಷನರ್ ಅವರು ಒಂದು ಪತ್ರವನ್ನು ತಯಾರು ಮಾಡಿ ಅದರ ನಖಲುಗಳಲ್ಲಿ ಆ ಪ್ರದೇಶದಲ್ಲಿದ್ದ ಕೆಲವು ಮುಖ್ಯಸ್ಥರ ಹೆಸರಿಗೆ ಕೊಟ್ಟರು.

ಹಿಂದುಳಿದಿರುವ ಸೊಳಿಗರಿರುವ ಪ್ರದೇಶವನ್ನು ಆಯ್ಕೆ ಮಾಡಿಕೊಳ್ಳುವಂತೆ ಅಧಿಕಾರಿ ಅಮರನಾಥನಿಗೆ ಸೂಚಿಸಿದ್ದರು. ಆ ಪ್ರದೇಶದಲ್ಲಿರುವ ಒಬ್ಬ ಮುಖ್ಯಸ್ಥನ ಹೆಸರು ಹೇಳಿ ಅವರನ್ನು ಸಂದಿಸುವಂತೆ ತಿಳಿಸಿದರು. ಅನಂತರ ಕೆಲವು ಸಂಘ ಸಂಸ್ಥೆಗಳ ವಿಳಾಸಗಳನ್ನು ನೀಡಿ ಇವರನ್ನು ಸಂಧಿಸಿ ತಾನು ಕೊಟ್ಟಿರುವ ಪತ್ರವನ್ನು ಅವರಿಗೆ ತೋರಿಸುವಂತೆ ಅಥವಾ ಅವರಿಗೆ ಪತ್ರ ಬರೆಯುವಂತೆ ಮತ್ತು ತಾನೂ ಅವರಿಗೆಲ್ಲ ಪತ್ರ ಬರೆಯುವುದಾಗಿ ಬೀಳ್ಕೊಟ್ಟರು. ಮುಖ್ಯವಾಗಿ ರೆಡ್‌ಕ್ರಾಸ್ ಸಂಸ್ಥೆ. ಲಯನ್ಸ್ ಕ್ಲಬ್ ಸಂಸ್ಥೆಗಳು, ಜಿಲ್ಲೆ ಮತ್ತು ತಾಲ್ಲೂಕು ಪಂಚಾಯಿತಿಗಳ ವತಿಯಿಂದ ಔಷಧಿಗಳನ್ನು ಕೊಡಿಸುವುದಾಗಿ ಭರವಸೆ ನೀಡಿದರು.

ಅಮರನಾಥ, ಅಸಿಸ್ಟೆಂಟ್ ಕಮೀಷನರ್ ಅವರ ಕಛೇರಿಯಿಂದ ಬೀಳ್ಕೊಂಡು ನೇರವಾಗಿ ಬಸ್ ನಿಲ್ದಾಣಕ್ಕೆ ಬಂದು ಆ ಪ್ರದೇಶದ ಕಡೆಗೆ ಹೋಗುವ ಬಸ್ಸತ್ತಿ ಕುಳಿತುಬಿಟ್ಟ. ಮನೆ ಬಿಡುವ ಮುಂಚೆ, ತಾನು ಹೋದ ಮೇಲೆ ಆ ಪ್ರದೇಶನ ವಿಳಾಸ ತಿಳಿಸುವುದಾಗಿ ಮತ್ತು ತಿಂಗಳಿಗೆ ಒಂದು ಸಲ ಖಂಡಿತ ಮನೆಗೆ ಬಂದು ಹೋಗುವುದಾಗಿ ತನ್ನ ತಂದೆ ತಾಯಿಗೆ ಬರವಸೆ ನೀಡಿಬಂದಿದ್ದ. ಬಸ್ಸು, ಬೆಂಗಳೂರಿನ ದೂಳು ಮತ್ತು ಮಾಲಿನ್ಯದ ಕೂಪದಿಂದ ತಪ್ಪಿಸಿಕೊಂಡು ಸುಮಾರು ದೂರ ದಾರಿ ಸವೆದ ಮೇಲೆ ಆಹ್ಲಾದಕರವಾಗಿ ಸಾಗುತ್ತಿತ್ತು. ಎಲ್ಲಿ ನೋಡಿದರು ಹಸಿರು ತುಂಬಿಕೊಂಡಿರುವ ಗಿಡ, ಮರ, ಹೊಲ-ಗದ್ದೆ , ಬಯಲು, ಬೆಟ್ಟಗಳು, ತಣ್ಣಗೆ ಬೀಸುವ ಗಾಳಿ, ದಾರಿಯ ಎರಡು ಕಡೆ ಹಸಿರು ಚಿತ್ರಣಗಳು ಕಣ್ಣುಗಳಿಗೆ ತಂಪು ನೀಡುತ್ತಿದ್ದರು, ಅವನ ಒಳ ಮನಸ್ಸು ಅಲ್ಲೋಲ ಕಲ್ಲೋಲವಾಗಿ ಚದುರಿಹೋಗಿತ್ತು. ಕೃತಿಕಾಳಿಂದ ಬೇರ್ಪಟ್ಟು ಮೂರು ರಾತ್ರಿಗಳು, ಮೂರು ಹಗಲುಗಳು ಮುಗಿಯುತ್ತಾ ಬಂದಿದ್ದವು. ಈ ಸಾಯಂಕಾಲಕ್ಕೆ ನಾಲ್ಕನೆಯ ರಾತ್ರಿ ಪ್ರಾರಂಭವಾಗಿತ್ತು.

ಕೃತಿಕಾ ಏನು ಮಾಡುತ್ತಿರಬಹುದು....? ಊಟ ಮಾಡಿದಳೊ...., ಇಲ್ಲವೊ....? ನಾನು ಅವಳನ್ನು ಮದುವೆ ಮಾಡಿಕೊಳ್ಳುವುದಕ್ಕಿಂತ ಮುಂಚೆಯೆ ಎಲ್ಲವನ್ನು ತಿಳಿಸಿಬಿಡಬೇಕಾಗಿತ್ತು. ಹಾಗೆ ತಿಳಿಸಿದ್ದರೆ ನನ್ನನ್ನು ಮದುವೆ ಮಾಡಿಕೊಳ್ಳುತ್ತಿದ್ದಳೊ ಇಲ್ಲವೊ....? ಈಗ ಮದುವೆಯಾದ ಮೇಲೆ ಈ ರೀತಿ ಅವಳಿಗೆ ಹೇಳದೆ ಬೇರೆಯಾಗಿದ್ದು ಎಷ್ಟು ಸರಿ.....? ಅದೇನೊ ಅದೆಲ್ಲಾ ನನಗೆ ಗೊತ್ತಿಲ್ಲ... ನನಗೆ ಅನ್ನಿಸಿದ್ದನ್ನು ನಾನು ಮಾಡುತ್ತೇನೆ. ಒಂದು ಸುಖದ ದಿನದ ಹಿಂದೆ ಎರಡು ಕಷ್ಟದ ದಿನಗಳು ಇದ್ದೆ ಇರುತ್ತವೆ. ಇಂದಲ್ಲ ನಾಳೆ ಬಂದೇ ಬರುತ್ತಾಳೆ. ಬಂದು ನನ್ನ ಹಿಂದೆ ನಿಂತುಕೊಳ್ಳುತ್ತಾಳೆ.

"ಸಾರಿ ಕೃತಿ" ಅವನಿಗೆ ಗೊತ್ತಿಲ್ಲದೆಯೆ ಆ ಎರಡು ಪದಗಳು ಅವನ ಬಾಯಿಂದ ಹೊರಬಿದ್ದಿದ್ದವು. ಸ್ವಲ್ಪ ಸಾವರಿಸಿಕೊಂಡ ಅಮರನಾಥ ಪಕ್ಕದಲ್ಲಿ ಕುಳಿತಿರುವವರ ಕಡೆಗೆ ನೋಡಿ ಮತ್ತೆ ಸರಿಯಾಗಿ ಕುಳಿತುಕೊಂಡ. ಅದೇ ಸಮಯಕ್ಕೆ ಕೃತಿಕಾಗೆ ಬಿಕ್ಕಳಿಕೆ ಬಂದುಬಿಟ್ಟಿತ್ತು. "ಇಡಿಯಟ್".... ಎಲ್ಲಿದ್ದಾನೊ.....? ಹೇಗಿದ್ದಾನೊ....? ನನ್ನನ್ನು ಬಿಟ್ಟು ಇರಲಾರ. ಒಂದೆರಡು ದಿನಗಳಲ್ಲಿ ಹಿಂದಕ್ಕೆ ಓಡಿ ಬರುತ್ತಾನೆ. ಬಂದು ನನ್ನ ಹಿಂದೆ ನಿಂತುಕೊಳ್ಳುತ್ತಾನೆ. ನನ್ನನ್ನೆ ನೆನೆದುಕೊಳ್ಳುತ್ತಿದ್ದಾನೆ....? ಏನು ಮಾಡುತ್ತಿದ್ದಾನೊ ಏನೊ....? ಏನಾದರು ತಿಂದನೊ ಇಲ್ಲವೊ....? ಇಷ್ಟಕ್ಕೂ ನಾನು ಮಾಡಿದ ತಪ್ಪಾದರು ಏನು....? ನನ್ನನ್ನು ಬಿಟ್ಟು ಹೋಗುವಂತಹ ತಪ್ಪು ನಾನು ಏನು ಮಾಡಿದೆ....? ಅವಳಿಗೆ ಅಳು ತಡೆದುಕೊಳ್ಳಲು ಆಗಲಿಲ್ಲ. ಗಳಗಳನೆ ಅತ್ತುಬಿಟ್ಟಳು. ಕಣ್ಣುಗಳಿಂದ ಧಾರಾಕಾರವಾಗಿ ಕಣ್ಣೀರು ಸುರಿಯುತ್ತಿದೆ.

ಕೃತಿಕಾ ಒಬ್ಬಳೆ ಏನು ಮಾಡುತ್ತಿದ್ದಾಳೆ ಎಂದು ಅವಳ ತಾಯಿ ಎದ್ದುಬಂದು ನೋಡುತ್ತಾಳೆ....? ಕೃತಿಕಾಳ ಕಣ್ಣುಗಳಿಂದ ಧಾರಾಕಾರವಾಗಿ ಸುರಿಯುತ್ತಿರುವ ಕಣ್ಣೀರನ್ನು ನೋಡಿ ಆಕೆ ಭೀತಿಗೊಳಗಾಗಿಬಿಟ್ಟಳು. ಹತ್ತಿರಕ್ಕೆ ಬಂದು ಮಗಳ ಪಕ್ಕದಲ್ಲಿ ಕುಳಿತುಕೊಂಡು, ಬೆನ್ನು ಸವರುತ್ತ "ಕೃತಿಕಾ ಈಗ ಏನಾಯಿತು ಅಂತ ಅಳ್ತಾ ಇದ್ದೀಯಾ.....? ಅಮರನಾಥ ಇವತ್ತಲ್ಲ ನಾಳೆ ಬಂದೇ ಬರ್‍ತಾನೆ. ಸುಮ್ಮನೆ ಇರು ಆಗೆಲ್ಲ ಅಳಬಾರದು" ಎಂದು ಸಮಾಧಾನ ಮಾಡುತ್ತಿದ್ದಂತೆ ಕೃತಿಕಾ, "ನೋಡಮ್ಮ ನಾನು ಏನು ತಪ್ಪು ಮಾಡಿದೆ ಅಂತ ನನಗೆ ಈ ಶಿಕ್ಷೆ....?" ಎಂದು ತಾಯಿಯ ಭುಜದ ಮೇಲೆ ಒರಗಿಕೊಂಡಳು. ಕೃತಿಕಾ ನರ್ಸಿಂಗ್ ಹೋಂ ಕಡೆಗೆ ಹೋಗಿ ಮೂರು ದಿನಗಳು ಕಳೆದಿದ್ದವು. ಜೊತೆಗೆ ಸರಿಯಾಗಿ ಊಟವು ಮಾಡಿರಲಿಲ್ಲ. ತಾಯಿಯ ಬಲವಂತಕ್ಕೆ ಒಂದಷ್ಟು ಹಾಲು ತೆಗೆದುಕೊಂಡಿದ್ದಳು. ರಾತ್ರಿ ಆಗುತ್ತಿದ್ದಂತೆ ಅವಳಿಗೆ ಮೈತುಂಬಾ ಭಯ ತುಂಬಿಕೊಳ್ಳುತ್ತಿತ್ತು. ಕಳೆದ ಮೂರು ರಾತ್ರಿಗಳಲ್ಲಿ ಅವಳಿಗೆ ಏನೇನೊ ಕನಸುಗಳು ಬಂದಿದ್ದವು. ರಾತ್ರಿ ಒಬ್ಬಳೆ ಮಲಗಬೇಕಲ್ಲ ಎನ್ನುವ ಎದರಿಕೆಯಿಂದ ಅವಳಲ್ಲಿ ಈಗ ಸಣ್ಣದಾಗಿ ನಡುಕ ಪ್ರಾರಂಭವಾಗಿತ್ತು.

✲ ✲ ✲

ಇಡೀ ದಿನ ಅರೆನಿದ್ದೆ, ಎಚ್ಚರಿಕೆಗಳ ನಡುವೆ ಪ್ರಯಾಣ ಮಾಡಿದ ಅಮರನಾಥ ಕತ್ತಲು ತುಂಬಿದ ಒಂದು ನಿರ್ಜನ್ಯ ಪ್ರದೇಶದಲ್ಲಿ ಬಸ್ಸಿಳಿದುಕೊಂಡ. ಬಸ್ಸಿಳಿದುಕೊಂಡ ಎನ್ನುವುದಕ್ಕಿಂತ ಆ ಬಸ್ಸು ತನ್ನ ಪ್ರಯಾಣವನ್ನು ಅಲ್ಲಿಗೆ ಮುಕ್ತಾಯಗೊಳಿಸಿತ್ತು. ಬಸ್ಸು ತನ್ನ ಕೊನೆ ತಂಗುದಾಣ ತಲುಪುವುದಕ್ಕಿಂತ ಐದು ಕಿಲೋ ಮೀಟರುಗಳು ಮುಂಚೆಯೆ

ಯಾವುದೊ ತೊಂದರೆಯಿಂದ ನಿಂತುಹೋಗಿತ್ತು. ಅದಕ್ಕೆ ಮುಂಚೆಯೆ ಎರಡು ಮೂರು ಸಲ ನಿಂತು ನಿಂತು ಬಂದಿದ್ದ ಬಸ್ಸಿನ ಒಳಗಿದ್ದ ಪ್ರಯಾಣಿಕರೆಲ್ಲ ಅಲ್ಲಲ್ಲಿ ಇಳಿದು ಕತ್ತಲಲ್ಲಿ ಹೆಜ್ಜೆಯಾಕುತ್ತ ಹೊರಟುಹೋಗಿದ್ದರು. ಈ ನಡುವೆ ಅಮರನಾಥ ತಾನು ತಲುಪಬೇಕಾದ ವಿಳಾಸದ ಬಗ್ಗೆ ಕೇಳಿದಾಗಲೆಲ್ಲ ಜನ , "ಅದೆ ಕೊನೆ ನಿಲ್ದಾಣ. ಅಲ್ಲಿಂದ ಎರಡು ಕಿ.ಮೀಟರುಗಳು ದೂರದಲ್ಲಿ ಆ ಸೋಳಿಗರ ನಾಯಕ ದೊರೆಯುತ್ತಾನೆ " ಎಂದಿದ್ದರು. ಈಗ ಕೊನೆಯದಾಗಿ ಬಸ್ಸಿನಲ್ಲಿ ನಿರ್ವಾಹಕ, ಚಾಲಕನ ಜೊತೆಗೆ ಐದಾರು ಜನ ಮಾತ್ರ ಉಳಿದುಕೊಂಡಿದ್ದರು. ಬೆಂಕಿಕಡ್ಡಿ ಗೀಚಿ ಕೈಗಡಿಯಾರ ನೋಡಿಕೊಂಡಾಗ ರಾತ್ರಿ ಒಂಭತ್ತು ಗಂಟೆ. ಆ ಸಮಯಕ್ಕೆ ಆ ಸುತ್ತಮುತ್ತಲಿನ ಹಳ್ಳಿಗಳ ಜನ ಗಾಡಾಂಧ ಕತ್ತಲ ಜೊತೆಗೆ ನಿದ್ದೆಯಲ್ಲಿ ಕರಗಿಹೋಗಿದ್ದರು. ಎಲ್ಲಿ ನೋಡಿದರು ಅಂಧಕಾರ, ಅಂಧಕಾರದಲ್ಲೂ ಜೀವವಿದೆ ಎನ್ನುವಂತೆ ಮಿಂಚು ಹುಳುಗಳು ಮಾತ್ರ ಮಿಣಕ್....... ಮಿಣಕ್......ಎಂದು ಹಾರಾಡುತ್ತಿವೆ. ಜೊತೆಗೆ ಹುಳು ಉಪ್ಪಟ ಮತ್ತು ಜೀರುಂಡೆಗಳ ಸದ್ದು.

ಚಾಲಕ ಮತ್ತು ನಿರ್ವಾಹಕ ವಿಧಿಯಿಲ್ಲದೆ ಬಸ್ಸನ್ನು ಅಲ್ಲೆ ನಿಲ್ಲಿಸಿ ಹತ್ತಿರದಲ್ಲಿದ್ದ ಊರಿಗೆ ಹೋಗಿ ರಾತ್ರಿ ಉಳಿದುಕೊಂಡಿದ್ದು ಬೆಳಗ್ಗೆ ಬರುವುದಾಗಿ ಮಾತನಾಡಿಕೊಂಡರು. ಬಸ್ಸಿನಲ್ಲಿ ಮಲಗಿಕೊಳ್ಳೋಣವೆಂದರೆ ಅವರಿಗೆ ಊಟವಿರಲಿಲ್ಲ. ಬಸ್ಸಿನಲ್ಲಿ ಪ್ರಯಾಣ ಮಾಡಿ ಬಂದಿದ್ದ ಪ್ರಯಾಣಿಕನೊಬ್ಬ ಅವರನ್ನು ತನ್ನ ಊರಿಗೆ ಕರೆದುಕೊಂಡು ಹೋಗುವುದಾಗಿ ಭರವಸೆ ನೀಡಿದ್ದ. ಎಲ್ಲರೂ ಕತ್ತಲಲ್ಲಿಯೆ ತಮ್ಮ ತಮ್ಮ ಊರುಗಳ ಕಡೆಗೆ ಹೊರಟಿದ್ದರು. ಅಮರನಾಥ ಎಲ್ಲರ ಮಾತುಗಳನ್ನು ಕೇಳುತ್ತಾ ತಾನು ಒಬ್ಬನೆ ಬಸ್ಸಿನಲ್ಲಿ ಮಲಗಿಕೊಂಡು ಮಾಡುವುದಾದರು ಏನು ಎಂದು ತಾನೂ ಎಲ್ಲರ ಜೊತೆಗೆ ಕಾಲೆಳುಕೊಂಡು ಹೊರಟ.

ಅಲ್ಲಿಂದ ಅಮರನಾಥ ತಲುಪುವ ಊರಿಗೆ ಏಳು ಕಿಲೋಮೀಟರುಗಳ ದಾರಿ ಇದ್ದು ಕತ್ತಲಲ್ಲಿ ಆ ಊರು ತಲುಪಬೇಕಾದರೆ ಕನಿಷ್ಟ ಒಂದೂವರೆ ಎರಡು ಗಂಟೆಗಳಾದರು ಬೇಕು. ಎಲ್ಲರೂ ತಮ್ಮ ತಮ್ಮ ಹಳ್ಳಿ ಗುಡಿಸಲುಗಳು ಹತ್ತಿರ ಬಂದಿದ್ದ ಅಡ್ಡ ದಾರಿಗಳಲ್ಲಿ ತಿರುಗಿಕೊಂಡರು. ಅಂತಿಮವಾಗಿ ಅಮರನಾಥನ ಜೊತೆಗೆ ಇಬ್ಬರು ಪ್ರಯಾಣಿಕರು ಮಾತ್ರ ಉಳಿದುಕೊಂಡರು. ಅಮರನಾಥ ಮಧ್ಯಾಹ್ನ ಒಂದು ಕಡೆ ಬಸ್ಸು ನಿಂತಾಗ ಏನೊ ಸ್ವಲ್ಪ ತಿಂದು ಬಸ್ಸಿನಲ್ಲಿ ನಿದ್ದೆ ಮಾಡಿದ್ದ. ಈಗ ಅವನಿಗೆ ದಾಹ ಮತ್ತು ಹಸಿವು ಎರಡು ಒಟ್ಟಾಗಿ ಕಾಣಿಸಿಕೊಂಡಿದ್ದವು. ಮೊದಲು ದಿನದ ಅನುಭವಗಳೆ ಎಡರು ತೊಡರುಗಳಿಂದ ಪ್ರಾರಂಭಗೊಂಡಿದ್ದವು. ಕಾಡು ಮೇಡುಗಳ ರಸ್ತೆ, ರಾತ್ರಿ ಅಮಾವಸೆ ಕತ್ತಲು, ಹುಳು ಉಪ್ಪಟೆ ಜೀರುಂಡೆಗಳ ಸದ್ದು ಮಿಂಚು ಹುಳುಗಳ ಬೆಳಕು.

ಆಹ್ಲಾದಕರವಾದ ವಿಷಯವೆಂದರೆ ಮೈಯೆಲ್ಲಾ ಪುಳಕಗೊಳಿಸುವಂತೆ ಬೀಸುತ್ತಿರುವ ತಂಪುಗಾಳಿ ಚಳಿ. ಜೊತೆಗೆ ದಾರಿ ತೋರಿಸುವ ಇಬ್ಬರು ಪ್ರಯಾಣಿಕರು.

ಅಮರನಾಥ ದಾರಿಯ ಉದ್ದಕ್ಕೂ ಎಲ್ಲಾ ವಿಷಯಗಳನ್ನು ಕೇಳಿ ಕೇಳಿ ತಿಳಿದುಕೊಳ್ಳುತ್ತಿದ್ದಾನೆ. ಆದರೆ ಅವರಿಬ್ಬರು ಅಮರನಾಥ ಬಂದಿರುವ ವಿಷಯವನ್ನು ನಂಬಲಿಲ್ಲ. ''ನೀವು ಬಂದಿರುವ ವಿಷಯವೇನೊ ಒಳ್ಳೆಯದೆ ಆದರೆ ನಿಮಗೆ ಇಲ್ಲಿ ಏನು ಸೌಕರ್ಯ ದೊರೆಯುತ್ತೆ....? ಎಷ್ಟು ದಿನ ಇರ್ತೀರಾ....? ಕೈಯಲ್ಲಿ ಔಷಧಿ.... ಇಂಜೆಕ್ಷನ್ ಇಲ್ಲದೆ ಏನು ಸೇವೆ ಮಾಡ್ತೀರಾ....?'' ಎನ್ನುವ ಪ್ರಶ್ನೆಗಳಿಗೆ ಸ್ವಲ್ಪ ಸೆಳೆತಗೊಂಡ ಅಮರನಾಥ ಸ್ವಲ್ಪ ಹೊತ್ತು ಏನೋ ಯೋಚಿಸುತ್ತ ಕತ್ತಲಲ್ಲಿ ಹೆಜ್ಜೆ ಇಡುತ್ತ ಸಾಗಿದ್ದ. ಕತ್ತಲಲ್ಲಿ ಎಷ್ಟು ದೂರ ನಡೆದರು ಅವರ ಗುಡಿಸಲುಗಳು ಕಾಣಲಿಲ್ಲ. ನಡೆದು ನಡೆದು ಸುಸ್ತಾಗಿಹೋದ ಅಮರನಾಥ.

''ಇನ್ನು ಎಷ್ಟು ದೂರ.....? ಇನ್ನು ಎಷ್ಟು ದೂರ....?'' ಎಂದು ಕೇಳುತ್ತಲೆ ನಡೆಯುತ್ತಿದ್ದಾನೆ. ಅವರು ಇನ್ನೇನು ಬಂದುಬಿಡ್ತು ಎನ್ನುತ್ತಿದ್ದರೆ ವಿನಹಃ ಗುಡಿಸಲುಗಳು ಮಾತ್ರ ಕಾಣಿಸಲಿಲ್ಲ. ಇಷ್ಟು ರಾತ್ರಿಯಲ್ಲಿ ಅಲ್ಲಿಂದ ಸೋಲಿಗರ ನಾಯಕನಿರುವ ಊರಿಗೆ ಎರಡು ಕಿಲೋ ಮೀಟರು ದೂರ ಒಬ್ಬನೆ ಹೋಗುವುದು ಹೇಗೆ. ಎಂದು ಯೋಚಿಸುತ್ತಿದ್ದಂತೆ ''ನೀವು ಈ ರಾತ್ರಿ ನಮ್ಮ ಗುಡಿಸಲಲ್ಲೆ ತಂಗಿದ್ದು ಬೆಳಗ್ಗೆ ಹೋಗಿ, ಒಬ್ಬರೆ ಹೋಗುವುದು ಕಷ್ಟ, ಕತ್ತಲಲ್ಲಿ ಕಾಡುಪ್ರಾಣಿಗಳು ಬೇರೆ ಇರ್ತವೆ '' ಎಂದರು. ಅಮರನಾಥ, ಕಾಡುಪ್ರಾಣಿಗಳು ಎಂದಿದ್ದೆ ಹಾಗೆ ಆಗಲಿ ಎಂದು ಒಪ್ಪಿಕೊಂಡುಬಿಟ್ಟ.

ಅಂತು ಅವರು ವಾಸವಿರುವ ಸ್ಥಳ ತಲುಪಿದ್ದೆ ಅಮರನಾಥ ಉಸ್ಸೆಂದು ಗುಡಿಸಲು ಮುಂದೆ ಕುಕ್ಕುರು ಕುಳಿತ. ಅಮರನಾಥನಿಗೆ ನೀರು ತಂದುಕೊಟ್ಟಿದ್ದೆ ಗಟಗಟನೆ ಕುಡಿಯುತ್ತ ಹಸಿವು, ದಾಹ ಎರಡನ್ನು ಸ್ವಲ್ಪ ಮಟ್ಟಿಗೆ ನಿವಾರಿಸಿಕೊಂಡ. ಅಮರನಾಥನ ಬ್ಯಾಗಿನಲ್ಲಿ ತಿನ್ನುವ ಯಾವ ಪದಾರ್ಥಗಳು ಇರಲಿಲ್ಲ . ಅಲ್ಲಿ ಎಷ್ಟು ಗುಡಿಸಲುಗಳಿದ್ದವೊ....? ಅವುಗಳಲ್ಲಿ ಎಷ್ಟು ಜನರು ಮಲಗಿದ್ದರೊ ಅವನಿಗೆ ಗೊತ್ತಾಗಲಿಲ್ಲ. ಸುಮಾರು ಹೊತ್ತಾದ ಮೇಲೆ ಇಬ್ಬರು ಮಹಿಳೆಯರು ಬುಡ್ಡಿ ದೀಪದ ಬೆಳಕಿನಲ್ಲಿ ಕಾಣಿಸಿಕೊಂಡರು.

ಅವರು ಒಂದು ಅಲ್ಯೂಮಿನಿಯಂ ತಟ್ಟೆಯಲ್ಲಿ ರಾಗಿಮುದ್ದೆ ಮತ್ತು ಸೊಪ್ಪು ಸಾರನ್ನು ತಂದುಕೊಟ್ಟರು. ಅಮರನಾಥ ಏನೂ ಮಾತನಾಡದೆ ತಿಂದುಮುಗಿಸಿ ಇನ್ನಷ್ಟು ನೀರು ಕುಡಿದ, ಹೊಟ್ಟೆ ತಣ್ಣಗಾಯಿತು. ಅನಂತರ ಅಮರನಾಥನನ್ನು ಪಕ್ಕದ ಗುಡಿಸಲಿಗೆ ಕರೆದುಕೊಂಡು ಹೋಗಿ ಹುಲ್ಲು ಹಾಸಿರುವ ಸ್ಥಳವನ್ನು ತೋರಿಸಿದರು.

ಅಮರನಾಥ ಹುಲ್ಲಿನ ಮೇಲೆ ಒಂದು ಬೆಡ್‌ಶೀಟನ್ನ್ ಹಾಸಿ ಮಲಗಿಕೊಂಡ. ಗುಡಿಸಲು ಬಾಗಿಲನ್ನು ಮುಚ್ಚಿಕೊಳ್ಳುವಂತೆ ತಿಳಿಸಿದ ಆಳು ಹೊರಟುಹೋದ. ಅಮರನಾಥ ಕೈ ಕಾಲುಗಳನ್ನು ಚೆಲ್ಲಿದ. ಆದರೆ ಅವನ ತಲೆಯಲ್ಲಿ ಕನಸುಗಳು ಎದ್ದು ಕುಳಿತುಕೊಂಡವು.

* * *

ಅಮರನಾಥನ ತಾಯಿ ಮತ್ತು ತಂದೆ ಮನೆಯ ಹೊರಗೆ ಕುಳಿತು ಆಕಾಶದ ಕಡೆಗೆ ನೋಡುತ್ತಿದ್ದಾರೆ. ಅಕಾಶದಲ್ಲಿ ನಕ್ಷತ್ರಗಳು ಎಂದಿನಂತೆ ಮಿನುಗುತ್ತಿವೆ. "ಮಗೂನ ಚೆನ್ನಾಗಿ ಬೆಳೆಸಿ ಕಾಡು ಪಾಲು ಮಾಡಿದಂತಾಯಿತು" ಅಮರನಾಥನ ತಾಯಿ ತನಗೆ ತಾನೆ ಹೇಳಿಕೊಂಡಳು. ಅಮರನಾಥನ ತಂದೆ ಯಾವ ಪ್ರತಿಕ್ರಿಯೆಸನ್ನು ತೋರದೆ ಆಕಾಶದ ಕಡೆಗೆ ನೋಡುತ್ತಿದ್ದರು. ನಕ್ಷತ್ರಗಳ ಕೆಳಗೆ ಉಪಗ್ರಹವೊಂದು ವೇಗವಾಗಿ ಸಾಗುತ್ತಿದೆ. ಅದನ್ನು ಗಮನಿಸಿದ ಮಕ್ಕಳು "ಅಪ್ಪ.... ಅಪ್ಪ....ಸೆಟಲೈಟ್....ಸೆಟಲೈಟ್, ಅಲ್ಲಿ ನೋಡಿ.... ಅಲ್ಲಿ ನೋಡಿ.....?ನಮ್ಮಣ್ಣ ನೋಡ್ತಾ ಇರ್ತ್ತಾರಾ ಅಪ್ಪ.....?" ಮಗಳು ಅಪ್ಪನನ್ನು ಪ್ರಶ್ನಿಸಿದಳು.

ಅಪ್ಪ , ಅಮ್ಮ ಇಬ್ಬರೂ ಆಕಾಶದ ಕಡೆಗೆ ನೋಡುತ್ತಿದ್ದರು. ಉಪಗ್ರಹವನ್ನು ನೊಡುವ ಇಚ್ಛೆ ಅವರಿಗೆ ಬರಲಿಲ್ಲ . "ರೀ ನನ್ನಿಂದ ಅಮರನಾಥನ ನೋಡದೆ ಇರೊದಕ್ಕೆ ಆಗೊದಿಲ್ಲ. ನೀವು ಹೋಗಿ ಅವನ್ನ ಕರೆದುಕೊಂಡು ಬಂದುಬಿಡಿ" ಅಮರನಾಥನ ತಾಯಿಯ ದುಃಖಿಸುತ್ತ ಹೇಳಿದಳು. ನಾನು ಎಷ್ಟು ಹೇಳಿದರು ನನ್ನ ಮಾತು ಕೇಳದೆ ಹೋಗಿಬಿಟ್ಟನಲ್ಲ.....? ಉದ್ಯೋಗ ಸಿಕ್ಕಿದರೆ ನಮ್ಮನ್ನ ಬಿಟ್ಟು ಹೋಗ್ತಾನೆ ಅಂದುಕೊಂಡಿದ್ದೆ . ಆದರೆ ಇವನು ಸರಕಾರಿ ಕೆಲಸ ಬೇಡ, ಹೆಂಡತಿ ಜೊತೆ ನರ್ಸಿಂಗ್ ಹೊಂನಲ್ಲಿ ಕೆಲಸ ಮಾಡೋದು ಬೇಡ ಅಂತ ಹೋಗಿಬಿಟ್ಟನಲ್ಲ ... ಇಷ್ಟಕ್ಕೂ ಇವನು ಏನು ಮಾಡಬೇಕು ಅಂತಿದ್ದಾನೆ ... ? ಹುಡ್ಗೀನ ಬೇರೆ ಮದುವೆ ಮಾಡಿಕೊಂಡು ಬಿಟ್ಹೋಗಿ ಬಿಟ್ಟನಲ್ಲ ... ಎಲ್ಲಿದ್ದಾನೊ, ಏನು ಮಾಡ್ತಾ ಇದ್ದಾನೊ ... ? ಅವರಿಗೆ ಮಾತುಗಳು ಬರಲಿಲ್ಲ . ಆಕಾಶ ನಿಶಬ್ದವಾಗಿದೆ. ಪಕ್ಕದಲ್ಲಿ ಅಮರನಾಥನ ತಾಯಿ ದುಃಖಿಸುತ್ತಿದ್ದಾಳೆ.

* * *

ಅಮರನಾಥ ಆ ಪ್ರದೇಶಕ್ಕೆ ಬಂದು ನಾಲ್ಕಾರು ದಿನಗಳು ಕಳೆದಿವೆ. ಸೋಲಿಗರ ನಾಯಕ, ಅಮರನಾಥನಿಗೆ ಒಂದು ಪುಟ್ಟ ಮನೆಯನ್ನು ನೀಡಿದ್ದಾನೆ. ಎಲ್ಲಿ ನೋಡಿದರು ಹಚ್ಚನೆ ಹಸಿರು ಕವಚಗಳನ್ನು ಹೊದ್ದು ಮಲಗಿರುವ ತಪ್ಪಲುಗಳು.

ನೆಲವನ್ನೆಲ್ಲ ಹಬ್ಬಿ ಹಾಸಿ ಆಳೆತ್ತರಕ್ಕೆ ಬೆಳೆದು ನಿಂತಿರುವ ಹುಲ್ಲು , ಗಿಡ ಗಂಟೆ ಪೊದೆಗಳು, ಎತ್ತರೆತ್ತರಕ್ಕೆ ಬೆಳೆದು ನಿಂತಿರುವ ಮರಗಳು. ಬಣ್ಣ ಬಣ್ಣದ ಹೂವುಗಳು ಹಾರಾಡುತ್ತಿರುವ ಚಿತ್ರ ವಿಚಿತ್ರ ಬೆಟ್ಟಗಳು, ಹಕ್ಕಿ ಪಿಕ್ಕಿಗಳ ಚಿಲಿಪಿಲಿ ಕಲರವ. ಬಯಲು ಬೆಟ್ಟಗಳನ್ನು ಸುಡುವ ಸೂರ್ಯನ ಕಿರಣಗಳು ಇಲ್ಲಿ ಸಪ್ಪೆಯಾಗಿ ಎಲೆಗಳ ಮೇಲೆ ಬಿದ್ದು ಪಳ ಪಳನೆ ಹೊರಳಾಡುತ್ತಿವೆ. ನಡುವೆ ಕಾಡು ಪ್ರಾಣಿ, ಪಕ್ಷಿಗಳ ಸದ್ದಿನಿಂದ ಅರಣ್ಯ ತುಂಬಿಹೋಗಿದೆ.

ಕೃತಿಕಾ ಪಕ್ಕದಲ್ಲಿ ಕುಳಿತು ಈ ಸೊಬಗನ್ನೆಲ್ಲ ನೋಡುತ್ತಿದ್ದರೆ ಏನು ಹೇಳುತ್ತಿದ್ದಳು ? ಈಗ ಏನು ಮಾಡುತ್ತಿರಬಹುದು ... ? ಇಂತಹ ಸಮಯದಲ್ಲಿ ಅವಳ ಜ್ಞಾಪಕ ಬರುತ್ತಲ್ಲ ... ? ಅವಳನ್ನು ಮರೆಯಲು ಆಗುತ್ತಿಲ್ಲವಲ್ಲ ... ? ಅವಳನ್ನು ಬಿಟ್ಟು ಬಂದಾಗಿನಿಂದ ಈ ರೀತಿ ಯೋಚಿಸುತ್ತಿರುವುದು ಎಷ್ಟನೇ ಸಲವೊ ಏನೋ ? ಮನುಷ್ಯ ಏನಾದರೂ ಸಾಧಿಸಬೇಕಾದರೆ, ಗೆಲುವಿನ ಕ್ಷಣಗಳನ್ನು ನೋಡಬೇಕಾದರೆ ಅದಕ್ಕಿಂತ ಮುಂಚೆ ಕಷ್ಟದ ಕ್ಷಣಗಳನ್ನು ಅನುಭವಿಸಲೇಬೇಕು. ಎವೆರೆಸ್ಟ್ ಏರುವ ಮುಂಚೆ ತೇನ್‌ಸಿಂಗ್ ಮತ್ತು ಹೆಡ್ಮಂಡ್ ಹಿಲರಿ ಎಷ್ಟು ಕಷ್ಟಗಳನ್ನು ಅನುಭವಿಸಿರಬಹುದು ? ಅಮೆರಿಕಾ ಕಂಡಿಡಿದ ಕೊಲಂಬಸ್, ಇಂಡಿಯಾ ಕಂಡಿಡಿದ ವಾಸ್ಕೋಡಿಗಾಮಾ ಎಷ್ಟು ಭೂಶಿರ, ಬಿರುಗಾಳಿ, ಕತ್ತಲು ರಾತ್ರಿಗಳನ್ನು ನೋಡಿರಬಹುದು ... ? ದಕ್ಷಿಣ ಧ್ರುವ ಸೇರುವ ಮುಂಚೆ ಎಷ್ಟು ಜನ ಸಾವನ್ನಪ್ಪಿರಬಹುದು ... ?

ನಾವು ಇಷ್ಟಕ್ಕೂ ಏನು ಮಾಡುತ್ತಿದ್ದೇವೆ ... ? ಈ ನತದೃಷ್ಟ ದೇಶದ ನಾಲ್ಕು ಜನ ಬಡವರಿಗೆ ಆರೋಗ್ಯದ ಬಗ್ಗೆ ತಿಳಿ ಹೇಳಿ ಅವರ ಹಾರೈಕೆ ಮಾಡುವುದು ಒಂದು ಘನ ಕಾರ್ಯವೇ ? ಒಂದಲ್ಲ ಒಂದು ದಿನ ಕೃತಿಕಾ ಹಣದ ವ್ಯಾಮೋಹವನ್ನು ತೊರೆದು ನನ್ನನ್ನು ಹುಡಿಕಿಕೊಂಡು ಬಂದೇ ಬರುತ್ತಾಳೆ. ನಮ್ಮ ತಂದೆ ತಾಯಿ ತಂಗಿ ತಮ್ಮ ನನ್ನ ಬಗ್ಗೆ ಏನು ಯೋಚಿಸುತ್ತಿರಬಹುದು ...? ಒಂದೆರೆಡು ದಿನ ಹೋದರೆ ಎಲ್ಲಾ ಸರಿಹೋಗುತ್ತದೆ ... ವರ್ಷಕ್ಕೆ ಒಂದೆರಡು ದಿನ ಹೋಗಿ ತಂದೆ ತಾಯೀನ ತಮ್ಮ ತಂಗೀನ ನೋಡಿಕೊಂಡು ಬರಬೇಕು. ಫ್ರೆಂಡ್ಸ್ ಎಲ್ಲಾ ಹೇಗಿದ್ದಾರೋ ಏನೋ... ಹೀಗೆ ಯೋಚಿಸುತ್ತ ಗುಡ್ಡದ ಮೇಲೆ ಕುಳಿತಿರುವ ಅಮರನಾಥನನ್ನು ಯಾರೊ ಮೃದುವಾಗಿ ಕದಲಿಸಿದರು. ಅದುರಿಬಿದ್ದ ಅಮರನಾಥ ಪಕ್ಕಕ್ಕೆ ತಿರುಗಿ ನೋಡುತ್ತಾನೆ ... ?

ಪಕ್ಕದಲ್ಲಿ ಕುಳಿತಿದ್ದ ಕ್ಯಾತ ''ಸಾ ಅಲ್ಲಿ ನೋಡಿ ಆನೆಗಳ ಹಿಂಡು'' ಎಂದು ಎರಡು ತಪ್ಪಲುಗಳ ನಡುವಿನ ಹೊಳೆಯ ಕಡೆಗೆ ಕೈ ತೋರಿಸಿದ. ಕಣ್ಣುಗಳನ್ನು ಸಣ್ಣಗೆ

ಮಾಡಿಕೊಂಡ ಅಮರನಾಥ ಮರಗಳ ನಡುವಿನಿಂದ ನಿಧಾನವಾಗಿ ನೋಡತೊಡಗಿದ. ಹೌದು ! ಆನೆಗಳ ಹಿಂಡು, "ನೋಡಿ ಸಾ ಹಿಂದುಗಡೆ ಇರೊದು ಗಂಡು ಆನೆ ... ಮುಂದೆಗಡೆ ಇರೂದು ಹೆಣ್ಣಾನೆ ... ಅವು ಮರಿಗಳು ಸಾ ..." ಕ್ಯಾತ ವಿವರಿಸುತ್ತಿದ್ದ.

"ಈ ಕಡೆ ಬರುವುದಿಲ್ಲ ತಾನೆ ... ?" ಅಮರನಾಥ ಪ್ರಶ್ನಿಸಿದ. "ಇಲ್ಲ ಬರೂದಿಲ್ಲ ಸಾ ... ಆದರೆ ನಮ್ಮ ವಾಸನೆ ಅವುಗಳಿಗೆ ಬರಬಾರ್ದು. ಗಾಳಿ ನಮ್ಮ ಕಡೆಗೆ ಬೀಸ್ತಾ ಇದೆ. ಅವು ನದಿ ದಾಟಿ ಈ ಕಡೆಗೆ ಬರೊದು ಕಷ್ಟ" ಕ್ಯಾತ ಹೇಳುತ್ತಿದ್ದಂತೆ ಅಮರನಾಥ, ಒಂದು ಬೈನಾಕುಲರ್ ... ಒಂದು ಕ್ಯಾಮರಾ ತೆಗೆದುಕೊಳ್ಳಬೇಕಲ್ಲ ಎಂದು ಚಡಪಡಿಸಿದ.

ಅಮರನಾಥನ ಜೊತೆಗೆ ಒಂದು ವಾರದಿಂದ ಓಡಾಡುತ್ತಿರುವ ಕ್ಯಾತ ಅಮರನಾಥನ ಖಾಸಾ ಅಸಿಸ್ಟೆಂಟ್ ಆಗಿಹೋಗಿದ್ದಾನೆ. ಅಮರನಾಥನನ್ನು ದಿನಕ್ಕೊಂದು ಹಳ್ಳಿಗೆ ಕರೆದೊಯ್ಯುವ ಕ್ಯಾತ ವಾರ್ಡ್ ಬಾಯಿಗಿಂತ ಹೆಚ್ಚು ಕೆಲಸ ಮಾಡುತ್ತಿದ್ದಾನೆ. ಅಮರನಾಥ ಕಳೆದ ಒಂದು ವಾರದಲ್ಲಿ ಕನಿಷ್ಟ ಐವತ್ತು ರೋಗಿಗಳನ್ನು ನೋಡಿ ಶುಶ್ರೂಷೆ ಮಾಡಿದ್ದಾನೆ. ಮುದುಕರು, ಮಕ್ಕಳು, ಮಹಿಳೆಯರೆನ್ನದೆ ಎಲ್ಲರನ್ನು ಬಾಯಿತುಂಬಾ ಮಾತನಾಡಿಸಿ ಅವರ ನೋವು ನಲಿವುಗಳ ನಡುವೆ ಮುಳುಗಿಹೋಗಿದ್ದಾನೆ. ಒಂದೇ ಒಂದು ಕೊರತೆಯೆಂದರೆ ಅವನಲ್ಲಿ ಯಾವುದೇ ಔಷಧಿಗಳು ಇಲ್ಲದೆ ಇರುವುದು. ತನ್ನಲ್ಲಿದ್ದ ಸ್ವಲ್ಪ ಹಣದಿಂದ ಹತ್ತಿರದ ಪಟ್ಟಣಗಳಿಂದ ಔಷಧಿಗಳನ್ನು ತರಿಸಿಕೊಟ್ಟಿದ್ದಾನೆ. ಜೊತೆಗೆ ಕಾಯಿಲೆಗಳು ಬರುವುದು ಎರಡು ಕಾರಣಗಳಿಂದ ಒಂದು ಸ್ವಚ್ಛತೆಯನ್ನು ಕಾಪಾಡಿಕೊಳ್ಳದೆ ಇರುವುದು. ಎರಡು, ಪೋಷ್ಠಿಕ ಆಹಾರವನ್ನು ತೆಗೆದುಕೊಳ್ಳದೆ ಇರುವುದು. ಈ ಎರಡನ್ನು ಪಾಲಿಸದೆ ಇರುವುದಕ್ಕೆ ಕಾರಣಗಳೆಂದರೆ ಬಡತನ. ಇದನ್ನೆಲ್ಲ ವಿವರಿಸುವ ಅಮರನಾಥ ಆಗಲೆ ಆ ಗುಡಿಸಿಲುಗಳ ಒಳಗೆ ಮತ್ತು ಹೊರಗೆ ಸ್ವಚ್ಛತೆಯನ್ನು ಕಾಪಾಡಿಕೊಳ್ಳಲು ನೆರವಾಗಿದ್ದಾನೆ.

ಹಸಿರೆ ಉಸಿರಂತಿರುವ ಈ ಕಾಡು ಕಣಿವೆ ಬೆಟ್ಟಗಳ ನಡುವೆ ಅಲ್ಲಲ್ಲಿ ಗುಡಿಸಿಲುಗಳನ್ನು ಕಟ್ಟಿಕೊಂಡು ವಾಸಿಸುತ್ತಿರುವ ಇವರು ನಿಜವಾಗಿಯೂ ದುಃಖದ ಅಂಧಕಾರದ ಪರಿಸ್ಥಿತಿಯಲ್ಲಿ ವಾಸಿಸುತ್ತಿರುವುದನ್ನು ನೋಡಿ ಮಮ್ಮಲು ಮರಗಿದ್ದಾನೆ. ಅವರಿಗೆ ಅಲ್ಲಿ ಯಾವುದೇ ಆಧಾರಗಳಿಲ್ಲದೇ ಕಾಡಿನ ಮಕ್ಕಳಂತೆ ವಾಸಿಸುತ್ತಿದ್ದಾರೆ. ಅವರಿಗೆ ಬೆಳೆ ಬೆಳೆಸಲು ಹೊಲ ಗದ್ದೆಗಳಿಲ್ಲ. ಕೂಲಿಗೆ ಹೋಗುವುದಕ್ಕೆ ಕರೆಯುವವರೆ

ಇಲ್ಲ. ಕಾಡನ್ನೇ ನೆಚ್ಚಿಕೊಂಡಿರುವ ಅವರು ಅಲ್ಲಲ್ಲಿ ಸಣ್ಣ ಸಣ್ಣ ಬಯಲುಗಳಲ್ಲಿ ತರಕಾರಿ ದವಸ ಧಾನ್ಯಗಳನ್ನು ಬೆಳೆಸಿಕೊಳ್ಳುತ್ತಾರೆ. ಮರಗಳನ್ನು ಕಡಿಯಲು ಅರಣ್ಯ ಇಲಾಖೆಯವರು ಬಿಡುವುದಿಲ್ಲ . ಸಣ್ಣ ಪುಟ್ಟ ಪ್ರಾಣಿಗಳನ್ನು ಬೇಟೆಯಾಡುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ಅವರು ಆರೋಗ್ಯವಾಗಿ ಮತ್ತು ನೆಮ್ಮದಿಯಾಗಿ ಇರಲು ಹೇಗೆ ಸಾಧ್ಯ ... ?

ಅಮರನಾಥ ಒಂದು ವಾರದಿಂದ ಇದನ್ನೆಲ್ಲ ಸಾಕಷ್ಟು ಹತ್ತಿರದಿಂದ ನೋಡಿದ್ದಾನೆ. ನಗರದಲ್ಲಿ ಕಂಡರಿಯದ ಕೆಲವು ರೋಗಗಳಿಂದ ಇಲ್ಲಿನ ಜನ ನರಳುತ್ತಿರುವುದನ್ನು ನೋಡಿದ್ದಾನೆ. ನಗರಗಳಿಂದ ಬಲು ದೂರದಲ್ಲಿರುವ ಇವರು ಕುಡಿಯುವುದನ್ನು ಕಲಿತುಕೊಂಡಿದ್ದಾರೆ. ಸರಕಾರ ಪೂರೈಸುವ ಸಾರಾಯಿ ಪಾಕೆಟ್‌ಗಳು ಯಾವುದೊ ದಾರಿಗಳ ಮೂಲಕ ಅವರನ್ನು ತಲುಪುತ್ತವೆ. ಮಲಗಿದ ಕಡೆಯಲ್ಲೇ ಮಕ್ಕಳಂತೆ ಕೃಷವಾಗಿರುವ ದೇಹಗಳು ... ಗುಡಾಣದಂತೆ ಊದಿಕೊಂಡಿರುವ ಹೊಟ್ಟೆಗಳು ... ದೇಹವೆಲ್ಲ ಗ್ರಂಥಿಗಳಾಗಿರುವುದು ... ಕಿವಿ ಮೂಗು ಗಂಟಲು ರೋಗಗಳು ... ಅಂಗಾಂಗಗಳು ಊನಗೊಂಡಿರುವುದು ಜೊತೆಗೆ ದೆವ್ವ ಭೂತಗಳ ಚೇಷ್ಟೆಗಳಿಂದ ಭೀತಿಗೊಳಗಾಗಿದ್ದಾರೆ.

ಅವರ ಜೀವನ ರೋಗ ರುಜಿನಗಳಿಂದ ತುಂಬಿ ಹೋಗಿದೆ. ಎಲ್ಲಕ್ಕಿಂತ ದುಃಖವಾದ ವಿಷಯವೆಂದರೆ ಅವರನ್ನು ಅಕ್ಷರಜ್ಞಾನದಿಂದ ದೂರವಿಟ್ಟಿರುವುದು. ಇವರೆಲ್ಲರನ್ನು ಅಕ್ಷರಸ್ತರನ್ನಾಗಿಸಲು ನಮಗೆ ಇನ್ನೂ ಎಷ್ಟು ವರ್ಷಗಳು ಬೇಕೋ ಏನೋ ...?ಯಾವುದಾದರೂ ಒಂದು ಹಳ್ಳಿಯಲ್ಲಿ ರಾತ್ರಿ ಹೊತ್ತು ಎಲ್ಲರನ್ನು ಕೂರಿಸಿಕೊಂಡು ಅಕ್ಷರ ಕಲಿಸಬೇಕು ಎನ್ನುವ ಯೋಚನೆ ಅಮರನಾಥನನ್ನು ಕಾಡುತ್ತಿತ್ತು .

ಈ ಯೋಚನೆಗಳ ನಡುವೆ ದಟ್ಟ ಅರಣ್ಯದ ಮೇಲೆ ಸೂರ್ಯನ ಬೆಳಕು ಮಂಕಾಗುತ್ತಿದೆ. ''ಸಾ ರಾತ್ರಿ ಇಲ್ಲೆ ಇರೋಣ ಸಾ... ?'' ಯೋಚನೆಗಳ ಬಲೆಯಲ್ಲಿದ್ದ ಅಮರನಾಥ, ಕ್ಯಾತನ ಕಡೆಗೆ ನೋಡಿದ. ಅಗಲವಾದ ದವಡೆ ... ಬಾಯಿ ತುಂಬಾ ಹಲ್ಲುಗಳು ... ಗುರುಚಲು ಪೊದೆಯಂತ ತಲೆ ... ಕುತೂಹಲ ತುಂಬಿದ ಕಣ್ಣುಗಳು ಅಮರನಾಥನನ್ನೆ ನೋಡುತ್ತಿವೆ. ಅಮರನಾಥ ಒಂದೆರಡು ಕ್ಷಣ ಏನೋ ಯೋಚಿಸಿದ ಮೇಲೆ ''ರಾತ್ರಿ ಇಲ್ಲೆ ಇದ್ದರೆ ಏನೂ ತೊಂದರೆ ಆಗೂದಿಲ್ಲೇನು...'' ಎಂದ. ''ಏನೂ ತೊಂದರೆ ಇಲ್ಲ ಬೇಕಾದರೆ ಬೆಂಕಿ ಹಾಕಿಕೊಂಡು ಕುಳಿತುಕೊಳ್ಳೋಣ'' ''ಯಾಕೆ ನನ್ನನ್ನ ಯಾವುದಾದರೂ ಪ್ರಾಣಿಗೆ ಬಲಿ ನೀಡುಬೇಕಂತಿದ್ದೀಯೇನು ... ?''

ಅಮರನಾಥನ ಮಾತಿಗೆ ಕ್ಯಾತ ಅವನನ್ನೇ ದಿಟ್ಟಿಸುತ್ತ ನಕ್ಕ . "ನಾನು, ನನ್ನ ಕೃತಿಗಾದರೂ ಬದುಕಬೇಕು. ಹುಚ್ಚು ಹುಡುಗಿ. ನನ್ನನ್ನ ಮದುವೆ ಮಾಡಿಕೊಂಡು ತಪ್ಪು ಮಾಡಿದಳೊ ಏನೋ...? ಮನಸ್ಸೆಲ್ಲ ಅವಳೆ" ಅಮರನಾಥ ಒಳಗೊಳಗೆ ಹೇಳಿಕೊಳ್ಳುತ್ತಿರುವುದನ್ನು ಕ್ಯಾತ ಕಾಡು ಪಾಪ ನೋಡಿದಂತೆ ಮಿಕಮಿಕನೆ ನೋಡತೊಡಗಿದ.

"ಕ್ಯಾತ ನಡಿ ಕತ್ತಲಾಗ್ತಾ ಇದೆ ಬೇಗನೆ ಊರು ಸೇರಿಕೊಳ್ಳೋಣ..."

"ಇನ್ನೆಲ್ಲಿ ಸಾ... ಊರು ಸೇರೂದು ... ಕತ್ತಲಲ್ಲಿ ಎದ್ದು ಬಿದ್ದು ಹೋಗುವುದಕ್ಕಿಂತ ರಾತ್ರಿ ಇಲ್ಲೆ ಇದ್ದು ಬೆಳಗ್ಗೆ ಹೋಗೂದೆ ವಾಸಿ" ಎಂದ ಕ್ಯಾತ. "ಮತ್ತೆ ನೀನು ಮೊದಲೆ ಯಾಕೆ ಹೇಳಲಿಲ್ಲ ..." ಅಮರನಾಥ ಪ್ರಶ್ನಿಸಿದ. "ನೀವು ನನಗೆ ಕೇಳಲಿಲ್ಲವಲ್ಲ ...?" "ಒಳ್ಳೆ ತಲೆಹರಟೆ ಇದ್ದೀಯ ನೀನು. ರಾತ್ರಿ ಇಲ್ಲಿ ಇರೂದಕ್ಕಾಗುತ್ತ... ?"

"ಯಾಕಾಗೂದಿಲ್ಲ ಸಾ ... ? ನಿದ್ದೆ ಬಂದರೆ ನೀವು ಮಲಗಿ ನಾನು ಕುಳಿತಿರ್ತೀನಿ" ಕ್ಯಾತನ ಮಾತಿಗೆ ಸ್ವಲ್ಪ ಸೆಳೆತಗೊಂಡ ಅಮರನಾಥ ನನ್ನದೆ ತಪ್ಪು ಏನೇನೊ ಯೋಚಿಸುತ್ತ ಇಲ್ಲಿ ಕುಳಿತುಕೊಂಡಿದ್ದು , "ಅಂದರೆ ಈಗ ಊರು ಸೇರುವುದಕ್ಕಾಗುವುದಿಲ್ಲವ ? " "ಆಗುತ್ತೆ ಸಾ ... ಆದರೆ ದಾರಿ ತಪ್ಪೋದರೆ ಕಷ್ಟ. ಕಾಡು ಪ್ರಾಣಿಗಳು ಬೇರೆ ಇರ್ತವೆ ... " "ಇದನ್ನ ಮೊದಲೆ ಯಾಕೇಳ್ಳಲಿಲ್ಲ ... ?" ಎಂದ ಅಮರನಾಥ ತುಸು ಗಂಭೀರನಾದ.

"ರಾತ್ರಿಗೆ ಬೆಳದಿಂಗಳು ಬರುತ್ತೆ ಸಾ ... "ಕ್ಯಾತ ಮತ್ತೆ ಬಾಯಿ ತೆಗೆದ. "ತಿನ್ನೊದಕ್ಕೆ ... ?" ಅಮರನಾಥ ಪ್ರಶ್ನಿಸಿದ್ದೆ ತಡ " ಸಾ ... ನೀವು ಇಲ್ಲೆ ಇರಿಸಾ" ಎಂದವನೆ ಆನೆಗಳಿದ್ದ ಹೊಳೆ ಕಡೆಗೆ ಬಿರು ಬಿರುನೆ ಹೊರಟುಹೋದ. "ಲೋ ಕ್ಯಾತ ... ಕ್ಯಾತ ..." ಎನ್ನುವ ಮಾತುಗಳು ಕ್ಯಾತನ ಕಿವಿಗೆ ಬೀಳಲೇ ಇಲ್ಲ . ಕ್ಯಾತ ಗುಡ್ಡದ ಕಡೆಯಿಂದ ಹೊಳೆಯ ಕಡೆಗೆ ಕರಡಿಯಂತೆ ಉರುಳುತ್ತಾ ಹೊರಟುಹೋದ. ಅಮರನಾಥ ಅವನನ್ನೇ ನೋಡುತ್ತ ಇವನೇನು ಆನೆಗಳನ್ನೇ ಹೊಡೆದು ತರ್ತಾನ ಹೇಗೆ ... ? ಎಂದುಕೊಂಡ.

ಅಮರನಾಥ ಈಗ ಗುಡ್ಡದ ಮೇಲೆ ಒಬ್ಬನೆ ಕುಳಿತಿದ್ದಾನೆ. ಏರು ತಗ್ಗುಗಳ ಮೇಲೆ ಹಾಸಿಕೊಂಡಿರುವ ದಟ್ಟ ಹಸಿರು ಕಾಡು, ಪಶ್ಚಿಮದಲ್ಲಿ ಸೂರ್ಯ ಅಸ್ತಮಿಸಿ ಸುಮಾರು ಸಮಯವಾಗಿದೆ. ಪೂರ್ವದಿಕ್ಕಿನಲ್ಲಿ ಚಂದ್ರ ಚಿನ್ನದ ಲೇಪವನ್ನು ಬಳಿದುಕೊಂಡು ದುಂಡಗೆ ಮೇಲೆದ್ದು ಬರುತ್ತಿದ್ದಾನೆ.

ಪುಳಕಗೊಂಡ ಗಾಳಿ ಗಿಡ ಮರಗಳನ್ನೆಲ್ಲ ತಡಿವಿ ತಣ್ಣಗೆ ಬೀಸುತ್ತಿವೆ. ಪಕ್ಷಿಗಳ ಕಲರವ, ಜೀರುಂಡೆಗಳ ಸದ್ದು ಆಗಲೆ ಕೇಳುತ್ತಿದ್ದು , ಮಿಂಚು ಹುಳುಗಳು ಆಗಲೆ ಅಲ್ಲೊಂದು ಇಲ್ಲೊಂದು ಹಾರಾಡುತ್ತಿವೆ. ಕ್ಯಾತ ಎಲ್ಲಿ ಹೋದನೊ ಇನ್ನೂ ಅವನ ಸುಳಿವೆ ಇಲ್ಲ . ಈ ರಾತ್ರಿ ನನ್ನನ್ನ ಯಾವ ಯಾವ ರೀತಿಯ ತೊಂದರೆಗೆ ಸಿಲುಕಿಸುತ್ತಾನೊ...? ಯಾವ ಪ್ರಾಣಿಗೆ ಬಲಿ ಕೊಡುತ್ತಾನೊ ಆಗಲಿ ನೋಡೆಬಿಡೋಣ. ಇಂತಹ ಅನುಭವ ಯಾರಿಗೆ ದೊರಕುತ್ತೆ ... ಹೊದ್ದುಕೊಳ್ಳುವುದಕ್ಕೆ ಒಂದು ಬಟ್ಟೆ ತಿನ್ನುವುದಕ್ಕೆ ಏನಾದರೂ ಒಂದಿಷ್ಟು ತಂದುಬಿಟ್ಟಿದ್ದರೆ ಎಲ್ಲಾ ಸರಿಹೋಗಿಬಿಡ್ತಿತ್ತು. ಕಾಡು ಪ್ರಾಣಿಗಳನ್ನು ಬೇಟೆಯಾಡುವವರು ಹಗಲು ರಾತ್ರಿಗಳೆನ್ನದೆ ಕಾಡಲ್ಲೆ ಕಳೆಯುತ್ತಾರೆ ಎನ್ನುವ ವಿಷಯ ಅವನ ಮನಸಿಗೆ ಹೊಳೆಯಿತು.

''ನ್ಯಾಷನಲ್ ಜಾಗ್ರಫಿ,'' ''ಅನಿಮಲ್ ಪ್ಲಾನೆಟ್'' ಚಾನಲ್‌ಗಳಲ್ಲಿ ನೋಡಿರುವ ಹಲವು ಪ್ರಾಣಿ ಪಕ್ಷಿಗಳು ಮತ್ತು ಕೆಲವು ಇಂಗ್ಲೀಷ್ ಚಿತ್ರಗಳ ತುಣುಕುಗಳು ಅವನ ಕಣ್ಣುಗಳ ಮುಂದೆ ಹಾದುಹೋದವು. ''ಬೀಸ್ಟ್ ಇನ್‌ದ ಡಾರ್ಕ್‌ಸೈಡ್'' ಚಿತ್ರದಲ್ಲಿನ ಬಾರಿ ಸಿಂಹಗಳು ಅವನ ಮೇಲೆ ದಾಳಿ ಮಾಡುತ್ತಿರುವುದಾಗಿ ಕಲ್ಪಿಸಿಕೊಂಡ. ವೀರಪ್ಪನ್ ಒಂದೆರಡು ದಶಕಗಳಿಂದ ಕಾಡಿನಲ್ಲೆ ಉಳಿದುಕೊಂಡಿರುವುದು. ಜ್ಞಾಪಕಕ್ಕೆ ಬಂದಿತು. ಒಂದು ಕಡೆ ಕಾಡು ಪ್ರಾಣಿಗಳನ್ನು ಇನ್ನೊಂದು ಕಡೆ ಗಟ್ಟಿಮುಟ್ಟಾದ ಪೊಲೀಸ್ ಅಧಿಕಾರಿಗಳನ್ನು ಬೇಟೆಯಾಡುವ ಅವನೇನಾದರು ಈ ಕಡೆಗೆ ಬಂದರೆ ... ?ವೀರಪ್ಪನ್ ವಿಷಯ ಮನಸ್ಸಿಗೆ ಬಂದಿದ್ದೆ ಅಮರನಾಥನ ಹೃದಯದ ಬಡಿತ ತುಸು ಜೋರಾಯಿತು.

ಕ್ಯಾತ ಬಂದರೆ ಮೊದಲು ಇದೆ ವಿಷಯವನ್ನು ಕೇಳಬೇಕು. ಯಾವುದಕ್ಕೂ ಅವನು ಬಂದಿಲ್ಲವಲ್ಲ . ಇಡಿಯಟ್ .... ಅವನನ್ನು ಕಳುಹಿಸಿರಬಾರದು. ನಾನು ಅವನನ್ನು ಹಿಡಿದು ನಿಲ್ಲಿಸಿದರು ನಿಲ್ಲುತ್ತಿರಲಿಲ್ಲವೇನೊ ... ? ಒಂದು ವೇಳೆ ಹುಣ್ಣಿಮೆ ದಿನಗಳಾಗದಿದ್ದಲ್ಲಿ ನನ್ನ ಗತಿ ಏನಾಗುತ್ತಿತ್ತು ... ? ಗವ್ವೆನ್ನುವ ಕತ್ತಲು ಕಾಡನ್ನೆಲ್ಲ ಆವರಿಸಿಕೊಂಡು ಇಷ್ಟೊತ್ತಿಗೆ ನನ್ನನ್ನು ಎದುರಿಸಿಬಿಡುತ್ತಿತ್ತು.

''ತುಃ ಇಡಿಯಟ್ ...'' ಎನ್ನುವ ಪದಗಳು ಅವನ ಬಾಯಿಂದ ಹೊರಗೆ ಬಿದ್ದಿದ್ದೆ ತಡ ಎದುರುಗಡೆ ಇದ್ದ ಗಿಡಗಳಲ್ಲಿ ಸರಸರನೆ ಸದ್ದು ಕೇಳಿಸತೊಡಗಿತು. ಅವಕ್ಕಾದ ಅಮರನಾಥ ದೇಹವನ್ನು ಕಾಲುಗಳ ಮೇಲೆ ಹೊತ್ತುಕೊಂಡು ಸರಿಯಾಗಿ ಕುಳಿತುಕೊಂಡು, ಗಿಡಗಳ ಕಡೆಗೆ ನೋಡಿದ. ಗಿಡಗಳ ಒಳಗಿಂದ ಯಾವುದೊ ಒಂದು ಪ್ರಾಣಿ ಸರಸರನೆ ಅವನ ಕಡೆಗೆ ಏರಿಬರುತ್ತಿದೆ.

"ಕ್ಯಾತ ... ಕ್ಯಾತ ..." ಅಮರನಾಥ ತನಗೆ ಗೊತ್ತಿಲ್ಲದೆ ಕೂಗಿದ. "ಬಂದೆ ಸಾ ..." ಎಂಬ ಕ್ಯಾತನ ಮಾತುಗಳು ಅಮರನಾಥನ ಕಿವಿಗಳಿಗೆ ಬಿದ್ದಿದ್ದೆ "ಅಬ್ಬ" ಎಂದು ನಿಟ್ಟುಸಿರಿಟ್ಟು ಹಾಗೆ ಅವನ ಕಡೆಗೆ ನೋಡುತ್ತ ಕುಳಿತ. ಕ್ಯಾತ ಕೈಯಲ್ಲಿ ಏನೋ ಹಿಡಿದುಕೊಂಡು ಎದೆ ಉಸಿರುಬಿಡುತ್ತ ತಪ್ಪಲು ಏರಿ ಬರುತ್ತಿದ್ದಾನೆ. ಕ್ಯಾತ ಎನ್ನುವ ಎರಡು ಕಾಲಿನ ಪ್ರಾಣಿ ಅಮರನಾಥನ ದೇಹದೊಳಕ್ಕೆ ಯಾವುದೊ ಒಂದು ರೀತಿಯ ಧೈರ್ಯ ತುಂಬಿಕೊಳ್ಳತೊಡಗಿತು. ಬಂದವನೆ ಕೈಯಲ್ಲಿದ್ದ ಎಲೆಗಳನ್ನು ಅಮರನಾಥನ ಪಕ್ಕದಲ್ಲಿಟ್ಟು,

"ಇರಿ ಸಾ ... ಬಂದೆ " ಎಂದವನೆ ಮತ್ತೆ ಪೊದೆಗಳಲ್ಲಿ ಮಾಯವಾದ. ಬಂದ ಪುಟ್ಟ ಹೋದ ಪುಟ್ಟ ಎನ್ನುವಂತೆ ಕ್ಯಾತ ಬಂದಂತೆ ಬಂದವನು ಮತ್ತೆ ಪೊದೆಗಳಲ್ಲಿ ಮಾಯವಾಗಿದ್ದ . ಒಮ್ಮೆ ಅಲ್ಲಿ , ಒಮ್ಮೆ ಇಲ್ಲಿ , ಪೊದೆಗಳಲ್ಲಿ ಲಟ ಲಟ ಸದ್ದು ಕೇಳಿಬರುತ್ತಿದೆ. "ತುಃ ಇವನು ಮನೆ ಹಾಳಾಗ " ನನ್ನ ಪರಿಸ್ಥಿತಿಯನ್ನ ಇವನಿಗೆ ಏನೆಂದು ಹೇಳಲಿ ... ? ನನಗೆ ಭಯ ಎಂದರೆ ನಗುತ್ತಾನೊ ಏನೋ ಹೋಗಲಿ ಈ ಎಲೆಗಳಲ್ಲಿ ಏನಿದೆ ಎಂದು ಎಲೆಗಳನ್ನು ಬಿಚ್ಚುತ್ತಾನೆ ... ? ಮೀನುಗಳು ... ? ಅಮರನಾಥನ ಎದೆ ದಸಕ್ಕೆಂದಿತು ... ? ಅವನ ತಾಯಿ ಹೇಳುತ್ತಿದ್ದ ಮಾತುಗಳು ಜ್ಞಾಪಕಕ್ಕೆ ಬಂದುಬಿಟ್ಟವು. ಮೀನುಗಳೆಂದರೆ ದೆವ್ವಗಳಿಗೆ ಪಂಚಪ್ರಾಣ. ಅಮರನಾಥನ ತಂದೆ ಮೀನುಗಳನ್ನು ಮನೆಗೆ ತಂದ ದಿನ ಬಾಗಿಲಲ್ಲಿ ತುಃತುಃ ಎಂದು ಉಗಿದು ಮನೆ ಒಳಕ್ಕೆ ತರುತ್ತಿದ್ದರು.

ಅಮರನಾಥ ಧೈರ್ಯ ತಂದುಕೊಂಡು ಎಲೆಗಳನ್ನು ನಿಧಾನವಾಗಿ ಬಿಚ್ಚಿ ನೋಡುತ್ತಾನೆ. ಹೊಟ್ಟೆಗಳನ್ನು ಸೀಳಿಕೊಂಡಿರುವ ಮೀನುಗಳಿಗೆ ತಲೆ ಬಾಲಗಳು ಹಾಗೆ ಇವೆ. ಬೆಳದಿಂಗಳಲ್ಲಿ ಅವುಗಳ ಕಣ್ಣುಗಳು ಹೊಳೆಯುತ್ತಿವೆ. ಕ್ಯಾತ ಹೋಗಿರುವುದು ಒಣಗಿದ ಸೌದೆಯನ್ನು ತರಲು ಎಂದು ಅರ್ಥವಾದರು ಇವನು ರಾತ್ರಿಯಲ್ಲಿ ಇನ್ನು ಯಾವ ಯಾವ ರೀತಿಯಲ್ಲಿ ಕಾಡುತ್ತಾನೊ ಏನೊ ... ಪಕ್ಕದಲ್ಲೆ ಮೀನುಗಳು.

"ಕ್ಯಾತ ಲೋ ಕ್ಯಾತ ... ?" ಅಮರನಾಥ ಇದ್ದಕ್ಕಿದ್ದಾಗೆ ಕೂಗಿಕೊಂಡ. "ಬಂದೆ ಸಾ ..." ಎನ್ನುವುದರ ಜೊತೆಗೆ ಎಲ್ಲೊ ಪೊದೆಗಳಲ್ಲಿ ಮತ್ತೆ ಮತ್ತೆ ಲಟ ಲಟ ಸದ್ದು ಬರತೊಡಗಿತು. ಇಲ್ಲೇ ಪೊದೆಗಳಲ್ಲಿ ಇದ್ದಾನೆ ಎನ್ನುವ ಕಾತರಿಯಾದ ಮೇಲೆ ನೀರಿಗೆ ಬಿದ್ದವನಿಗೆ ಚಳಿ ಏನು ಗಾಳಿ ಏನು ? ತಂದೆ ತಾಯಿ ತಂಗಿ ತಮ್ಮ ಕೊನೆಗೆ ಕೃತಿಕಾಳನ್ನು ನೆನೆದುಕೊಂಡ.

ಪೊದೆಗಳಿಂದ ಹೊರಕ್ಕೆ ಬಂದ ಕ್ಯಾತ ಒಂದೆರಡು ಕಲ್ಲುಗಳನ್ನು ತಂದು ಜೋಡಿಸಿ ಒಣಗಿದ ಕಡ್ಡಿಗಳನ್ನು ಕಲ್ಲುಗಳ ಮಧ್ಯ ಒಂದೊಂದಾಗಿ ಮುರಿದು ಹಾಕಿ ಬೆಂಕಿ ಕಡ್ಡಿ

ಗೀರಿದ. ಬೆಂಕಿ ನಿಧಾನವಾಗಿ ಹೊತ್ತಿಕೊಂಡಿತು. ದೊಡ್ಡದಾದ ಒಂದು ಮೀನು ತೆಗೆದುಕೊಂಡು ಅದರ ಬಾಯಿಗೆ ಒಂದು ಕಡ್ಡಿ ಚುಚ್ಚಿದ ಅನಂತರ ಜೇಬಿನಲ್ಲಿದ್ದ ಕಾಗದ ತೆಗೆದು ಮೊದಲೆ ಪುಡಿ ಮಾಡಿ ತಂದಿದ್ದ ಉಪ್ಪುಕಾರವನ್ನು ಮೀನಿಗೆ ಸವರಿ ಬೆಂಕಿಯ ಮೇಲೆ ಹಾಕಿದ. ಅಮರನಾಥ ಏನೂ ಮಾತನಾಡದೆ ಕ್ಯಾತನ ಚಟುವಟಿಕೆಗಳನ್ನೇ ನೋಡುತ್ತಿದ್ದ.

ಕ್ಯಾತ ಒಂದೊಂದೆ ಮೀನನ್ನು ಬೆಂಕಿಯ ಮೇಲೆ ಸುಡುತ್ತಾ ಎಲೆಗಳ ಮೇಲೆ ಇಡುತ್ತಿದ್ದಂತೆ ಅಮರನಾಥ ಮುಳ್ಳುಗಳನ್ನು ತೆಗೆದು ತೆಗೆದು ಬಿಸಿಬಿಸಿಯಾದ ಮೀನುಗಳನ್ನು ತಿನ್ನತೊಡಗಿದ. ಯಾವುದೊ ಒಂದು ಅಪರೂಪವಾದ ಸ್ವಾದ. ಉಪ್ಪುಕಾರ ಸವಿದರೆ ಇಷ್ಟು ರುಚಿ ಇರುತ್ತದೆಯೆ ಎಂದುಕೊಳ್ಳುತ್ತಿದ್ದಂತೆ '' ಇವು ಬಾರಿ ಒಳ್ಳೇ ಮೀನು ಸಾ''ಎಂದ ಕ್ಯಾತ.

ಅಮರನಾಥನ ಕಣ್ಣುಗಳ ಮುಂದೆ ಈಗ ಕೃತಿಕಾಳ ಹೊಳೆಯುವ ಕಣ್ಣುಗಳು ... ನೀಳ ಮೂಗು ... ಅವಳು ಕೋಪಿಸಿಕೊಳ್ಳುವುದು, ಜಗಳವಾಡುವುದು ಮಾತನಾಡುವುದು, ಎಲ್ಲವೂ ಸಾಗಿಹೋಗುತ್ತಿವೆ. ಯೋಚಿಸುತ್ತ ಯೋಚಿಸುತ್ತ ತಾನು ಎಲ್ಲಿದ್ದೇವೆ ಎನ್ನುವುದನ್ನೇ ಮರೆತುಹೋದ. ಅವನ ಕೈಯಿ ಬಾಯಿಯ ಮಧ್ಯದಲ್ಲಿದ್ದ ಮೀನು ಮಣ್ಣಿಗೆ ಬಿದ್ದುಹೋಯಿತು. ಅಮರನಾಥ ದಿಢೀರನೆ ಭೂಮಿಗೆ ಇಳಿದುಬಂದವನಂತೆ ಪೆಚ್ಚು ಮುಖವಾಕಿಕೊಂಡು ಚಂದ್ರನ ಕಡೆಗೆ ನೋಡಿದ.

ಕ್ಯಾತ ''ಏನಾಯಿತು ಸಾ ... ? ನೀರು ಕುಡಿಯಿರಿ'' ಎಂದು ತನ್ನ ಜೋಳಿಗೆಯಲ್ಲಿದ್ದ ಬಾಟಲನ್ನು ತೆಗೆದುಕೊಟ್ಟ. ಹೌದು ನಾನು ನೀರು ಕುಡಿದಿಲ್ಲ ಎಂದು ಒಂದು ಗುಟುಕು ನೀರು ಕುಡಿದ ಬಾಟಲನ್ನು ಪಕ್ಕಕಿಟ್ಟು, ಬೆಂಕಿ ಆಕಾಶ ಚೆಲ್ಲುವ ಬೆಳದಿಂಗಳ ಕೆಳಗೆ ಒಂಟಿ ನಕ್ಷತ್ರದಂತೆ ಉರಿಯುತ್ತಿದೆ. ಅಮರನಾಥ ಮತ್ತು ಕ್ಯಾತ ಬೆಂಕಿಯ ಮುಂದೆ ಕುಳಿತಿದ್ದಾರೆ. ಕ್ಯಾತ ಗಿಡ ಮರಗಳ ಬಗ್ಗೆ, ಪ್ರಾಣಿ ಪಕ್ಷಿಗಳ ಬಗ್ಗೆ ಮಾತನಾಡಿ ಮಾತನಾಡಿ ಬಾಯಿ ನೋವಾದಂತೆ ಸುಮ್ಮನೆ ಕುಳಿತಿದ್ದಾನೆ. ಅಮರನಾಥ, ಕ್ಯಾತನ ಮಾತುಗಳನ್ನು ಕೇಳಿ ಕೇಳಿ ಸುಮ್ಮನಾಗಿದ್ದಾನೆ. ಬೆಳದಿಂಗಳ ಕೆಳಗೆ ಅರಣ್ಯ ಮಾತ್ರ ಇನ್ನೂ ನಿದ್ದೆ ಮಾಡದೆ ಹಾಗೆ ಕುಳಿತಿದೆ.

''ಮಲಗಿಕೊಂಡರೆ ಏನೂ ತೊಂದರೆ ಇಲ್ಲ ತಾನೆ ... ?'' ಅಮರನಾಥನ ಪ್ರಶ್ನೆಗೆ ''ನೀವು ಮಲಗಿ ಸಾರ್ ಏನೂ ತೊಂದರೆ ಇಲ್ಲ. ಯಾವ ಪ್ರಾಣಿನೂ ಬರುವುದಿಲ್ಲ. ನಾನು ಕುಳಿತಿರ್ತೀನಿ '' ಎನ್ನುವ ಉತ್ತರವನ್ನು ಕ್ಯಾತ ನಾಲ್ಕಾರು ಸಲ ಕೊಟ್ಟಿದ್ದಾನೆ. ಅಮರನಾಥ, ಕ್ಯಾತನ ಕಡೆಗೆ ಆಗಾಗ ನೋಡಿ ನೋಡಿ

ಗುಟುಕುರಿಸುತ್ತಿದ್ದಾನೆ. ಗಾಳಿ ತಂಪೇರುತ್ತಲೆ ಹೋಗುತ್ತಿದೆ. ಕಾಡಿನ ಮೇಲೆಲ್ಲ ಬೆಳದಿಂಗಳು ಚೆಲ್ಲಿರುವುದರಿಂದಲೊ ಏನೋ ಪ್ರಾಣಿ ಪಕ್ಷಿಗಳು ಇನ್ನೂ ನಿದ್ದೆಗೆ ಜಾರಿಕೊಳ್ಳದೆ ಕಲರವ ಮಾಡುತ್ತಲೆ ಇವೆ. ಮಧ್ಯ ಮಧ್ಯ ಅಲ್ಲೊಂದು ಇಲ್ಲೊಂದು ಪ್ರಾಣಿಗಳು ವಿಚಿತ್ರವಾಗಿ ಕೂಗಿಕೊಳ್ಳುತ್ತಿವೆ. ಅವು ಕೂಗಿಕೊಳ್ಳುವ ಸಮಯದಲ್ಲಿ ,''ಅದು ನೋಡಿ ಸಾ ... ಚಿರತೆ, ಅದು ಆನೆ, ಅದು ಕರಡಿ, ಅದು ಕೋತಿ. ಅದು ಆ ಪಕ್ಷಿ ಇದು ಈ ಪಕ್ಷಿ ''ಎಂದು ಹೆಸರುಗಳನ್ನು ಹೇಳುತ್ತಿದ್ದಾನೆ. ''ಅಲ್ಲೋ ಮಾರಾಯ ಹುಲಿ ಸಿಂಹ ಕರಡಿ ಚಿರತೆ ಆನೆ ಅಂತ ಯಾಕೆ ನನಗೆ ಭಯ ಹಿಡಿಸ್ತೀಯ ...?'' ಅಮರನಾಥನ ಮಾತುಗಳಿಗೆ ಕು ಕು ಎಂದು ನಗುವ ಕ್ಯಾತ, ಅಮರನಾಥನಿಗೆ ಒಂದು ನಿಗೂಢ ಕಾಡು ಪ್ರಾಣಿಯಂತೆ ಕಾಣಿಸತೊಡಗಿದ.

ಯಾವುದೋ ಒಂದು ಪ್ರಾಣಿಯ ಕೂಗು ಹತ್ತಿರದಲ್ಲೆ ಕೇಳಿಸಿಕೊಂಡಿದ್ದೆ, ''ಸಾ ... ಮರ ಹತ್ತಿಕ್ಕೊಳ್ಳುವುದು ಒಳ್ಳೇದು ಸಾ ... ಯಾವುದೊ ಪ್ರಾಣಿಗೆ ನಮ್ಮ ವಾಸನೆ ಬಂದಿರಬೇಕು'' ಎಂದ ಕ್ಯಾತನ ಮಾತಿಗೆ ಮೈಯಲ್ಲಾ ಕಣ್ಣಾಗಿಸಿಕೊಂಡ ಅಮರನಾಥ ದಿಢೀರನೆ ಎದ್ದು ನಿಂತುಕೊಂಡ. ಅವನ ಕಾಲುಗಳು ಅವನಿಗೆ ಹೇಳದೆ ಒಂದು ದೊಡ್ಡ ಮರದ ಬುಡದ ಕಡೆಗೆ ಓಡಿದವು. ಅಮರನಾಥನ ಕಾಲುಗಳಿಗೆ ತನ್ನ ಕೈಗಳನ್ನು ಮತ್ತು ಬೆನ್ನು ಕೊಟ್ಟು ಹತ್ತು ಅಡಿ ಎತ್ತರಕ್ಕೆ ಹತ್ತಿಸಿ ಮರದ ಮೇಲೆ ಕೂರಿಸಿದ. ಅಲ್ಲಿ ನಾಲ್ಕಾರು ಕೊಂಬೆಗಳು ವೆಸಿಲೊಡೆದಿರುವ ಸ್ಥಳದಲ್ಲಿ ಬಳ್ಳಿಗಳನ್ನು ಹಗ್ಗದಂತೆ ಸುತ್ತಿ ಸುತ್ತಿ ಒಂದು ಜೋಳಿಗೆಯನ್ನು ತಯಾರಿಸಿ ಅದರಲ್ಲಿ ಅಮರನಾಥನನ್ನು ಕೂರಿಸಿ,''ನೀವು ಆರಾಮಾಗಿ ಮಲಗಿ ಸಾ ...'' ಎಂದಿದ್ದೆ ಕೆಳಗಿಳಿದು ಬಂದ ಕ್ಯಾತ ಬೆಂಕಿಗೆ ಇನ್ನಷ್ಟು ಸೌದೆಯನ್ನು ಹಾಕಿ ಜೋರಾಗಿ ಉರಿಸತೊಡಗಿದ. ಉರಿಯುತ್ತಿರುವ ಬೆಂಕಿಯ ಎದುರಿಗೆ ಕುಳಿತು ಸುತ್ತಲು ನೋಡತೊಡಗಿದ. ಯಾವುದಾದರೂ ಪ್ರಾಣಿ ಬಂದರೆ ಉರಿಯುತ್ತಿರುವ ಬೆಂಕಿಯ ಕೊಳ್ಳಿಯನ್ನು ತೆಗೆದುಕೊಂಡು ಅದರ ಮೇಲೆ ಎರಗಲು ಅವನು ಯೋಚಿಸುತ್ತಿದ್ದ .

ಮರದ ಮೇಲಿದ್ದ ಅಮರನಾಥ ''ಲೋ ಕ್ಯಾತ ನೀನೂ ಮೇಲೆ ಬಂದು ಬಿಡೋ ...'' ಎಂದು ಕೂಗುತ್ತಿದ್ದರು, ಕ್ಯಾತ ''ನೀವು ಆರಾಮಾಗಿ ಮಲಗಿ ಸಾ ...'' ಎಂದು ಕೆಳಗೆಯೆ ಕುಳಿತುಕೊಂಡಿದ್ದ .

* * *

ಇಲ್ಲಿ ಬೆಂಗಳೂರಿನಲ್ಲಿ ಕೃತಿಕಾ ಅದೇ ಸಮಯಕ್ಕೆ ಬಾಲ್ಕನಿಯಲ್ಲಿ ಕುಳಿತುಕೊಂಡು ಬೆಳದಿಂಗಳಿನಲ್ಲಿ ನರಳುತ್ತಿದ್ದಾಳೆ. ಕಂದಿ ಹೋದ ಮುಖ, ಹೊಳಪು ಕಳೆದುಕೊಂಡಿರುವ

ಕಣ್ಣುಗಳು, ಅತ್ತು ಅತ್ತು ಕೃಷವಾಗಿರುವ ದೇಹ, ಜೀವನದಲ್ಲಿ ಜಿಗುಪ್ಸೆ ತುಂಬಿಕೊಂಡ ಮನಸು. ಕೆಲವೇ ದಿನಗಳಲ್ಲಿ ಅವಳ ಕನಸುಗಳೆಲ್ಲ ಭಗ್ನವಾಗಿ ಹೋಗಿದ್ದವು.

ಮುಂದೆ ಏನು ಮಾಡಬೇಕು ? ಈ ಅಮರನಾಥನೆಂಬ ಹುಳು ಎಲ್ಲಿರಬಹುದು... ? ಅವನು ತನ್ನ ಬಗ್ಗೆ ಏನು ಯೋಚಿಸುತ್ತಿರಬಹುದು ... ? ಅವನು ನನ್ನನ್ನ ನೋಡಲು ಬಂದೇ ಬರಬೇಕು. ನನ್ನ ಮೇಲೆ ಅಷ್ಟು ಪ್ರೀತಿ ಇದ್ದಿದ್ದರೆ ಹೇಳದೆ ಕೇಳದೆ ಹೇಡಿಯಂತೆ ಓಡಿಹೋಗುತ್ತಿದ್ದನೆ ...? ಅವನು ಬರದೆ ಇದ್ದರೆ ನಾನೇ ಹೋಗಬೇಕು. ಮನಸಿಗೆ ನೆಮ್ಮದಿ ಇಲ್ಲದಿದ್ದರೆ ಏನಿದ್ದು ಏನು ಪ್ರಯೋಜನ ...? ಹಣ, ಐಶ್ವರ್ಯ ಎಲ್ಲವೂ ನೆಮ್ಮದಿ, ಸಂತೋಷದ ನಂತರವೆ, ಮನಸಿಗೆ ಮೊದಲು ನೆಮ್ಮದಿಬೇಕು .ನೆಮ್ಮದಿ ಬೇಕೆಂದರೆ ನನ್ನ ಜೊತೆಗೆ ಅವನಿರಬೇಕು.

ಅಮರನಾಥ ಹೋದ ಕ್ಷಣದಿಂದಲೂ ಅವನು ಎಲ್ಲಿದ್ದಾನೊ, ಏನು ಮಾಡುತ್ತಿದ್ದಾನೊ, ಎಂಬುದರ ಬಗ್ಗೆ ಕೃತಿಕಾ ಅನೇಕ ರೀತಿಯಲ್ಲಿ ಹುಡುಕಾಡಿದ್ದಾಳೆ. ಆದರೆ ಅವಳಿಗೆ ಯಾವುದೇ ಸಂದೇಶವು ದೊರಕಲಿಲ್ಲ . ಅಮರನಾಥನ ತಂದೆ ತಾಯಿಗೂ ಅವನ ಕಡೆಯಿಂದ ಯಾವ ಸಂದೇಶವು ಬಂದಿರಲಿಲ್ಲ .

ಕೃತಿಕಾ ನರ್ಸಿಂಗ್‌ಹೋಂ ಕಡೆಗೆ ಹೋಗುವುದನ್ನೇ ಬಿಟ್ಟುಬಿಟ್ಟಿದ್ದಳು. ಅವಳ ಜೊತೆಗಿದ್ದ ಇಬ್ಬರು ವೈದ್ಯರು ಎಲ್ಲವನ್ನು ನೋಡಿಕೊಳ್ಳುತ್ತಿದ್ದರು. ಕೃತಿಕಾ ಮತ್ತು ಅಮರನಾಥನ ವಿಷಯ ಆಗಲೆ ಎಲ್ಲರಿಗೂ ತಿಳಿದುಹೋಗಿತ್ತು . ರೂಪ, ಕಮಲ, ಹರ್ಷ, ಸವ್ಯ, ನಿತಿನ್ ಎಲ್ಲರೂ ನಾಲ್ಕಾರು ಸಲ ಕೃತಿಕಾ ಮನೆಗೆ ಬಂದು ಧೈರ್ಯ ಹೇಳಿ ಹೋಗಿದ್ದರು. ಅಮರನಾಥ ಇರುವ ಸ್ಥಳ ಗೊತ್ತಾದರೆ ತಾವೇ ಹೋಗಿ ಅವನನ್ನು ಕರೆತರುವುದಾಗಿ ಭರವಸೆ ನೀಡಿದ್ದರು.

ಈ ನಡುವೆ ಅಮರನಾಥ ತನ್ನ ತಂದೆಯ ವಿಳಾಸಕ್ಕೆ ತಾನು ಆರೋಗ್ಯವಾಗಿ ಇರುವುದಾಗಿ ಒಂದೆರಡು ಪತ್ರಗಳನ್ನು ಬರೆದಿದ್ದ. ಆದರೆ ಅದರಲ್ಲಿ ತನ್ನ ವಿಳಾಸವನ್ನು ಬರೆದಿರಲಿಲ್ಲ . ತನ್ನ ಬಗ್ಗೆ ಯಾವುದೇ ರೀತಿಯ ಚಿಂತೆಯನ್ನು ಮಾಡಬಾರದೆಂದು ಮತ್ತು ತಾನು ಹತ್ತಿರದಲ್ಲೆ ಬೆಂಗಳೂರಿಗೆ ಬರುವುದಾಗಿ ಭರವಸೆ ಕೊಟ್ಟಿದ್ದ . ಆ ಪತ್ರವನ್ನು ಕೃತಿಕಾ ನೋಡಿ ಅಂಚೆ ಮುದ್ರೆಗಳ ಆಧಾರದಿಂದ ಅವನು ಇಂತಹ ಸ್ಥಳದ ಸುತ್ತಮುತ್ತಲು ಎಲ್ಲೊ ಇರುವುದಾಗಿ ಊಹೆ ಮಾಡಿಕೊಂಡಳು.

ಆದರೆ ಅವನನ್ನು ನಾನು ಹುಡುಕಿಕೊಂಡು ಹೋಗುವುದೆಲ್ಲಿ ...? ಅವನೆ ನನ್ನನ್ನು ಹುಡಿಕಿಕೊಂಡು ಬರಲಿ ... ನಾನು ಮಾಡಿದ ತಪ್ಪಾದರು ಏನು ... ? ಪ್ರೀತಿಸಿ ಮದುವೆಯಾಗಿದ್ದು ತಪ್ಪೆ ... ? ಪ್ರಪಂಚಾನ ಉದ್ದಾರ ಮಾಡುವುದಕ್ಕೆ

ಹೋಗ್ತಾನಂತೆ ... ಮೊದಲು ನಮ್ಮನ್ನ ನಾವು ಉದ್ಧಾರ ಮಾಡಿಕೊಳ್ಳದೆ ಬೇರೆಯವರನ್ನು ಉದ್ಧಾರ ಮಾಡುವುದಕ್ಕಾಗುತ್ತ... ? ಬರಲಿ ಯಾವಾಗ ಬರ್‍ತಾನೊ ನೋಡೆ ಬಿಡೋಣಾ. ಇಡಿಯಟ್ ... ನನ್ನ ಹಟಾನೆ ಗೆಲ್ಲಬೇಕು. ಮುಖವನ್ನು ಗಂಟಿಕ್ಕಿಕೊಂಡು ತನಗೆ ತಾನೆ ಹೇಳಿಕೊಳ್ಳುತ್ತಿದ್ದಳು.

ಕೃತಿಕಾ ತನ್ನ ಗೆಳತಿಯರಿಗೆ ಏನೂ ಹೇಳಬೇಕೊ ಅರ್ಥವಾಗುತ್ತಿಲ್ಲ . ಅಮರನಾಥ, ಕೃತಿಕಾಳ ನರ್ಸಿಂಗ್‌ಹೋಂನಲ್ಲಿ ಕೆಲಸ ಮಾಡಬೇಕು. ಅದು ಬೇಡವೆಂದರೆ ಬೇರೆ ಎಲ್ಲಾದರು ಪ್ರಾಕ್ಟೀಸು ಮಾಡಿಕೊಂಡು ಅವಳ ಜೊತೆಗಿರಬೇಕು. ಅದು ಇಲ್ಲ ಎಂದರೆ ಯಾವುದಾದರು ಸರಕಾರಿ ಕೆಲಸಕ್ಕೆ ಸೇರಿಕೊಂಡು ಅವಳ ಜೊತೆಗಿರಬೇಕು. ಇದ್ಯಾವುದು ಬೇಡವೆಂದು ಪತ್ನಿಯನ್ನು ಬಿಟ್ಟು ಬಡವರ ಸೇವೆ ಮಾಡುವುದೆಂದರೆ ಹೇಗೆ ... ? ಹೋಗಲಿ ಅದನ್ನು ಬೆಂಗಳೂರಿನಲ್ಲಿ ಇದ್ದುಕೊಂಡೆ ಮಾಡಬಹುದಲ್ಲ ... ? ಅಷ್ಟಕ್ಕೆ ಕೃತಿಕಾಳನ್ನು ಯಾಕೆ ಮದುವೆಯಾಗಬೇಕಿತ್ತು ... ?

ಎಲ್ಲರೂ ಹೀಗೆ ಏನೇನೊ ಹೇಳುತ್ತಿದ್ದರು. ಈಗ ಉಳಿದಿದ್ದ ದಾರಿ ಎಂದರೆ ಕೃತಿಕಾ ಎಲ್ಲವನ್ನು ತೊರೆದು ಅಮರನಾಥನ ಹಿಂದೆ ಹೋಗಿಬಿಡುವುದು. ಅದನ್ನು ಅವಳು ಮಾಡುತ್ತಾಳೆಯೇ ... ? ಮೊದಲಿನಿಂದಲೂ ಸುಖವಾಗಿ ಬೆಳೆದಿರುವ ಅವಳಿಗೆ ಈ ವಿಷಯವನ್ನು ಹೇಳುವುದು ಕಷ್ಟ. ಎಲ್ಲವನ್ನು ಕಾಲವೆ ನಿರ್ಣಯಿಸುತ್ತದೆ ಎಂದು ಎಲ್ಲರೂ ಸುಮ್ಮನಾದರು.

ಅಮರನಾಥನ ತಂದೆ ತಾಯಿಗೂ ಏನೂ ಮಾಡಬೇಕೊ ಅರ್ಥವಾಗಲಿಲ್ಲ . ಕೃತಿಕಾಳ ತಂದೆ ತಾಯಿಯ ವಿಷಯವು ಅದೇ ಆಗಿತ್ತು. ಎಲ್ಲರೂ ನಿಸ್ಸಾಯಕರಾಗಿದ್ದರು.

ಈ ನಡುವೆ ಬೆಂಗಳೂರಿನಲ್ಲಿ ನಡೆಯುತ್ತಿದ್ದ ಕೆಲವು ಸಮಾರಂಭಗಳಿಗೆ ಕೃತಿಕಾಗೆ ಆಹ್ವಾನಗಳು ಬರುತ್ತಿದ್ದವು. ಕೃತಿಕಾ ಮೊದ ಮೊದಲು ಯಾವುದೇ ಸಮಾರಂಭಗಳಿಗೂ ಹೋಗಲಿಲ್ಲ . ಅನಂತರ ಕೆಲವು ಸಮಾರಂಭಗಳಿಗೆ ಹೋಗಲೇಬೇಕಾದ ಪರಿಸ್ಥಿತಿಗಳು ಬಂದಾಗ ಹೋಗಬೇಕಾಯಿತು. ಆದರೆ ಅಲ್ಲಿ ಅವಳಿಗೆ ವಿಚಿತ್ರವಾದ ಅನುಭವಗಳು ಆಗತೊಡಗಿದವು. ಕೆಲವು ಮಹಿಳೆಯರು ಅವಳನ್ನು ದೂರದಿಂದಲೇ ಕಣ್ಣುಗಳಲ್ಲಿ ತಿವಿಯುವಂತೆ ನೋಡುತ್ತ ಗುಸುಗುಸು ಮಾತನಾಡಿಕೊಳ್ಳುತ್ತಿದ್ದರು. ಕೆಲವು ಪರಿಚಿತರಾದ ಗಂಡಸರ ಜೊತೆಗೆ ಮಾತನಾಡುವಾಗ ಅವರ ಪತ್ನಿಯರು ಅವರನ್ನು ಕೃತಿಕಾ ಜೊತೆಗೆ ಮಾತನಾಡದಂತೆ ನೋಡಿಕೊಳ್ಳತೊಡಗಿದರು. ಕೆಲವರಂತು ಗಂಡನ ಬಿಟ್ಟು ಬಿಟ್ಟಿದ್ದಾಳಂತೆ ಎಂದು ಅವಳಿಗೆ ಕೇಳಿಸುವಂತೆ ಮಾತನಾಡುತ್ತಿದ್ದರು. ಕೃತಿಕಾಗೆ ಮೊದಲು ಏನೂ ಅರ್ಥವಾಗಲಿಲ್ಲ . ಅನಂತರ ಅವಳಿಗೆ ತೀರ ಅವಮಾನವಾಗಿ ಯಾರಿಗೂ ಹೇಳದೆ ದುಃಖದಿಂದ ಹಿಂದಿರಿಗಿ ಬಂದುಬಿಟ್ಟಿದ್ದಳು.

ಎಲ್ಲಾ ಮಹಿಳೆಯರು ಮೈತುಂಬಾ ಒಡವೆ ವಸ್ತ್ರಗಳನ್ನು ಏರಿಕೊಂಡು ಗಂಡಂದಿರ ಜೊತೆಗೆ ನೆರಳಿನಂತೆ ಓಡಾಡುತ್ತಿದ್ದರು. ಮದುವೆಯಾದ ಮೇಲೆ ಮಹಿಳೆಯರ ನಡುವಳಿಕೆ ಈಗೆಲ್ಲ ಬದಲಾಗುತ್ತದೆಯೆ ಎಂದುಕೊಂಡಳು ಕೃತಿಕಾ. ಎಲ್ಲವೂ ಅಮರನಾಥನಿಂದಲೆ ಇನ್ನು ಮೇಲೆ ತನ್ನ ಜೀವನದಲ್ಲಿ ಯಾವುದೇ ಸಭೆ ಸಮಾರಂಭಗಳಿಗೆ ಒಬ್ಬಳೇ ಹೋಗಬಾರದೆಂದು ತೀರ್ಮಾನಿಸಿಕೊಂಡಳು.

* * *

ನಿದ್ದೆ ಎಚ್ಚರದೊಂದಿಗೆ ಬೆಳಕಿನ ಕಿರಣಗಳು ಮೂಡಣದಲ್ಲಿ ಕಾಣಿಸಿಕೊಂಡಿದ್ದವು. ರಾತ್ರಿಯಲ್ಲಿ ತಂಪೇರಿದ ಅರಣ್ಯದ ನಡುವೆ ತಣ್ಣಗಾಗಿ ಹೋಗಿದ್ದ ಅಮರನಾಥ ಚಳಿಗೆ ಗಡಗಡನೆ ನಡುಗಿಹೋಗಿದ್ದ . ಬೆಳಕಿನ ಕಿರಣಗಳು ಕಾಣಿಸಿಕೊಂಡಿದ್ದೆ ಅಮರನಾಥ ಬದುಕುಳಿದವನಂತೆ ಮರದ ಕೆಳಕ್ಕೆ ನೋಡಿದ. ಕ್ಯಾತ ಅಲ್ಲಿ ಕಾಣಿಸಲಿಲ್ಲ . ''ಬೆಳಗ್ಗೆಯೆ ಎಲ್ಲಿಗೆ ಎದ್ದು ಹೋಗಿದ್ದಾನೊ ಏನೊ ...?' ಅಮರನಾಥ ಗೊಣಗುತ್ತ ಮರದಿಂದ ಕೆಳಕ್ಕೆ ಇಳಿಯತೊಡಗಿದ. ಅಷ್ಟರಲ್ಲಿ ಪೊದೆಗಳ ಒಳಗಿಂದ ಹೊರಗೆ ಬಂದು ಪ್ರತ್ಯಕ್ಷನಾದ ಕ್ಯಾತನೊಂದಿಗೆ ಅಮರನಾಥ ಊರು ಸೇರಿಕೊಂಡ.

ಅಮರನಾಥ ಈಗೀಗ ವಾರಕ್ಕೊಂದು ದಿನ ರಾತ್ರಿ ಕಾಡಿನಲ್ಲಿ ಕಾಲ ಕಳೆಯುತ್ತಿದ್ದ . ಉಳಿದ ಆರು ದಿನಗಳು ಆರು ಹಳ್ಳಿಗಳಿಗೆ ತಲುಪಿ ರೋಗಿಗಳನ್ನು ಪರೀಕ್ಷಿಸಿ ಔಷಧಿಗಳನ್ನು ಕೊಡುತ್ತಿದ್ದ. ಈಗ ಅಮರನಾಥನ ವಿಳಾಸಕ್ಕೆ ಬೆಂಗಳೂರು ಮತ್ತಿತರ ಪಟ್ಟಣಗಳಿಂದ ರೆಡ್‌ಕ್ರಾಸ್ ಸಂಸ್ಥೆ, ರೋಟರಿ ಸಂಸ್ಥೆಗಳಿಂದ ಇನ್ನಿತರ ಸಂಘ ಸಂಸ್ಥೆಗಳಿಂದ ಸಾಕಷ್ಟು ಔಷಧಿಗಳು ಬರುತ್ತಿದ್ದವು. ಕೆಲವು ಔಷಧಿ ಕಂಪನಿಗಳು ಸ್ಯಾಂಪಲ್ ಔಷಧಿಗಳನ್ನು ಕಳುಹಿಸಿಕೊಡುತ್ತಿದ್ದವು.

ಅಮರನಾಥ ಸ್ಥಳೀಯ ಪಂಚಾಯಿತಿ ಮುಖ್ಯಸ್ಥ ಮತ್ತು ಜನರ ಮೂಲಕ ಮೇಲಿನ ಎಲ್ಲಾ ಸಂಸ್ಥೆಗಳಿಗೂ ಪತ್ರಗಳನ್ನು ಕಳುಹಿಸಿ ಔಷಧಿಗಳನ್ನು ತರಿಸಿಕೊಳ್ಳಲು ಏರ್ಪಾಡು ಮಾಡಿದ್ದ . ಒಂದೊಂದು ಸಲ ಕಣ್ಣು ತಜ್ಞ , ಹೃದಯ ತಜ್ಞರನ್ನು ತಾನಿರುವ ಸ್ಥಳಕ್ಕೆ ಕರೆದುಕೊಂಡು ಬಂದು ರೋಗಿಗಳ ತಪಾಸಣೆ ನಡೆಸುತ್ತಿದ್ದ.

ಆ ಸುತ್ತಮುತ್ತಲಿದ್ದ ಪ್ರತಿಯೊಂದು ಹಳ್ಳಿಯಲ್ಲೂ ಕೆಲವು ಯುವಕರು ಮತ್ತು ಯುವತಿಯರನ್ನು ಒಟ್ಟುಗೂಡಿಸಿ ಅವರ ಹಳ್ಳಿ ಮತ್ತು ಗುಡಿಸಿಲುಗಳ ಸುತ್ತಲು ನೈರ್ಮಲ್ಯ ಕಾಪಾಡಿಕೊಳ್ಳುವ ಬಗ್ಗೆ ಅಮರನಾಥ ತಿಳಿಹೇಳಿದ್ದ . ಇದರಿಂದ ಎಲ್ಲಾ ಹಳ್ಳಿಗಳ ಜನರು ಅಮರನಾಥ ಹಳ್ಳಿಗೆ ಬರುವ ಮುಂಚಿನ ದಿನ ಇಡೀ ಹಳ್ಳಿಯನ್ನು ಗುಡಿಸಿ ಚೊಕ್ಕವಾಗಿಡುತ್ತಿದ್ದರು. ಅಮರನಾಥ ಹಳ್ಳಿ ಹಳ್ಳಿಗೂ ನಡೆದು ಹೋಗಬೇಕಾದರಿಂದ

ಕತ್ತಲಾಗಿಬಿಟ್ಟರೆ ಯಾವುದೊ ಒಂದು ಹಳ್ಳಿಯಲ್ಲಿ ಮಲಗಿಕೊಂಡುಬಿಡುತ್ತಿದ್ದ . ಆ ರಾತ್ರಿ ಇಡೀ ಹಳ್ಳಿಯೆ ಅವನ ಜೊತೆಗಿರುತ್ತಿತ್ತು . ಅಮರನಾಥನಿಗೆ ನಿಜವಾದ ಪ್ರಪಂಚ ಹಳ್ಳಿಯಲ್ಲೆ ಇದೆ ಎನಿಸಿಬಿಡುತ್ತಿತ್ತು . ಅವರ ಹಾಡು, ಕುಣಿತ, ಹಾಸ್ಯ ಜೀವನವನ್ನು ಪ್ರೀತಿಸುವ ಶೈಲಿ, ಒಬ್ಬರಿಗೊಬ್ಬರು ಸಹಾಯಕ್ಕೆ ನಿಲ್ಲುವ ರೀತಿ ಎಲ್ಲವೂ ಅವನನ್ನು ಬೆರಗುಗೊಳಿಸಿಬಿಟ್ಟಿತ್ತು .

ಈಗ ಹಳ್ಳಿಯವರೆಲ್ಲ ಸೇರಿ ಅಮರನಾಥನಿಗೆ ಒಂದು ಗುಡಿಸಿಲು ಕಟ್ಟಿ ಕೊಟ್ಟಿದ್ದಾರೆ. ಅಮರನಾಥ ಯಾರಿಂದಲೂ ಹಣ ತೆಗೆದುಕೊಳ್ಳುತ್ತಿರಲಿಲ್ಲ . ಆದರೆ ತಪಾಸಣೆ ನಡೆಸಿದ ಮೇಲೆ ಪ್ರತಿಯೊಬ್ಬ ರೋಗಿಯಿಂದಲು ಒಂದು ರೂಪಾಯಿಯನ್ನು ಕಡ್ಡಾಯವಾಗಿ ತೆಗೆದುಕೊಳ್ಳುತ್ತಿದ್ದ . ಅದನ್ನು ಬಸ್ಸು ಚಾರ್ಜ್, ಪೋಸ್ಟಲ್ ಖರ್ಚು ಮತ್ತಿತರ ಖರ್ಚುಗಳಿಗೆ ಉಪಯೋಗಿಸುತ್ತಿದ್ದ . ಅದೇ ಎಷ್ಟೋ ಹಣವಾಗಿಬಿಟ್ಟಿತ್ತು . ಅದನ್ನು ಆಗಾಗ ತೀರ ಬಡವರಿಗೆ ದಾನ ಮಾಡಿಬಿಡುತ್ತಿದ್ದ .

ಸುತ್ತಮುತ್ತಲ ಹಳ್ಳಿಯ ಜನ ಅಮರನಾಥನನ್ನು ನೋಡುವುದಕ್ಕೆ ಬರುವಾಗ ಕೈಯಲ್ಲಿ ಏನಾದರೂ ಒಂದು ವಸ್ತುವನ್ನು ಹಿಡಿದುಕೊಂಡು ಬರುತ್ತಿದ್ದರು. ಅದು ಒಂದು ಕೋಳಿ ಆಗಿರಬಹುದು, ರಾಗಿ, ಭತ್ತ , ತರಕಾರಿ , ಹಣ್ಣು , ಹಂಪಲು ಯಾವುದೇ ಆಗಿರಬಹುದು. ಯಾವಾಗಲೂ ಗುಡಿಸಿಲ ತುಂಬಾ ದವಸ ಧಾನ್ಯ ತರಕಾರಿ ಹಣ್ಣು ಹಂಪಲುಗಳು ತುಂಬಿಹೋಗಿರುತ್ತಿದ್ದವು. ಕ್ಯಾತ ತನಗೆ ಬೇಕಾದುದನ್ನು ತೆಗೆದುಕೊಂಡು ಅಡಿಗೆ ಮಾಡುತ್ತಿದ್ದ .

ಹಳ್ಳಿ ಜನರಿಗೆ ಅಮರನಾಥ ನಡೆದಾಡುವ ದೇವರಂತೆ ಕಾಣಿಸತೊಡಗಿದ. ಕೆಲವು ಮಹಿಳೆಯರಂತು ಅಮರನಾಥನ ದೇಹವನ್ನೆಲ್ಲಾ ತಡುವುತ್ತಾ ಕೈಗಳಿಗೂ ಮುಖಕ್ಕೂ ತುಟಿಗಳನ್ನು ಒತ್ತುತ್ತಾ '' ಯಾವ ತಾಯಿ ಹೆತ್ತ ಮಗನೊ. ಅಪ್ಪ ನೀನು ಚೆನ್ನಾಗಿರಬೇಕಪ್ಪ ಬೇಗನೆ ನಿನ್ನ ಹೆಂಡ್ತಿನ ಕರೆದುಕೊಂಡು ಬಂದುಬಿಡು'' ಎನ್ನುತ್ತಿದ್ದರು.

ಇದೆಲ್ಲ ಕೇವಲ ಒಂದು ವರ್ಷದಲ್ಲಿ ನಡೆದುಹೋಗಿದ್ದ ಅದ್ಭುತವಾಗಿತ್ತು . ಅಮರನಾಥ ಈ ಒಂದು ವರ್ಷದಲ್ಲಿ ಹತ್ತಾರು ಪತ್ರಗಳನ್ನು ತನ್ನ ತಂದೆ ತಾಯಿಗೆ ಬರೆದಿದ್ದರು ಅವನು ಬೆಂಗಳೂರಿಗೆ ಮಾತ್ರ ಬರಲಿಲ್ಲ . ಅಮರನಾಥನಿಗೆ ಕೃತಿಕಾ ತನ್ನ ತಂದೆ ತಾಯಿ ತಮ್ಮ ತಂಗಿ ಗೆಳೆಯರನ್ನು ನೋಡುವ ಅದಮ್ಯ ಆಸೆ ಇದ್ದರು ಎಲ್ಲವನ್ನು ತಡೆದುಕೊಂಡು ಕಾಡಿನ ಮಧ್ಯ ಇದ್ದುಬಿಟ್ಟಿದ್ದ .ಒಮ್ಮೆ ಬೆಂಗಳೂರಿಗೆ ಹೋದರೆ ಮತ್ತೆ ಹಿಂದಕ್ಕೆ ಬರಲು ಆಗುತ್ತದೊ ಇಲ್ಲವೊ ಎನ್ನುವ ಭಯ ಅವನನ್ನು ಕಾಡುತ್ತಿತ್ತು . ಜೊತೆಗೆ ಅವನ ತಂದೆ ತಾಯಿ ಕೃತಿಕಾ ಬಿಡುತ್ತಾರೊ ಇಲ್ಲವೊ ಎನ್ನುವ

ಸಂದೇಹವು ಇತ್ತು . ಕೊನೆ ಕೊನೆಗೆ ಬರೆದ ಪತ್ರಗಳಲ್ಲಿ ತಾನಿರುವ ವಿಳಾಸವನ್ನು ಸ್ಪಷ್ಟವಾಗಿ ಕೊಟ್ಟಿದ್ದ .

ಅಮರನಾಥನ ತಾಯಿ ಮತ್ತು ತಂದೆ, ಅಮರನಾಥ ಬೆಂಗಳೂರಿಗೆ ಬರುವಂತೆ ತೋರುತ್ತಿಲ್ಲ ತಾವೆ ಒಂದು ಸಲ ಹೋಗಿ ಅವನನ್ನು ನೋಡಿಕೊಂಡು ಬರುವುದಾಗಿ ನಿಶ್ಚಯಿಸಿಕೊಂಡರು. ಅಮರನಾಥನ ವಿಳಾಸ ತಿಳಿದುಕೊಂಡ ಕೃತಿಕಾ ಮನಸ್ಸಿನಲ್ಲಿ ಒಂದು ಗಟ್ಟಿ ನಿರ್ಧಾರಕ್ಕೆ ಬರತೊಡಗಿದಳು. ಒಂದು ವರ್ಷದಿಂದ ಅಮರನಾಥನ ಮುಖವನ್ನು ನೋಡದೆ, ಪ್ರೀತಿ, ಪ್ರೇಮ, ಸರಸ, ಸಲ್ಲಾಪದ ಮಾತುಗಳಿಲ್ಲದೆ, ಯಾವಾಗಲು ಒಂಟಿಯಾಗಿ ಮಾತನಾಡಿಕೊಳ್ಳುತ್ತಿದ್ದ ಕೃತಿಕಾಗೆ ಜೀವನವೆ ಒಂದು ಶೂನ್ಯದಂತೆ ಕಾಣಿಸತೊಡಗಿತು. ಅವಳ ಮನಸ್ಸು ಯೋಚಿಸುತ್ತ ಯೋಚಿಸುತ್ತ ಹಣ್ಣು ಹಣ್ಣಾಗಿ ತಾನು ಮುದಿಕೆಯಾಗಿ ಹೋಗುತ್ತಿದ್ದೇನೇನೊ ಎನಿಸಿತು.

ಸೀತೆ ಹದಿನಾಲ್ಕು ವರ್ಷಗಳು ವನವಾಸ ಮಾಡಿದ್ದರು, ಜೊತೆಯಲ್ಲಿ ಗಂಡನಾದ ರಾಮನಿದ್ದ . ಆದರೆ ಇಲ್ಲಿ ಕೃತಿಕಾ ಕೇವಲ ಒಂದು ವರ್ಷ ಒಂಟಿಯಾಗಿ ಕಳೆಯುವುದರಲ್ಲಿ ಮುನ್ನೂರು ಅರವತ್ತೈದು ವರ್ಷಗಳ ಮುದುಕಿಯಾದಂತೆ ತೋರುತ್ತಿತ್ತು . ಜೊತೆಗೆ ಈ ಸಮಾಜದಲ್ಲಿ ಮದುವೆಯಾದ ಮೇಲೆ ಪತಿ, ಪತ್ನಿ ಜೊತೆಯಾಗಿರಬೇಕು ಇಲ್ಲವೆಂದರೆ ಮಹಿಳೆಗೆ ಯಾವ ಮರ್ಯಾದೆಯು ಇಲ್ಲ ಎನ್ನುವುದನ್ನು ಕಂಡುಕೊಂಡಿದ್ದಳು. ಗಿಳಿಶಾಸ್ತ್ರದವನು ಹೇಳಿದ ಮಾತುಗಳು ಅವಳಿಗೆ ಆಗಾಗ ಜ್ಞಾಪಕಕ್ಕೆ ಬರುತ್ತಿದ್ದವು.

ಅವನಾದರೂ ಹೇಗಿದ್ದಾನೆ ... ? ಒಂದು ವರ್ಷದಿಂದ ನನ್ನನ್ನು ಬಿಟ್ಟು , ನಿಜವಾಗಿಯೂ ಕಾಡು ಮನುಷ್ಯನೆ ಸರಿ ಇಡಿಯಟ್ ... ನನ್ನ ಕೈಯಿಗೆ ಸಿಗಬೇಕು. ಮುಖ ಮೈಯೆಲ್ಲ ಪರಚಿ ರಕ್ತ ಬರುವಂತೆ ಮಾಡಿಬಿಡುತ್ತೇವೆ. ಅವಳ ದೇಹವೆಲ್ಲ ಕೋಪದಿಂದ ಕಂಪಿಸುತ್ತಿದ್ದು , ಮುಖದ ತುಂಬಾ ರಕ್ತ ತುಂಬಿ ಹೋಗಿ ಕಣ್ಣುಗಳು ಕೆಂಪಗೆ ಉರಿಯುತ್ತಿದ್ದವು. ಈಗ ನಾನು ಏನು ಮಾಡಬೇಕು...? ಅವನೆ ಬರಲಿ ನಾನಂತು ಹೋಗುವುದಿಲ್ಲ ಎಂದುಕೊಂಡಳು ಕೃತಿಕಾ.

ಅಮರನಾಥನ ಪರಿಸ್ಥಿತಿಯೂ ಅದೇ ಆಗಿತ್ತು . ಆದರೆ ತಪ್ಪೆಲ್ಲ ನನ್ನದೆ, ಪಾಪ ! ಅವಳದು ಏನೂ ತಪ್ಪಿಲ್ಲ . ನಾನು ಹೇಳದೆ ಕೇಳದೆ ಹೀಗೆ ಹೇಡಿಯಂತೆ ಬರಬಾರದಿತ್ತು . ಹಿಂದಕ್ಕೆ ಹೋಗಿ ಅವಳ ಮಡಿಲಲ್ಲಿ ಬಿದ್ದುಬಿಡಲೆ ... ? ಅವಳನ್ನು ತಬ್ಬಿಕೊಂಡು ಒಮ್ಮೆಲೆ ಅತ್ತುಬಿಡಲೆ ? ಒಂದು ವರ್ಷದಿಂದ ಮಡುಗಟ್ಟಿರುವ

ದುಃಖವೆಲ್ಲ ಕೆಲವೇ ಕ್ಷಣಗಳಲ್ಲಿ ಹಿಮದ ಬೆಟ್ಟಗಳಂತೆ ಕರಗಿಹೋಗುತ್ತದೆ. ಆದರೆ ನನ್ನ ಆಸೆ ಅಕ್ಷಾಂಶ ಅಲ್ಲಿಗೆ ಮುಗಿದುಹೋಗುತ್ತದೆ. ಮತ್ತೆ ನಿಷ್ಪ್ರಯೋಜಕನಾಗಿಬಿಡುತ್ತೇನೆ. ಅವಳೆ ಬರಲಿ ನೋಡಿಬಿಡೋಣ. ಅಮರನಾಥ ಮುಖವನ್ನು ಗಂಟಿಕ್ಕಿಕೊಂಡು ಕುಳಿತುಕೊಂಡ.

ಅದೊಂದು ದಿನ ಅಮರನಾಥ ಕಾಡಿನ ಮಧ್ಯ ಒಂದು ಗುಡ್ಡದ ಮೇಲೆ ಕುಳಿತುಕೊಂಡು ಬಹಳ ಗಂಭೀರವಾಗಿ ಯೋಚಿಸುತ್ತಿದ್ದಾನೆ. ಒಂದು ವರ್ಷದಿಂದ ಅವನು ಮಾಡಿರುವ ತಪಸ್ಸನ್ನು ನಾಳೆ ಬೆಳಗ್ಗೆ ಕೊನೆಗೊಳಿಸಬೇಕೊ.. ಇಲ್ಲ ಪೂರ್ಣವಾಗಿ ಕೃತಿಕಾಳನ್ನು ಮರೆತುಬಿಡಬೇಕೊ ... ಎನ್ನುವ ವಿಷಯ ಅವನನ್ನು ಛಿದ್ರ ಛಿದ್ರವಾಗಿಸಿಬಿಟ್ಟಿದೆ. ಗಿಳಿ ಶಾಸ್ತ್ರದವನು ಹೇಳಿದ ಮಾತುಗಳು ಅವನಿಗೆ ಆಗಾಗ ಜ್ಞಾಪಕಕ್ಕೆ ಬರುತ್ತಿದ್ದವು.

ಕೃತಿಕಾಗೆ ಮೋಸ ಮಾಡುವುದೆಂದರೆ ಪ್ರೀತಿಗೆ ಬೆಲೆಯೆ ಇರುವುದಿಲ್ಲ. ಇನ್ನು ಭೂಮಿಯ ಮೇಲೆ ಒಬ್ಬರನ್ನೊಬ್ಬರು ಪ್ರೀತಿಸುವುದಕ್ಕೆ ಅರ್ಥವೆ ಇಲ್ಲ. ಅವಳಾದರು ನನ್ನನ್ನು ಅರ್ಥಮಾಡಿಕೊಳ್ಳುವುದು ಬೇಡವೆ ...? ಅವಳಿಗೆ ಹಣ ಐಶ್ವರ್ಯವೆ ನನಗಿಂತ ಹೆಚ್ಚಾದ್ದವೆ ...? ಆದರೂ ಅವಳು ನನ್ನನ್ನು ಪ್ರೀತಿಸಿ ಮದುವೆ ಮಾಡಿಕೊಂಡಿದ್ದಾಳೆ. ನಾನು ಸೋತರು ಪರವಾಗಿಲ್ಲ, ಒಡೆದ ಮನಸುಗಳು ಒಂದಾಗಬೇಕು... ವಿರಹ, ವೇದನೆಗಳು ಕೊನೆಗೊಳ್ಳಬೇಕು. ಅವಳು, ನಾನು ಒಂದು ಕಡೆ ಕುಳಿತುಕೊಂಡು ಬೈಯ್ದಾಡಬೇಕು. ನನ್ನನ್ನು ಅವಳು, ಅವಳನ್ನ ನಾನು ಹೊಡೆದಾಡಬೇಕು. ಹಿತವಾದ ಮಾತುಗಳಲ್ಲಿ ಮಾತನಾಡಿಕೊಳ್ಳಬೇಕು. ಪ್ರೀತಿ ಬಹಳ ದೊಡ್ಡದು. ಬಹುಶಃ ಪ್ರೀತಿಗಿಂತ ದೊಡ್ಡದು ಪ್ರಪಂಚದಲ್ಲಿ ಇನ್ನೊಂದಿಲ್ಲ. ಅವನ ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಸುರಿಯುತ್ತಿದೆ.

ಯಾರೊ ಅವನನ್ನು ಹಿಂದಿನಿಂದ ತಬ್ಬಿಕೊಂಡಂತಾಯಿತು ... ? ಬೆಚ್ಚಿ ಬಿದ್ದ ಅಮರನಾಥ ಸರಕ್ಕನೆ ಹಿಂದಕ್ಕೆ ತಿರುಗಿ ನೋಡುತ್ತಾನೆ ... ? ಕೃತಿಕಾ. ಇದು ಕನಸೊ ನನಸೊ ಕೆಲವು ಕ್ಷಣಗಳು ಅಮರನಾಥ ಮಾತುಗಳನ್ನು ಕಳೆದುಕೊಂಡುಬಿಟ್ಟ. ಅದೇ ಮೂಗು ... ಅದೇ ಕಣ್ಣುಗಳು ... ಅದೇ ಕೆನ್ನೆಗಳು ... ಅದೇ ದೇಹ ... ಆ ದೇಹ ಬಣ್ಣ ಅವಳೆ ಕೃತಿಕಾ . ಕೃತಿಕಾ, ಅಮರನಾಥನ ನೋಟವನ್ನು ಎದುರಿಸಲಾಗದೆ ಮುಖವನ್ನು ಅವನ ಎದೆಯಲ್ಲಿ ಬಚ್ಚಿಟ್ಟುಕೊಂಡುಬಿಟ್ಟಳು. ಅವಳ ಕಣ್ಣುಗಳು ಕಣ್ಣೀರಿನಿಂದ ಒದ್ದೆಯಾಗಿ ಹೋಗಿದ್ದವು.

ಕೆಲವೇ ಕ್ಷಣಗಳು ... ಎದ್ದು ನಿಂತ ಕೃತಿಕಾ ಅವನ ಬಟ್ಟೆಗಳನ್ನೆಲ್ಲ ಎಳೆದಾಡಿ ಮುಖ ಮೈಯನ್ನೆಲ್ಲ ಪರಚುತ್ತಾ ಬಾಯಿಗೆ ಬಂದ ಪದಗಳನ್ನೆಲ್ಲ ಅವನ ಮೇಲೆ

ಹರಿಹಾಯ್ದಳು. ಅಮರನಾಥ ಗುಂಡುಕಲ್ಲಿನಂತೆ ಹಾಗೆ ನಿಂತಿದ್ದಾನೆ. ಅವನ ಕಣ್ಣುಗಳಲ್ಲಿ ಇನ್ನಷ್ಟು ಕಣ್ಣೀರು ಹರಿಯುತ್ತಿತ್ತು. ಇವರಿಬ್ಬರ ಪ್ರೀತಿಯ ಜಗಳ ನೋಡಲಾರದ ಗಾಳಿ, ಮರಗಳ ಮೇಲೆ ದಾಳಿ ಮಾಡುತ್ತ ಹೂವುಗಳನ್ನು ಉದರಿಸತೊಡಗಿತು. ಅಮರನಾಥ ಮತ್ತು ಕೃತಿಕಾ ಒಂದು ವರ್ಷದ ನಂತರ ಮೊದಲ ಬಾರಿಗೆ ಆ ಬೆಟ್ಟಗಳ ಮೇಲೆ ನಿಂತುಕೊಂಡು ಒಂದು ದೀರ್ಘವಾದ ಚುಂಬನದಲ್ಲಿ ಲೀನವಾಗಿ ಹೋಗಿದ್ದಾರೆ. ಅದು ಅವರ ದೇಹ ಆತ್ಮಗಳ ಹೊಕ್ಕಿ ಪ್ರೀತಿಯಲ್ಲಿ ಮುಳುಗಿ ಒದ್ದೆಯಾಗುತ್ತಿದೆ.

ಕ್ಯಾತ ಅವರಿಬ್ಬರನ್ನು ನೋಡಿ ನಾಚಿಕೊಳ್ಳುತ್ತ ಮರಗಳ ಮರೆಯಲ್ಲಿ ಬಿರುಬಿರನೆ ತಪ್ಪಲು ಇಳಿದು ಹೋಗುತ್ತಿದ್ದಾನೆ. ಅವನ ಜೊತೆಯಲ್ಲಿ ಕೃತಿಕಾಗೆ ದಾರಿ ತೋರಿಸಲು ಬಂದಿದ್ದ ಮಾದನು ಇದ್ದಾನೆ. ಮಾದ "ಲೊ ಕ್ಯಾತ ಅವಮ್ಮ ಡಾಕ್ಟರು ಪತ್ನಿಯಂತೆ... ಅವಮ್ಮಾನು ಡಾಕ್ಟರಂತೆ ... ಇನ್ನು ಮೇಲೆ ಇಬ್ಬರೂ ಇಲ್ಲೆ ಇದ್ದು ಬಿಡ್ತಾರಂತೆ. ಸಾಮಾನೆಲ್ಲ ತಂದುಬಿಟ್ಟಿದ್ದಾರೆ ..." ಹೀಗೆ ಕೃತಿಕಾ ಹಳ್ಳಿಗೆ ಬಂದಿದ್ದು ... ಅಮರನಾಥನಿರುವ ಗುಡಿಸಿಲಲ್ಲಿ ಸಾಮಾನುಗಳನ್ನಿಟ್ಟಿದ್ದು ... ಅನಂತರ ಅಮರನಾಥನಿರುವ ತಾಣ ತೋರಿಸುವಂತೆ ಮಾದನನ್ನು ಕರೆದುಕೊಂಡು ಬಂದಿದ್ದು... ದಾರಿಯಲ್ಲಿ ಎಲ್ಲವನ್ನು ಕೇಳಿ ತಿಳಿದು ಕೊಂಡಿದ್ದು, ಎಲ್ಲವನ್ನು ವಿವರಿಸತೊಡಗಿದ.

ಕೃತಿಕಾ ನರ್ಸಿಂಗ್‌ಹೋಂನ್ನು ಮಾರಿ ಬಂದ ಹಣವನ್ನೆಲ್ಲ ಒಂದು ಬ್ಯಾಂಕಿನಲ್ಲಿ ಡಿಪಾಸಿಟ್ ಮಾಡಿ ಅದರಲ್ಲಿ ಬರುವ ಬಡ್ಡಿಯನ್ನು ತಿಂಗಳು ತಿಂಗಳು ಅಮರನಾಥನಿಗಿರುವ ವಿಳಾಸಕ್ಕೆ ಕಳುಹಿಸುವಂತೆ ವಿಳಾಸಕೊಟ್ಟು ಬಂದಿದ್ದಳು. ಆ ಹಣದಲ್ಲಿ ಹಳ್ಳಿಯ ಜನರಿಗೆ ಔಷಧಿಗಳನ್ನು ಕೊಡಿಸುತ್ತ ಅವರ ಸೇವೆ ಮಾಡುವುದಾಗಿ ನಿಶ್ಚಯಿಸಿದ್ದಳು... ಅಮರನಾಥ ಮತ್ತು ಕೃತಿಕಾ ಸಾಯಂಕಾಲ ಆಗುವುದರೊಳಗೆ ಕಾಡು ಕಣಿವೆಗಳನ್ನು ದಾಟಿ ಗುಡಿಸಿಲು ತಲುಪಿದರು. ಅಷ್ಟರಲ್ಲಿ ಕ್ಯಾತ ಒಳ್ಳೆ ಅಡಿಗೆ ಮಾಡಿ ಅವರಿಗಾಗಿ ಕಾಯುತ್ತಿದ್ದ . ಅಮರನಾಥ ಮತ್ತು ಕೃತಿಕಾ ಗುಡಿಸಿಲು ಒಳಗೆ ಬಂದಿದ್ದೆ."ಸಾ ... ಅಡಿಗೆ ತಯಾರಾಗಿದೆ. ನಾನು ಬೆಳಗ್ಗೆ ಬರ್‍ತೀನಿ" ಎಂದಿದ್ದೆ ಅವರ ಉತ್ತರಕ್ಕೂ ಕಾಯದೆ ಹೊರಟುಹೋದ.

ಕೃತಿಕಾ ತನ್ನ ಪೆಟ್ಟಿಗೆಯಲ್ಲಿದ್ದ ಮದರ್ ತೆರೆಸಾ ಫೋಟೋ ತೆಗೆದು ಗೋಡೆಯಲ್ಲಿದ್ದ ಮೊಳೆಗೆ ನೇತಾಕಿದಳು. ಅಮರನಾಥ, ಕೃತಿಕಾ ಹತ್ತಿರಕ್ಕೆ ಹೋಗಿ ಅವಳನ್ನು ತಬ್ಬಿಕೊಂಡ. "ಬಾಗಿಲು ತೆಗೆದೆ ಇದೆ " ಕೃತಿಕಾ ನಗುತ್ತಾ ಹೇಳಿದಳು. ಅಮರನಾಥ ಬಾಗಿಲು ಮುಚ್ಚಿ ಮತ್ತೆ ಕೃತಿಕಾ ಹತ್ತಿರಕ್ಕೆ ಬಂದ.





ಎಂ.ವೆಂಕಟಸ್ವಾಮಿ
ವೃತ್ತಿಯಿಂದ ಭೂ ವಿಜ್ಞಾನಿ.
ಇವರ ಹಲವು ಕತೆ, ಕಾದಂಬರಿ,
ಪ್ರವಾಸ ಕಥನ, ಕವನ ಸಂಕಲನ,
ವೈಚಾರಿಕ ಹಾಗೂ ವಿಜ್ಞಾನ ಕೃತಿಗಳು
ಪ್ರಕಟವಾಗಿವೆ.
ಇಂದಿನ ಯುವ ಜನಾಂಗ
ಒಂದು ಕಡೆ ಆಧುನಿಕ ತಂತ್ರಜ್ಞಾನದ
ಸ್ಪರ್ದೆಯೊಂದಿಗೆ ಶರವೇಗದಲ್ಲಿ ಸಾಗುತ್ತಿದ್ದರೆ
ಮತ್ತೊಂದು ಕಡೆ ಅವರ ಸಾಮಾಜಿಕ ಮಟ್ಟ
ಅಷ್ಟೇ ವೇಗದಲ್ಲಿ ಕುಸಿಯುತ್ತಿದೆ.
ವೆಂಕಟಸ್ವಾಮಿಯವರು ಈಗಾಗಲೇ
ಮೂಡಲ ಮರೆಯಲ್ಲಿ , ಚಂದ್ರನಿಲ್ಲದ ಅಕಾಶ ಮತ್ತು
ರೂಪರಾಶಿಯರು ಕಾದಂಬರಿಗಳನ್ನು
ವಾಸ್ತವ ಸಂಗತಿಗಳಿಗೆ ತೀರಾ ಹತ್ತಿರವಾದ ಪಾತ್ರಗಳಲ್ಲಿ
ಸಾಮಾಜಿಕ ಮೌಲ್ಯಗಳೊಂದಿಗೆ ನೈಜವಾಗಿ ಚಿತ್ರಿಸಿದ್ದಾರೆ.
ಪ್ರಸ್ತುತ 'ನೀ ನಡೆವ ದಾರಿಯಲ್ಲಿ' ಕಾದಂಬರಿ
ಒಂದು ಸುಂದರ ಸಾಮಾಜಿಕ ಕಾದಂಬರಿಯಾಗಿದ್ದು
ಇಲ್ಲಿನ ಪಾತ್ರಗಳು ನಮ್ಮ ನಡುವಿನ ಆದರ್ಶ ವಿದ್ಯಾರ್ಥಿಗಳ
ಕತೆಯಾಗಿದೆ. ಮನ ಕಲಕುವ ಘಟನೆಗಳೊಂದಿಗೆ
ಕೂಡಿರುವ ಈ ಕಾದಂಬರಿ ಒಂದು ಸುಂದರ ಓದವಾಗಿದೆ.

- ಜರಗನಹಳ್ಳಿ ಶಿವಶಂಕರ್



ಪಾಂಚಜನ್ಯ ಪಬ್ಲಿಕೇಷನ್ಸ್
134, 8 ನೇ ಕ್ರಾಸ್, ಗೋವಿಂದರಾಜನಗರ
ಬೆಂಗಳೂರು - 560040